ಶ್ರೀ

# ರಾಘವೇಂದ್ರ ವಿಜಯ

## (ವಿಸ್ತಾರ)

**ತಿದ್ದಿದ ದ್ವಿತೀಯ ಮುದ್ರಣ**

ಇದರಲ್ಲಿ ಶ್ರೀರಾಘವೇಂದ್ರಸ್ವಾಮಿಗಳ ಚರಿತ್ರೆಯಲ್ಲದೆ,
ಈ ಪೀಳಿಗೆಯಲ್ಲಿ ಪ್ರಸಿದ್ಧರಾದ ಸ್ವಾಮಿಗಳವರ ಚರಿತ್ರೆಗಳೂ ಬಂದಿವೆ.

ಲೇಖಕರು :

**ಕೀರ್ತನಾಚಾರ್ಯ, ಬೇಲೂರು ಕೇಶವದಾಸರು**

---

ಅ. ಖ. ಬೇರೆ]     ೧೯೪೨     [ಬೆಲೆ ೧-೦-೦

# ವಿಷಯಾನುಕ್ರಮಣಿಕೆ

# ಶುದ್ಧ ಪತ್ರಿಕಾ

ಮುದ್ರಣಾವಸರದಲ್ಲಿ ದೃಷ್ಟಿಗೋಚರವಾಗದೆ ನಿಂತ- ಅಪಾರ್ಥಕೊಡುವ ತಪ್ಪುಗಳ ಪಟ್ಟಿಯನ್ನು ಮಾತ್ರ ಇಲ್ಲಿ ಕೊಡಲಾಗಿದೆ,

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೫೫ | ೯ | ಅಚ್ಯುತರಾಜನ | ಅಚ್ಯುತರಾಜನು |
| ೫೬ | ೧೯ | ಪಾಂಡಿತ | ಪಾಂಡಿತ್ಯ |
| ೬೨ | ೧೪ | ತತಮುಸಿಯು | ತತ್ವಮುಸಿಯು |
| ೯೬ | ೩ | ಪೂಜೆಯಿರದ | ಪೂಜೆಯಿಂದ । |
| ೯೭ | ೧೬ | ಅವರು | ಇವರು |
| ೧೦೨ | ೧ | ಮಾವನ | ಮಾನವ |
| ೧೦೪ | ೮ | ಅವನು | ಅವನ |
| ೧೧೧ | ೩ | ದೇಪಾಲಯ | ದೇವಾಲಯ |
| ೧೧೮ | ೧೭ | ಯೋಚಿಸಿದರು | ಯೋಚಿಸದಿರು |
| ೧೨೨ | ೧೭ | ಕುಮಾರವ | ಕುಮಾರನ |
| ೧೩೫ | ೧೦ | ಶಿರಸ್ಸ್ಯಶಂತೀ | ಶಿರಸ್ಸ್ಯಶಂತೀ |
| ೧೪೫ | ೨೪ | ಅಷ್ಟಕವನು | ಅಷ್ಟಕವನ್ನು |
| ೧೪೬ | ೧೧ | ಪಾರಂಗತಾಃ | ಪಾರಂಗತಃ |
| ೧೪೬ | ೧೯ | ಪಾದಕದ್ವಯಚರಃ | ಪಾದುಕದ್ವಯುಚರಃ |
| ೧೪೮ | ೧೨ | ಮೂವತ್ತೂ | ಮೂವತ್ತು |
| ೧೪೯ | ೧೬ | Shortriem | Shrotriam |
| ೧೬೪ | ೩ | ಪೂಜೆಯುಗೊಂಬು | ಪೂಜೆಯುಗೊಂಬ |
| ೧೬೬ | ೯ | ವಿಠಲನಿಂದ | ವಿಠಲ |
| ೧೬೯ | ೨೦ | ವಿರಿಂಚ | ವಿರಿಂಚಿ |

# ಒಂದು ಮಾತು

ಪ್ರಪಂಚದ ಯಾವ ದೇಶವಾಗಲಿ, ಭಾಷೆಯಾಗಲಿ, ಮುಂದುವರಿಯಲು ಆ ದೇಶದಲ್ಲವತರಿಸಿದ ಸಾಧುಸಂತರ, ಕವೀಶ್ವರರ, ವೀರಪುರುಷರ ಸಂಸ್ಕೃತಿಗಳು ಕಾರಣವಾಗಿರುವುವು. ಪಾಶ್ಚಾತ್ಯರ ಉನ್ನತಿಗೂ ಭಾರತೀಯರ ಅವನತಿಗೂ ಇದೊಂದರ ಭಾವಾಭಾವವೇ ಕಾರಣವೆಂದು ಹೇಳಬೇಕು. ಪಾಶ್ಚಾತ್ಯರು ತಮ್ಮಲ್ಲವತರಿಸಿದ ಗುಣಿಗಳ ಗುಣಗಳನ್ನಾದರ್ಶವಾಗಿಟ್ಟುಕೊಂಡು, ಅವರ ಸ್ಮಾರಕ ಮಂದಿರಗಳನ್ನು ಕಟ್ಟಿ, ಭಾವಚಿತ್ರಗಳನ್ನು ಹರಡಿ, ಅವರ ಚರಿತ್ರೆಗಳನ್ನು ಪ್ರಚುರಿಸಿ, ತಮ್ಮ ಬಾಲಕರಿಗೆ ಪಠ್ಯಪುಸ್ತಕಗಳನ್ನಾಗಿ ಶಾಲೆಗಳಲ್ಲುಪಯೋಗಿಸುವರು ಈ ವಿಷಯದಲ್ಲಿ ಪ್ರಾಚೀನ ಭಾರತೀಯರೇ ಪಾಶ್ಚಾತ್ಯರಿಗೆ ಮಾರ್ಗದರ್ಶಿಗಳೆಂದು ಭಾರತ ಮಹಾತ್ಮರ ಮೂರ್ತಿಗಳುಳ್ಳ ದೇವಾಲಯಗಳನ್ನೂ ಬೃಂದಾವನಗಳನ್ನೂ ತೋರಿಸಿದರೆ ಆಧುನಿಕ ತರುಣರಿಗೆ ಗೌರವ ಬರುವುದಿಲ್ಲ. ಅದಂತಿರಲಿ ಭರತಖಂಡದಲ್ಲೆಲ್ಲೆಲ್ಲೂ ಅನೇಕ ಮಹಾತ್ಮರ ಅವತಾರರಾಗಿ ಹೋಗಿಹೋಯೆಂಬುದನ್ನು ಎಂತಹ ಸಂಕುಚಿತ ಮನೋಭಾವದ ಪಾಶ್ಚಾತ್ಯನಾದರೂ ಒಪ್ಪಬೇಕು. ಭರತಖಂಡದ ಭಾಷಾ ಪರಿಮಾಣದಿಂದ ನೋಡಿದರೆ ಇತರ ಪ್ರಾಂತ್ಯಗಳಿಗಿಂತ ಕರ್ನಾಟಕದಲ್ಲಿ ಹೆಚ್ಚು ಮಹಾತ್ಮರವತರಿಸಿ ಹೆಚ್ಚು ಕೆಲಸ ಮಾಡಿದಂತೆ ಕಂಡುಬರುವುದು. ಪ್ರಾಚೀನ ಕರ್ನಾಟಕದ ವರ್ಚಸ್ಸು ಸಿಯೂ ಭಾರತದ ಮೇಲಷ್ಟೇ ಅಲ್ಲ, ಪಶ್ಚಿಮದೇಶದಲ್ಲೂ ಅತ್ಯಂತ ಹಿಂದಾಗಿ ಬಾಳಿದ ರೋಮಸಾಮ್ರಾಜ್ಯದೇಶದ (Roman Empire) ವರಿಗೆ ಪ್ರಸರಿಸಿತ್ತೆಂಬುದಕ್ಕೆ, ಕೆಲವು ಕನ್ನಡ ಶಬ್ದಗಳು ಅವರ ಭಾಷೆಯಲ್ಲಿ ಬೆರೆತಿರುವುದು ಉದಾಹರಣೆಗೆ ಸಾಕಾಗಿದೆ.

ಹೀಗಿದ್ದೂ ಕ್ರಿಸ್ತಾಬ್ದದ ಹದಿನೇಳನೇ ಶತಮಾನದಿಂದೀಚೆಗೆ ತಲೆಯೆತ್ತಿದ ನಮ್ಮ ನೆರೆಯ ಮರಾಟಿಗರು, ಅನ್ಯಭಾಷೆಗಳ ಪರಿವರ್ತನದಿಂದ ತಮ್ಮ ಭಾಷಾ ಭಂಡಾರವನ್ನು ತುಂಬುತ್ತಾ, ತಮ್ಮ ಕಾಲಿಗೆ ತಾವೇ ನಮಸ್ಕಾರ ಮಾಡಿಕೊಂಡು, ಭರತಖಂಡದಲ್ಲಿ ಎಲ್ಲಕ್ಕೂ ತಮಗೇ ಅಗ್ರತಾಂಬೂಲ ಬರಬೇಕೆಂದು ವಿಜೃಂಭಿಸುತ್ತಿರುವುದೂ, ಕರ್ನಾಟಕರು ತಮ್ಮ ವೈಭವವೇನಿತ್ತು

ಎಂಬುದನ್ನು ಮರೆತು ನೆರೆಮನೆಯ ದೋಸೆಗೆ ಕಾಯಿಹಾಲು ಕಾಸುತ್ತಾ ಕುಳಿತಿರುವುದೂ ಲಜ್ಜಾಸ್ಪದವಾಗಿದೆ. ಮಹಾರಾಷ್ಟ್ರರ ಭಕ್ತಿವಿಜಯವನ್ನು ನೋಡಿದರೆ ಭಕ್ತರ ಮಹಿಮೆಗಿಂತ ಗ್ರಂಥಕರ್ತನ ಮಹಿಮೆ ದೊಡ್ಡದಾಗಿ ಕಾಣುತ್ತದೆ.

ಪ್ರಾಚೀನ ಕರ್ಣಾಟಕದ ಒಬ್ಬೊಬ್ಬ ಯತಿಗಳ, ಹರಿದಾಸರ, ಕವಿಗಳ, ವೀರಪುರುಷರ ಕೃತಿಗಳೇನೆಂದು ವಿಚಾರಿಸಿ ಸಿಕ್ಕಿದಷ್ಟನ್ನು ಬರೆದಿಟ್ಟರೆ, ಈಗಲೂ ಕರ್ಣಾಟಕದ ಮಹತ್ವವು ನಿರ್ಮತ್ಸರಿಗಳಾದ ಅನ್ಯರಿಗೂ ಉದ್ರೇಕವನ್ನುಂಟುಮಾಡುವುದರಲ್ಲಿ ಸಂಶಯವಿಲ್ಲ.

ಈ ಮಹತ್ಕಾರ್ಯವನ್ನು ಆಮೂಲಾಗ್ರವಾಗಿ ಮತ್ತಾರಾದರೂ ಮಾಡಿದರೆ ಹೆಚ್ಚು ಪ್ರಯೋಜನವಾದೀತೆಂದು ತಟಸ್ಥನಾಗಿದ್ದೆನು. ನನ್ನ ತೀರ್ಥರೂಪರು ಅತ್ಯಂತ ಪ್ರಸಿದ್ಧ ಕೀರ್ತನಕಾರರಾಗಿದ್ದುದು ಮಾತ್ರವಲ್ಲದೆ ಕರ್ಣಾಟಕ ಭಕ್ತರ ಚರಿತ್ರವನೇಕವನ್ನು ತಿಳಿದು ನನಗೆ ಹೇಳುತ್ತಿದ್ದರು. ಅವರಿಂದ ಕೇಳಿದ ನೂರರಲ್ಲೊಂದು ಭಾಗವನ್ನು ಬರೆದಿಡುವ ಶಕ್ತಿ ನನಗಿಲ್ಲದಿದ್ದರೂ ಜ್ಞಾಪಕದಲ್ಲಿದ್ದಷ್ಟನ್ನು ಬರೆಯದಿದ್ದರೆ ದ್ರೋಹಿಯಾಗುವೆನೆಂಬ ಭಯ ಬಾಧಿಸಿತು. ನನ್ನ ಸಂಚಾರದಲ್ಲಿ ಕೀರ್ತನಮಾಡಿದೆಡೆಗಳಲ್ಲೆಲ್ಲಾ ಸ್ನೇಹಿತರು ಬಿಡದೆ ಲೇಖನಿಯನ್ನು ಹಿಡಿಯೆಂದು ಬೆನ್ನುಹತ್ತಿದರು. ಕರ್ಣಾಟಕ ಭಕ್ತರ ಚರಿತ್ರೆಯನ್ನು ಮೊತ್ತವಾಗಿ ಬರೆದಿಡುವ ಶಕ್ತಿಸೌಕರ್ಯಗಳಿಲ್ಲದಿದ್ದರೂ ಅಲ್ಪಾರಂಭವನ್ನಾದರೂ ಮಾಡೋಣವೆಂದು ಯತ್ನಿಸಿರುವೆನು.

ಈ ಗ್ರಂಥಕ್ಕೆ ಮುಖ್ಯವಾಗಿ ಅನೇಕ ಹರಿದಾಸರ ದೇವರನಾಮಗಳೂ, 'ರಾಘವೇಂದ್ರವಿಜಯ' 'ಅಣುರಾಘವೇಂದ್ರವಿಜಯ'ವೆಂಬ ಸಂಸ್ಕೃತ ಗ್ರಂಥಗಳೂ ಸಹಾಯಕವಾದುವು. ಬಳ್ಳಾರಿ ಡಿಸ್ಟ್ರಿಕ್ಟ್ ಗೆಜಿಟೆಯರ್, ಮೆ॥ ಕೃಷ್ಣಸ್ವಾಮಯ್ಯಂಗಾರ್ರವರ ವಿಜಯನಗರದ ಚರಿತ್ರೆಗಳಿಂದಲೂ ಒಂದೆರಡು ವಿಷಯಗಳು ದೊರೆತವು. ಆದರೂ ದೇಶಕಾಲ ನಿರ್ದೇಶವಿಲ್ಲದ ಅನೇಕ ನ್ಯೂನತೆಗಳು ತಪ್ಪಿಲ್ಲ. ರಾಘವೇಂದ್ರರ ಮಹಿಮೆಯನ್ನು ಅವರ ಗ್ರಂಥಾವಲೋಕನದಿಂದ ತಿಳಿಯಬೇಕಲ್ಲದೆ, ಒಂದೆರಡು ಅತಿಮಾನುಷ ಶಕ್ತಿಗಳನ್ನು ವರ್ಣಿಸಿ ಬರೆಯುವುದರಿಂದೇನೂ ಆ ಮಹಾನುಭಾವರನ್ನು ಸರಿಯಾಗಿ ತಿಳಿಸಿದಂತಾಗುವುದಿಲ್ಲ.

ರಾಘವೇಂದ್ರರಿಗೂ ವಾದಿಗಳಿಗೂ ವಾಕ್ಯಾರ್ಥಗಳಾದ ಸಂದರ್ಭದಲ್ಲಿ ವಿಷಯ ವಿವರಣೆ ಇಲ್ಲದಿರುವುದರಿಂದ, ದ್ವೈತಾದ್ವೈತಗಳಿಗೆ ಸ್ವಾಭಾವಿಕವಾಗಿ ವಿವಾದ ಹುಟ್ಟುವ ತತ್ವಮಸಿಯಂಥಾ ವಿಷಯವನ್ನು ರಚನೆಗಾಗಿ ಕಲ್ಪಿಸಿರುವೆನು.

ಅಭಿಜ್ಞರು ವಿಷಯಗಳು ಹಿಂದುಮುಂದಾಗಿದ್ದರೂ, ವಾಗ್ದೋಷಗಳಿದ್ದರೂ ಕ್ಷಮಿಸಿ, ಭಾಷಾಭಿಮಾನದಿಂದ ನನ್ನ ಕಾರ್ಯಕ್ಕೆ ಪ್ರೋತ್ಸಾಹಕೊಟ್ಟರೆ ಕೃತಜ್ಞನಾಗಿರುವೆನು.

ಮೈಸೂರು.
ಶ್ರೀಶಾಲಿವಾಹನ ಶಕ ೧೮೫೨ ನೇ
ಶುಕ್ಲ ಸಂ. ಶ್ರಾವಣ ಶು|| ೧೫
ತಾ|| ೨೦-೮-೨೯.

ಇತಿ,
ಸಜ್ಜನವಿ ಧೇಯ,
**ಬೇಲೂರು ಕೇಶವದಾಸ.**

---

## ದ್ವಿತೀಯ ಮುದ್ರಣದ ಮುನ್ನುಡಿ.

೧೪ ವರ್ಷಗಳ ಹಿಂದೆ ಕರ್ಣಾಟಕ ಭಕ್ತವಿಜಯವೆಂಬ ಗ್ರಂಥರಚನೆ ಮಾಡಬೇಕೆಂದು ಯೋಚನೆ ಹುಟ್ಟಿದಾಗ, ಅಲ್ಪಾರಂಭವಾಗಿರಲೆಂದು ಶ್ರೀ ರಾಘವೇಂದ್ರವಿಜಯವೆಂಬ ೧೦೮ ಪುಟಗಳ ಪುಸ್ತಕವನ್ನು ಬರೆದು, ಆಗ ಶ್ರೀ ಮಠದ ಮಹಾ ಪೀಠವನ್ನಲಂಕರಿಸಿದ್ದ ಶ್ರೀಮತ್ಸುಶೀಲೇಂದ್ರ ತೀರ್ಥ ಶ್ರೀ ಪಾದಂಗಳವರ ಸನ್ನಿಧಿಯಲ್ಲಿ ತಪ್ಪುಗಳಿದ್ದರೆ ತಿದ್ದಿ ಪರಮಾನುಗ್ರಹ ಮಾಡಬೇಕೆಂದು ಓದಿ ತೋರಿಸಿದೆನು. ಶ್ರೀ ಪಾದಂಗಳವರು ಚೆನ್ನಾಗಿದೆ, ಸರಿಯಾಗಿದೆ ; ಎಂದು ಅಪ್ಪಣೆಕೊಡಿಸಿ ಗ್ರಂಥವನ್ನು ಮುದ್ರಣಮಾಡಿಸಿ ಪ್ರಕಟಪಡಿಸೆಂದು ಆಜ್ಞೆಮಾಡಿದರು.

೧೨ ವರ್ಷಗಳ ಹಿಂದೆ ಶಾಲೀವಾಹನ ೧೮೫೨ಕ್ಕೆ ಸಲ್ಲುವ ಶುಕ್ಲ ಸಂ|| ಶ್ರಾವಣ ಶುದ್ಧ ಪೌರ್ಣಿಮಾ ಸಮಯಕ್ಕೆ (೨೦-೮-೨೯) ಸರಿಯಾಗಿ ನನ್ನ ಪರಮ ಮಿತ್ರರೂ ಉದ್ದಾಮ ಕನ್ನಡ ಸಾಹಿತಿಗಳೂ ಆದ ಮ||ರಾ|| ಸುಬೋಧ ರಾಮರಾಯರವರು ನನಗೆ ನೆರವಾಗಿ ಗ್ರಂಥಮುದ್ರಣ ಕಾರ್ಯವನ್ನು ಕೈಕೊಂಡು ೨೦೦೦ ಪ್ರತಿಗಳನ್ನು ಛಾಪಿಸಿ ಪ್ರಕಟಿಸಿ ಸಹಾಯಮಾಡಿದರು. ಒಂದೆರಡು ವರ್ಷಗಳಲ್ಲೇ ಪುಸ್ತಕಗಳು ನಿಖಿಲ ಕರ್ಣಾಟಕದಲ್ಲೂ ಭಕ್ತಜನರ

ಆದರಣೆಗೆ ಪಾತ್ರವಾಗಿ ಮತ್ತೆ ಮತ್ತೆ "ಪುಸ್ತಕಬೇಕು, ಪುಸ್ತಕಬೇಕು" ಎಂಬ ಬೇಡಿಕೆಗೆ ಪ್ರಾರಂಭವಾಯಿತು.

ಆ ಕಾಲವಲ್ಲಿ ನಾನು ಒಂದು ಸಾವಿರ ಪುಟಗಳ ಕರ್ನಾಟಕ ಭಕ್ತ ವಿಜಯವನ್ನು ಎರಡು ಭಾಗಗಳಾಗಿ ಮುದ್ರಣಮಾಡಿಸಿ ಪ್ರಕಟಗೊಳಿಸುವ ಕಾರ್ಯದಲ್ಲಿ ಪ್ರವರ್ತಕನಾಗಿದ್ದುದರಿಂದ, ಶ್ರೀ ರಾಘವೇಂದ್ರವಿಜಯದ ಮುದ್ರಣ ಮಾಡಿಸಲು ಸಾಧ್ಯವಾಗಲಿಲ್ಲ. ಭಕ್ತವಿಜಯ ಪ್ರಥಮ ಭಾಗದ ದ್ವಿತೀಯ ಮುದ್ರಣ ಮಾಡಿಸಿದಾಗ, ಶ್ರೀ ರಾಘವೇಂದ್ರವಿಜಯವನ್ನು ಸಂಕ್ಷೇಪಿಸಿ ಅದರೊಡನೆ ಸೇರಿಸಿ ಪ್ರಕಟಗೊಳಿಸಿದರೂ, ಪ್ರತ್ಯೇಕ ರಾಘವೇಂದ್ರ ವಿಜಯವೇ ಬೇಕು, ಅದು ವಿಸ್ತಾರವಾಗಿ ಬರೆದು ಬರಬೇಕು, ಎಂಬ ಬೇಡಿಕೆ ಬರುವುದು ತಪ್ಪಲಿಲ್ಲ.

ಅಪೇಕ್ಷಿತ ಪ್ರದಾತರೂ ಭಕ್ತಾಗ್ರಗಣ್ಯರೂ ಆದ ಶ್ರೀ ರಾಘವೇಂದ್ರ ಸ್ವಾಮಿಗಳ ಚರಿತ್ರೆಯನ್ನು ಆ ಮಹಾನುಭಾವರ ದಿವ್ಯ ಪೀಠವನ್ನಲಂಕರಿಸಿದ ಇತರ ಮಹಾಪುರುಷರ ಚರಿತ್ರೆಗಳ ಸಹಿತವಾಗಿ ಸಂಗ್ರಹವಾಗಿ ಮುದ್ರಿಸಿ ಕೊಡಬೇಕೆಂದು ಮತ್ತೆ ಸಂಕಲ್ಪಿಸಿದಾಗ, ಪ್ರಪಂಚವನ್ನು ಆವರಿಸಿದ್ದ ಆರ್ಥಿಕ ದುರ್ದೆಶೆಯ ಕೈಚಳಕವು ನನ್ನಮೇಲೇ ಮೊದಲನೆಯದಾಗಿ ಪರಿಣಮಿಸಿದುದ ರಿಂದ ಕಾರ್ಯಾರಂಭಮಾಡುವ ಧೈರ್ಯ ನನಗಾಗಲಿಲ್ಲ.

ಮೂರು ವರ್ಷಗಳ ಹಿಂದೆ ನಾನು ಮಂತ್ರಾಲಯ ಯಾತ್ರಾನಿಮಿತ್ತ ಹೋಗಿದ್ದಾಗ ಈಗ ಮಹಾ ಪೀಠವನ್ನಲಂಕರಿಸಿರುವ ಶ್ರೀಮತ್ಸುಯಮೀಂದ್ರ ತೀರ್ಥ ಶ್ರೀಪಾದಂಗಳವರು ತಮ್ಮ ಪರಮಗುರುಗಳ ಕಾಲದಿಂದ ನಿನ್ನ ಗ್ರಂಥವೇ ಮಾನ್ಯವಾಗಿದೆ, ಯಾತ್ರಾನಿಮಿತ್ತ ಬರುವ ಭಕ್ತರು ನಿನ್ನ ಪುಸ್ತಕ ವನ್ನೇ ಅಪೇಕ್ಷಿಸುತ್ತಾರೆ, ಆದ್ದರಿಂದ ಪುನಃ ಮುದ್ರಣಮಾಡಿಸಿ ಗುರುಗಳ ಸೇವೆಮಾಡಿ ಕೃತಾರ್ಥನಾಗು, ಎಂದು ಅಪ್ಪಣೆಮಾಡಿದರು.

ಆಗಲೂ—ಅನಂತರ ಪ್ರಾಪ್ತವಾದ ನನ್ನ ಹದಿನೆಂಟು ತಿಂಗಳ ದೇಹಾಲಸ್ಯದಿಂದ ಗ್ರಂಥಕಾರ್ಯಕ್ಕೆ ಕೈಹಾಕಲು ಅನುಕೂಲಿಸಲಿಲ್ಲ. ನಾನು ಆರೋಗ್ಯವಂತನಾದದ್ದೂ, ಕಳೆದುಕೊಂಡಿದ್ದ ಸ್ಮರಣಶಕ್ತಿ ಕಂಠಶಕ್ತಿಗಳನ್ನು ಪುನಃ ಸಂಪಾದಿಸಿದ್ದೂ, ಶ್ರೀಗುರುರಾಜರ ಪರಮಾನುಗ್ರಹದಿಂದಲೇ ಆದುದ ರಿಂದ, ನನ್ನ ಕೃತಜ್ಞತೆಯನ್ನು ಸಮರ್ಪಿಸಲು ನಾನು ಮತ್ತೆ ಕಳೆದ ಫಾಲ್ಗುಣ

ಮಾಸದಲ್ಲಿ ಮಂತ್ರಾಲಯ ಯಾತ್ರಾನಿಮಿತ್ತ ಪ್ರಯಾಣಮಾಡಿದೆನು. ಪೀಠಸ್ಥ ಶ್ರೀಪಾದಂಗಳವರು ಕನಿಕರದಿಂದ ನನ್ನ ಯೋಗಕ್ಷೇಮವನ್ನು ವಿಚಾರಿಸಿ, ಅದೇ ಸಮಯದಲ್ಲಿ ನಮ್ಮ ಮೈಸೂರು ಶ್ರೀಮನ್ಮಹಾರಾಜರವರಾದ ಶ್ರೀ ಜಯ ಚಾಮರಾಜ ಒಡೆಯರವರು ಮಂತ್ರಾಲಯ ಯಾತ್ರಾನಿಮಿತ್ತ ದಯಮಾಡಿ ಸಿದ್ದ ಸಂಗತಿಯನ್ನೂ, ಮಹಾಪ್ರಭುಗಳವರಿಗೆ ನಾನು ಬರೆದಿದ್ದ ರಾಘವೇಂದ್ರ ವಿಜಯದ ಕಡೇ ಪ್ರತಿಯನ್ನು ಸಮರ್ಪಿಸಿದ ಸಂಗತಿಯನ್ನೂ ತಿಳಿಸಿ, ಪುನಃ ಒಡನೆಯೇ ಗ್ರಂಥ ಮುದ್ರಣವಾಗಬೇಕೆಂದು ಅಜ್ಞಾಪಿಸಿದರು.

ಆ ಸಮಯದಲ್ಲಿ ನಾನು ಕೈಕೊಂಡಿದ್ದ ಪ್ರವಾಸ ಕಾರ್ಯವನ್ನು ಕ್ಷಿಪ್ರದಲ್ಲಿ ಮುಗಿಸಿ, ಗ್ರಂಥ ವಿಸ್ತರಣೆಗೆ ಬೇಕಾದ ಸಲಕರಣೆಯನ್ನು ಒದಗಿಸಿ ಮಹಾಸ್ವಾಮಿಗಳ ಸನ್ನಿಧಿಗೆ ಗ್ರಂಥ ಮುದ್ರಣಾರಂಭವಾಗಲಿರುವುದೆಂದೂ, ಈ ವರ್ಷದ ಆರಾಧನಾ ಸಮಯಕ್ಕೆ ಪ್ರಸಿದ್ಧವಾಗಲಿರುವುದೆಂದೂ ಬೆಂಗಳೂರು ಮೊಕ್ಕಾಮಿನಿಂದ ಬಿನ್ನೈಹ ಪತ್ರವನ್ನು ವಿಜ್ಞಾಪಿಸಿಕೊಂಡೆನು.

ಶ್ರೀಮತ್ಸುಯಮೀಂದ್ರತೀರ್ಥ ಶ್ರೀಪಾದಂಗಳವರು ಸುಪ್ರೀತರಾಗಿ ಒಡನೆಯೇ ಶ್ರೀಗಂಧ ಪ್ರಸಾದ ಸಹಿತ ನೂರೈವತ್ತು ರೂಪಾಯಿಗಳ ಫಲ ಮಂತ್ರಾಕ್ಷತೆಯನ್ನು ಗ್ರಂಥಕಾರ್ಯಕ್ಕೆ ಸಹಾಯವಾಗಿರಲೆಂದು ಪರಮಾ ನುಗ್ರಹ ಮಾಡಿದರು.

ಯುದ್ಧನಿಮಿತ್ತ ದೇಶದಲ್ಲಿ ಪ್ರಾಪ್ತವಾಗಿರುವ ಅನಿಶ್ಚಿತ ಸ್ಥಿತಿ, ದ್ರವ್ಯಾ ಭಾವ, ಪದಾರ್ಥಗಳ ಮಿತಿಮೀರಿದ ಬೆಲೆ, ಬೆಲೆಕೊಟ್ಟರೂ ಪದಾರ್ಥಗಳು ದೊರೆಯದಿರುವ ದುಸ್ಥಿತಿ ; ಈ ಎಲ್ಲ ಅನಿವಾರ್ಯಗಳಿದ್ದರೂ ಶ್ರೀಗಳವರು ಪರಮಾನುಗ್ರಹಮಾಡಿದ ಸುಮುಹೂರ್ತ ಪ್ರಭಾವದಿಂದ ನನ್ನ ಹಿತಚಿಂತಕ ಮಿತ್ರರುಗಳು ಸಹ ಅಪ್ರಾರ್ಥಿತವಾಗಿ ತಮ್ಮ ಶಕ್ತ್ಯಾನುಸಾರ ಸಹಾಯ ಮಾಡಿದರು. ಆದುದರಿಂದ ಗ್ರಂಥಕಾರ್ಯವು ಸುಗಮವಾಗಿ ಸಕಾಲದಲ್ಲಿ ಮುಗಿಯಲು ಅನುಕೂಲವಾಯಿತು. ಇದೆಲ್ಲವೂ ಶ್ರೀರಾಘವೇಂದ್ರಸ್ವಾಮಿಗಳ ವರಪರಮಾನುಗ್ರಹ.

ಪ್ರಕೃತ ವಿಸ್ತಾರ ಗ್ರಂಥದಲ್ಲಿ ಹಿಂದೆ ಬರೆದ ಗ್ರಂಥವನ್ನೇ ಅನುಸರಿಸಿ ದ್ದರೂ ಮಧ್ಯದಲ್ಲಿ ವಿಜಯೀಂದ್ರರ ಚರಿತ್ರೆ, ಕಡೆಯಲ್ಲಿ ಸುಮತೀಂದ್ರರ ಮತ್ತು ಧೀರೇಂದ್ರರ ಸಂಕ್ಷೇಪ ಚರಿತ್ರೆ, ಬೆಂಗಳೂರು ಮಠದಲ್ಲಿ ನಡೆಯುತ್ತಿ

ರುವ ಅದ್ಭುತ ಮಹಿಮೆಗಳು, ಕೆಲವು ಆವಶ್ಯವಾದ ಸ್ತೋತ್ರ ಪಾಠಗಳು, ಎಲ್ಲವೂ ಸೇರಿಕೊಂಡಿರುವುದರಿಂದ ಗ್ರಂಥದ ಆಕಾರವು ಇಮ್ಮಡಿಯಾಗಿದೆ. ಭಕ್ತರ ನಿರಂತರ ಪಠನೆಗೆ ತಕ್ಕ ಒಂದು ಕೈಪಿಡಿಯಾಗಿ ಪರಿಣಮಿಸಿದೆ.

ಗ್ರಂಥ ಮುದ್ರಣಕಾರರಾದ ಶ್ರೀವರ್ಮಾ ಸುಬೋಧ ರಾಮರಾಯರವರು ಹಿಂದೆ ಶ್ರೀರಾಘವೇಂದ್ರವಿಜಯ ಗ್ರಂಥದ ೨,೦೦೦ ಪ್ರತಿಗಳನ್ನು ಮುದ್ರಣ ಮಾಡಿ ಪ್ರಕಟಿಸಿದುದು ಮಾತ್ರವಲ್ಲದೆ, ಅನಂತರ ನಮ್ಮ ಕರ್ಣಾಟಕ ಭಕ್ತ ವಿಜಯ ಪ್ರಥಮಭಾಗದ ೧,೦೦೦ ಪ್ರತಿಗಳನ್ನೂ, ದ್ವಿತೀಯ ಭಾಗದ ೨,೦೦೦ ಪ್ರತಿಗಳನ್ನೂ ಮತ್ತು ಕನ್ಯಕಾ ಪುರಾಣದ ೧,೦೦೦ ಪ್ರತಿಗಳನ್ನೂ, ಮುದ್ರಿಸಿಕೊಟ್ಟು ತಮ್ಮ ಸುಬೋಧ ಮಾಸಪತ್ರಿಕೆಯಲ್ಲಿ ಪ್ರತಿ ಸಂಚಿಕೆಯಲ್ಲೂ ನಮ್ಮ ಗ್ರಂಥಗಳ ಪ್ರಕಟನೆಯನ್ನು ಉಚಿತವಾಗಿ ಮಾಡುತ್ತಾ ಬಹಳ ಸಹಾಯ ಮಾಡಿದ್ದಾರೆ. ಈ ಸಮಯದಲ್ಲಂತು ನಮ್ಮ "ರಾಘವೇಂದ್ರ ವಿಜಯ ವಿಸ್ತಾರ"ವನ್ನು ಒಂದೇ ತಿಂಗಳಲ್ಲಿ ಮುದ್ರಿಸಿಕೊಟ್ಟು ಮಾಡಿರುವ ಸಹಾಯವು ಅವರ್ಣನೀಯವಾಗಿದೆ.

ಗ್ರಂಥ ವಿಸ್ತಾರಕ್ಕೆ ನಂಜನಗೂಡಿನ ವೇದಮೂರ್ತಿ ವೇಣುಗೋಪಾಲಾ ಚಾರ್ಯರವರೂ, ಗುರುರಾಜಾಚಾರ್ಯರವರೂ, ಕೆಲವು ಐತಿಹಾಸಿಕ ಸಂಗತಿಗಳನ್ನು ಒದಗಿಸಿ ಸಹಾಯ ಮಾಡಿರುತ್ತಾರೆ.

ಕಡೆಯದಾಗಿ ಎಲ್ಲಕ್ಕೂ ಮುಖ್ಯ ಕಾರಣರಾದ ಶ್ರೀಮತ್ಸುಯಮೀಂದ್ರ ತೀರ್ಥ ಶ್ರೀಪಾದಂಗಳವರನ್ನು ಪುನಃ ಪುನಃ ಭಕ್ತಿಯಿಂದ ನಮಿಸಿ, ಸಾಮಗ್ರಿಗಳನ್ನು ಒದಗಿಸಿಕೊಟ್ಟ ಶ್ರೀಪಾದಪುತ್ರರುಗಳನ್ನು ವಂದಿಸಿ, ಮುದ್ರಣಕಾರರ ಉಪಕಾರವನ್ನು ಸ್ಮರಿಸಿ, ಭಕ್ತ ವಾಚಕರನ್ನು ತಮ್ಮ ವ್ಯಾಸಪೀಠದಲ್ಲಿ "ಶ್ರೀರಾಘವೇಂದ್ರ ವಿಜಯ ವಿಸ್ತಾರ"ಕ್ಕೆ ಸ್ಥಾನವನ್ನು ಕೊಡಿರೆಂದು ಕೋರಿಕೊಳ್ಳುತ್ತಾ ವಿರಮಿಸುವೆನು.

ಮೈಸೂರು
ಚಿತ್ರಭಾನು ಸಂ|| ಶ್ರಾವಣ ಬ|| ೨
(ತಾ|| ೨೮-೮-೪೨)

ಇತಿ
ಶ್ರೀಗುರುರಾಘವೇಂದ್ರ ಚರಣಕಮಲದಾಸ
**ಬೇಲೂರು ಕೇಶವದಾಸ.**





ಶ್ರೀಮತ್ಸುಯಮೀಂದ್ರತೀರ್ಥ
ಶ್ರೀಪಾದಂಗಳವರು.



— ಶ್ರೀ ಮೂಲರಾಮೋ ವಿಜಯತೇ —

# ಶ್ರೀ ರಾಘವೇಂದ್ರಸ್ವಾಮಿಗಳ ಚರಿತ್ರೆ.

## ೧. ಜನ್ಮ ವೃತ್ತಾಂತ

"ದೇವರೆಂದರೆ ತಿರುಪತಿಯ ತಿಮ್ಮಪ್ಪನೇ, ಗುರುವೆಂದರೆ ಮಂಚಾಲೆಯ ರಾಘಪ್ಪನೇ" ಎಂಬ ನಾಣ್ಣುಡಿಯು ನಮ್ಮಾ ಚರಿತ್ರ ಪುರುಷರ ಮಹಿಮೆಯನ್ನು ಕೊಂಡಾಡುತ್ತಿರುವುದು ಈ ಮಹನೀಯರು ಗೌತಮ ಗೋತ್ರದವರು. ಇವರ ಪೂರ್ವಿಕರು ಕುಂಭಕೋಣೆಯಲ್ಲಿದ್ದವರೆಂದು ತಿಳಿದುಬರುತ್ತದೆ. ಇವರು ಕ್ರಿ|| ಹದಿಮೂರನೇ ಶತಮಾನದಿಂದಲೂ ಮಾಧ್ವ ವೈಷ್ಣವರು. ಈ ವಂಶದಲ್ಲಿ ಜನಿಸಿದ ಕೃಷ್ಣಭಟ್ಟರೆಂಬುವರು*, ಕುಲಕ್ರಮದಿಂದ ಬಂದಿದ್ದ ವೇದಾಧ್ಯಯನದ ಜೊತೆಗೆ ವೀಣಾವಿದ್ಯೆಯನ್ನೂ ಕಲಿತು ಪ್ರಖ್ಯಾತರಾದರು. ಇವರ ಮಧುರವಾದ ವೀಣಾವಾದನವನ್ನು ಕೇಳಿ, ಆ ಕಾಲದ ಜನರು ಇವರನ್ನು ವೀಣಾ ಕೃಷ್ಣಭಟ್ಟರೆಂಬ ಅಡ್ಡ ಹೆಸರಿನಿಂದ ಕರೆದರು. ಭಟ್ಟರೆಂಬ ಹೆಸರು ಮಾಧ್ವ ಮಂಡಲಿಯಲ್ಲಿ ಅಪೂರ್ವವೆಂದು ತೋರಬಹುದು. ಎರಡು ಶತಮಾನಗಳಿಂದ ಆ ಶಬ್ದದ ರೂಢಿ ತಪ್ಪಿರುವುದು ನಿಜ. ಭಟ್ಟ, ಶಾಸ್ತ್ರಿ, ಜೋಯಿಸ, ಅವಧಾನಿ, ತಂತ್ರಿ, ಆಚಾರ್ಯ ಎಂಬ ಹೆಸರುಗಳು ಆಯಾ ಶಾಸ್ತ್ರಾಧ್ಯಯನಮಾಡಿದ ಬ್ರಾಹ್ಮಣಸಾಮಾನ್ಯಕ್ಕೇ ಬರುವ ಗೌರವ ನಾಮಗಳು.

---

* ಕೃಷ್ಣ ಭಟ್ಟರನ್ನು ಶ್ರೀ|| ರಾಘವೇಂದ್ರರ ಮಾತಾಮಹರ ತಂದೆಯೆಂದು 'ರಾಘವೇಂದ್ರ ವಿಜಯ' ಕರ್ತ ನಾರಾಯಣಾಚಾರ್ಯರ ಗ್ರಂಥಾಧಾರದಿಂದ ಮ|| ರಾ|| ಎಸ್. ಕೃಷ್ಣಸ್ವಾಮೈಯ್ಯಂಗಾರ್, ಎಂ ಎ., ಯವರು ತಮ್ಮ ವಿಜಯನಗರದ ಚರಿತ್ರೆಯಲ್ಲಿ ಬರೆದಿರುವರು. ಆದರೆ ಅದೇ ರಾಘವೇಂದ್ರವಿಜಯದಲ್ಲಿ ಕೃಷ್ಣ ಭಟ್ಟರಿಗೆ ಕನಕಾಚಲಭಟ್ಟರೂ,

ಆಚಾರ್ಯಶಬ್ದವು ಎಲ್ಲಕ್ಕಿಂತಲೂ ಪೂಜ್ಯವಾದುದೆಂದು ಮಾಧ್ವರು ಈಚೆಗೆ ಆ ಹೆಸರನ್ನು ವಿಶೇಷ ರೂಢಿಯಲ್ಲಿಟ್ಟುಕೊಂಡರು.

ಪ್ರಕೃತ ಕೃಷ್ಣಭಟ್ಟರು ವೇದಾಧ್ಯಯನ, ಗಾನವಿದ್ಯೆಗಳಿಂದಲೇ ತೃಪ್ತರಾಗಿರದೆ ಕಾವ್ಯವನ್ನೂ ಶಾಸ್ತ್ರವನ್ನೂ ಚೆನ್ನಾಗಿ ಕಲಿತರು ಆ ಕಾಲದ ಬ್ರಾಹ್ಮಣರಲ್ಲಿ ಸಾಮಾನ್ಯವಾಗಿ ಉಪನಯನವಾದದ್ದು ಮೊದಲ್ಗೊಂಡು ವೇದಾಧ್ಯಯನ ಮಾಡುತ್ತಿದ್ದರು. ಸ್ವಶಾಖೆಯೊಂದಿಗೆ ಅನ್ಯಶಾಖಾ ವೇದಗಳನ್ನು ಕಲಿತು ದ್ವಿವೇದಿ, ತ್ರಿವೇದಿಗಳೆಂಬ ಹೆಸರನ್ನೂ ಪಡೆಯುತ್ತಿದ್ದರು. ಎಲ್ಲೆಲ್ಲೂ ಶಾಸ್ತ್ರಾಭ್ಯಾಸ ನಡೆಯುತ್ತಿತ್ತು. ಕೇವಲ ವಿದ್ಯಾವಿಹೀನನೆನಿಸಿದವನೂ ತನ್ನ ನಿತ್ಯ ನೈಮಿತ್ತಿಕ ಕರ್ಮಗಳಿಗಾಗುವಷ್ಟಾದರೂ ವೇದವನ್ನು ಕಲಿಯದಿರುತ್ತಿರಲಿಲ್ಲ. ಬ್ರಾಹ್ಮಣರ ಮನೆಗಳೇ ಗುರುಕುಲಗಳಾಗಿದ್ದುವು.

ನಮ್ಮ ಕಾಲದಹಾಗೆ ಆಗ ಪ್ರಭುತ್ವದವರಿಟ್ಟದ್ದೇ ವಿದ್ಯಾಶಾಲೆಯೆಂತಲೂ, ಅಲ್ಲಿ ಕಲಿತು ತೇರ್ಗಡೆಯಾದವನೇ ವಿದ್ವಾಂಸನೆಂತಲೂ, ತಿಳಿವ ಸಂಕುಚಿತಬುದ್ಧಿಯಿರಲಿಲ್ಲ ವಿದ್ಯಾಶಾಲೆಗಳೆಂಬ ಹೆಸರಿನ ಪ್ರತ್ಯೇಕ ಕಟ್ಟಡಗಳೂ, ಅಲ್ಲೇ ಸುಖಾಸನಗಳಲ್ಲಿ ಕುಳಿತು ಕಲಿಸುವ ಭಯಂಕರ ಸಂಬಳದ ಅಧ್ಯಾಪಕರೂ, ದೇಶಕ್ಕೂ ಧರ್ಮಕ್ಕೂ ಸಂಬಂಧಪಡದ ಅನ್ಯಭಾಷಾ ಅನ್ಯರ ಚರಿತ್ರೆಗಳ ಪ್ರವಚನವೂ ಆ ಕಾಲದಲ್ಲಿರಲಿಲ್ಲ. ಪೂರ್ವ

---

ಇವರಿಗೆ ತಿಮ್ಮಣ್ಣಭಟ್ಟರೂ ಮಕ್ಕಳಾದರೆಂದೂ, ತಿಮ್ಮಣ್ಣಭಟ್ಟರ ಮೂರನೇ ಮಗನೇ ವೆಂಕಟಭಟ್ಟನೆಂದೂ (ರಾಘವೇಂದ್ರರ ಪೂರ್ವಾಶ್ರಮದ ಹೆಸರು) ಹೇಳಿರುವುದರಿಂದ ಕೃಷ್ಣಭಟ್ಟರನ್ನು ಮಾತಾಮಹ ವಂಶೀಕರೆಂದು ಹೇಳುವ ಕಾರಣವಿಲ್ಲ. ಚರಿತ್ರಪುರುಷರ ಪಿತೃವಂಶವನ್ನು ಹೊಗಳಿ ಹೇಳಬೇಕಾದ ಸಂದರ್ಭದಲ್ಲಿ ಮಾತೃ ವಂಶದ ವರ್ಣನೆಯನ್ನು ಎರಡನೆಯದನ್ನಾಗಿ ಭಾವಿಸಬೇಕಷ್ಟೆ ! ಮ॥ ರಾ॥ ಅಯ್ಯಂಗಾರ್ರವರು ವಿಜಯನಗರದ ಚರಿತ್ರೆಯನ್ನೇ ಬರೆಯುವ ಧ್ಯೇಯದಲ್ಲಿ ರಾಘವೇಂದ್ರರ ವಂಶಾವಳಿಯನ್ನು ವಿಮರ್ಶೆ ಮಾಡಿಲ್ಲ. ಅಲ್ಲದೆ ಈಚೆಗೆ 'ಅಣುರಾಘವೇಂದ್ರವಿಜಯ' ಕರ್ತರೂ ಕೃಷ್ಣಭಟ್ಟರನ್ನು ರಾಘವೇಂದ್ರರ ಪ್ರಪಿತಾಮಹರೆಂದು ಹೇಳಿರುವುದರಿಂದ ಸಂದೇಹಕ್ಕವಕಾಶವಿಲ್ಲ.

ರಾಘವೇಂದ್ರವಿಜಯದ ಕರ್ತ ನಾರಾಯಣಾಚಾರ್ಯರು ಸಂಸ್ಕೃತದಲ್ಲಿ ತಮ್ಮ ಪಾಂಡಿತ್ಯಪ್ರದರ್ಶನಕ್ಕೆ ಗಮನ ಕೊಟ್ಟಷ್ಟು ಚರಿತ್ರೆಯ ಕಡೆ ಕೊಟ್ಟಿಲ್ಲ. ಗ್ರಂಥಶೈಲಿಯೇನೋ ಪ್ರೌಢವಾಗಿದೆ.

ಸಂಪ್ರದಾಯದ ವಿದ್ಯೆಯೆಂದರೆ ವಿದ್ಯಾರ್ಥಿಯ ಇಹಪರಗಳೆರಡಕ್ಕೂ ಸಾಧಕವಾಗಿತ್ತು. ಈಚೆಗೆ ನೂರೈವತ್ತು ವರ್ಷಗಳಿಂದ ದೇಶೀಯ ವಿದ್ಯಾಭ್ಯಾಸವು ಮತ್ತಷ್ಟು ಖಿಲವಾಗಿ ಈಗ ನಾಮಾವಶೇಷವಾಯಿತು. ಕಾಲೇಜುಗಳಲ್ಲಿ ಆಂಗ್ಲಭಾಷೆಯನ್ನು ಕಲಿತು, ಬಿ.ಎ., ಎಂ.ಎ., ಪರೀಕ್ಷೆಕೊಟ್ಟವರನ್ನು ಮಾತ್ರ ಈಗಿನವರು ವಿದ್ಯಾವಂತರೆಂದು (Educated men) ಕರೆಯುವರು. ಪೂರ್ವಪದ್ಧತಿಯಂತೆ ಅಭ್ಯಾಸಮಾಡಿ ಚತುಶ್ಶಾಸ್ತ್ರಪಂಡಿತನಾದರೂ ಅವನನ್ನು ಆ ಹೆಸರಿನಿಂದ ಕರೆಯುವುದು ದುರ್ಲಭ. ಇದೆಲ್ಲಾ ನ್ಯಾಪರಾಧವಲ್ಲವೆ ಪರರದಲ್ಲ ಇರಲಿ. ನಮ್ಮ ಚರಿತ್ರಪುರುಷರ ಪೂರ್ವಿಕರೇನೋ ಶಿಷ್ಟಾಚಾರ ಸಂಪನ್ನರೂ ಪಂಡಿತರೂ ಆಗಿದ್ದರು.

ಕೃಷ್ಣಭಟ್ಟರ ವೀಣಾ ಪಾಂಡಿತ್ಯವು ಎಲ್ಲೆಲ್ಲೂ ಪ್ರಖ್ಯಾತವಾಯಿತು. ಇವರು ವಿಶೇಷವಾಗಿ ದೇಶಾಟನೆ ಮಾಡುತ್ತಾ ಕರ್ಣಾಟಕಕ್ಕೇ ಕೇಂದ್ರ ನಗರವಾಗಿದ್ದ ವಿಜಯನಗರಕ್ಕೆ ಬಂದರು. ಆಗಿನ ಅರಸನಾಗಿದ್ದ ಕೃಷ್ಣದೇವರಾಯನು (೧೫೧೯-೩೦) ಭಟ್ಟರ ಉಭಯ ವಿದ್ಯಾಪಾಂಡಿತ್ಯಕ್ಕೆ ಮೆಚ್ಚಿ, ಆಸ್ಥಾನದಲ್ಲಿ ಮಹಾ ವಿದ್ವಾಂಸರಾಗಿರುವಂತೆ ನಿಲ್ಲಿಸಿಕೊಂಡು ಅವರಿಂದ ವೀಣೆಯನ್ನು ಕಲಿತನು ವಿಜಯನಗರದ ಕರ್ಣಾಟಕರಾಜರು ಮೆಚ್ಚಿದ ಮೇಲೆ ಕೇಳುವುದೇನು! ವಿಶೇಷ ಧನರಾಶಿಯೂ, ಅನರ್ಘ್ಯ ಆಭರಣಗಳೂ ಭಟ್ಟರಿಗೆ ಗುರುಕಾಣಿಕೆಯಾದವು. ಇವರ ಮಗ ಕನಕಾಚಲಭಟ್ಟನು ತಂದೆಯಂತೆಯೇ ಪ್ರಖ್ಯಾತನಾಗಿ ಅನೇಕರಿಗೆ ವೇದವನ್ನೂ ಗಾಯನವನ್ನೂ ಕಲಿಸಿದನು. ಈತನ ಜೀವಿತಕಾಲದ ಕೊನೆಯ ಭಾಗದಲ್ಲಿ ತಿಮ್ಮಣ್ಣಭಟ್ಟನೆಂಬೋರ್ವನೇ ಪುತ್ರನಾದನು. ಕನಕಾಚಲಭಟ್ಟನು ಮಾಡಿದ ವಿದ್ಯಾದಾನ ಮಹಿಮೆಯಿಂದಲೋ ಎಂಬಂತೆ ತಿಮ್ಮಣ್ಣನೂ ದೊಡ್ಡ ಪಂಡಿತನಾದನು.

ಆದರೆ ಈತನ ಕಾಲದಲ್ಲಿ ಮಾತ್ರ ವಿಜಯನಗರದ ಪರಿಸ್ಥಿತಿಗಳು ಕೆಟ್ಟು ದುಷ್ಟಪರಿಣಾಮುಗಳಾಗತೊಡಗಿದವು ಮುಂದಿನ ದುಸ್ಥಿತಿಯನ್ನು ತಿಳಿದ ಅನೇಕ ವಿದ್ವಜ್ಜನರು ಒಬ್ಬೊಬ್ಬರಾಗಿ ಆ ರಾಜಧಾನಿಯನ್ನು ಬಿಟ್ಟು ಬೇರೆ ಬೇರೆ ಕಡೆಗಳಿಗೆ ಹೋಗಿ ನೆಲೆಸಿದರು. ವೀಣಾ ತಿಮ್ಮಣ್ಣಭಟ್ಟನಿಗೂ ಇದೇ ಗತಿಯಾಗಿ ಆತನು ಕಾಂಚೀಪುರದ ಸಮೀಪದಲ್ಲಿರುವ ಭುವನಗಿರಿಯಲ್ಲಿ ನೆಲೆಸಿದನು. ಪಿತೃಪಿತಾಮಹರು ಆರ್ಜಿಸಿದುದನ್ನೆಲ್ಲಾ ಒಂದೊಂದಾಗಿ

ಖರ್ಚುಮಾಡಿ ಜೀವನಮಾಡಿದನು ಈತನ ಪತ್ನಿ ಗೋಪಮ್ಮನಾದರೋ--ನಿಗಮವನ್ನನುಸರಿಸಿದ ಸ್ಮೃತಿಗಳಂತೆಯೂ, ದಿನನಾಥನನ್ನನುಸರಿಸಿದ ಪದ್ಮಿನಿಯಂತೆಯೂ, ವಸಿಷ್ಠನನ್ನನುಸರಿಸಿದ ಅರುಂಧತಿಯಂತೆಯೂ ಪತ್ಯೈಕಪರಾಯಣೆಯಾಗಿದ್ದಳು. ಆದರೂ ಸಂತತಿಯಿಲ್ಲದ ಕ್ಲೇಶವೀ ದಂಪತಿಗಳನ್ನು ಬಾಧಿಸದೆ ಬಿಡಲಿಲ್ಲ. ತಿರುಪತಿಗಾದರೂ ಹೋಗಿ ಶ್ರೀನಿವಾಸನನ್ನು ಸೇವಿಸಬೇಕೆಂದು ಗೋಪಮ್ಮನಿಗೆ ತೋರಿತು. ಈಕೆಯ ಮನೋಭಾವವನ್ನು ತಿಮ್ಮಣ್ಣನೂ ಸಮ್ಮತಿಸಿ, ಪತ್ನಿಯೊಡನೆ ತಿರುಪತಿಗೆ ನಡೆದನು. ಕೆಲವುಕಾಲ ಸೇವಿಸುವುದರಲ್ಲಿ ಶ್ರೀನಿವಾಸನನುಗ್ರಹದಿಂದ ವೆಂಕಮ್ಮನೆಂಬ ಮಗಳೂ, ಗುರುರಾಜನೆಂಬ ಮಗನೂ ಜನಿಸಿದರು. ಮಗನ ಚೌಲೋಪನಯನಗಳಾದವು ಮಧುರೆಯ ಲಕ್ಷ್ಮೀನೃಸಿಂಹಾಚಾರ್ಯನೊಡನೆ ಮಗಳ ವಿವಾಹವೂ ನಡೆಯಿತು. ಇಷ್ಟಾದರೂ ಆ ದಂಪತಿಗಳಿಗೆ ಸಂತತಿಯ ಆಸೆ ತಪ್ಪಲಿಲ್ಲ. ವೆಂಕಮ್ಮನು ಗಂಡನ ಮನೆಗೆ ಹೋದರೆ ಗುರುರಾಜನೊಬ್ಬನೇ ಮನೆಯಲ್ಲಿರಬೇಕಾಗುವುದು ; ಅವನೂ ಪಾಠ ಕಲಿಯುವದಕ್ಕೆ ಹೋದರೆ ಮನೆಯಲ್ಲಾರೂ ಇಲ್ಲದಂತಾಗುವುದು ; ಇನ್ನೊಬ್ಬ ಮಗನಾದರೂ ಜನಿಸಿದರೆ ಚೆನ್ನಾಗಿರುವುದು ಎಂದು ಗಂಡಹೆಂಡರಿಬ್ಬರೂ ಹಲುಬಿದರು. ಗುರುರಾಜನು ಹುಟ್ಟಿದ ಮೇಲೆ ಏಳೆಂಟು ವರ್ಷಗಳಾದರೂ ಸಂತತಿಯಾಗುವ ಲಕ್ಷಣಗಳು ಕಂಡುಬರಲಿಲ್ಲ. ಶ್ರೀನಿವಾಸನನ್ನು ಮತ್ತೆ ಸೇವಿಸಿ, ಆತನನುಗ್ರಹದಿಂದಲೇ ಮಗನನ್ನು ಪಡೆಯಬೇಕೆಂದು ವೆಂಕಟಾಚಲಕ್ಕೆ ಬಂದರು. ಇಬ್ಬರೂ ಒಂದು ವರ್ಷ ಕಟಂಕಟೀ ಪ್ರದಕ್ಷಿಣೆ ನಮಸ್ಕಾರ ಹಾಕಿದರು. ಆಹಾರ ನಿಯಮದಿಂದಲೂ ಭಗವತ್ಸೇವೆಯ ಪ್ರಭಾವದಿಂದಲೂ ಇವರ ದೇಹೇಂದ್ರಿಯಗಳು ಮತ್ತಷ್ಟು ಪವಿತ್ರಗಳಾದವು. ಸ್ವಾಮಿಯನ್ನು ಬಹು ಬಗೆಯಿಂದ ಕೊಂಡಾಡಿದರು. ದೇಹಪೋಷಣೆಯ ಹಂಗನ್ನು ತೊರೆದರು. ದಯಾಮಯನೇ, ಭಕ್ತಬಂಧುವೇ, ಶರಣಾಗತ ಸಂತ್ರಾಣನೇ, ಸರ್ವಜ್ಞನೇ, ಲಕ್ಷ್ಮೀಪತಿಯೇ, ನೀನಾಗಿ ನಮ್ಮಿಷ್ಟವನ್ನು ಸಲ್ಲಿಸಬೇಕಲ್ಲದೆ ನಮ್ಮ ಪ್ರಯತ್ನಗಳೇನೂ ನಡೆಯವೆಂದರು. ಬಾರಿಬಾರಿಗೂ ನಾಮಸ್ಮರಣೆಯಿಂದ ಪುಳಕಿತರಾದರು ಆತ್ಮ ಕರ್ತೃಕವನ್ನು ಮರೆತರು. ದಿನಗಳ ಮೇಲೆ ದಿನಗಳೂ, ತಿಂಗಳಮೇಲೆ ತಿಂಗಳುಗಳೂ

ಕಳೆದವು. ಇಂತಹ ಭಕ್ತರನ್ನು ಸ್ವಾಮಿಯಾದರೂ ಎಷ್ಟುಕಾಲ ಪರೀಕ್ಷಿಸುವದೆಂದಂದುಕೊಂಡೋ ಎಂಬಂತೆ ತಿಮ್ಮಣ್ಣನ ಸ್ವಪ್ನದಲ್ಲಿ ಪ್ರತ್ಯಕ್ಷನಾದನು. —"ಎಲವೋ ಬ್ರಾಹ್ಮಣ! ನಿನ್ನ ಸ್ವಾರ್ಥವು ಸಿದ್ಧಿಸಿತು. ನಿನ್ನ ಸೇವೆಗನುರೂಪನಾದ ಪುತ್ರನೇ ಜನಿಸುವನು ಅವನು ಸಕಲ ವಿದ್ಯಾವಿಶಾರದನೂ ಭಕ್ತಾಗ್ರಣಿಯೂ ಸರ್ವಜ್ಞನೂ ಆಗಿ ನಿನ್ನ ವಂಶದ ಕೀರ್ತಿಯನ್ನು ಆಚಂದ್ರಾರ್ಕವಾಗಿ ನಿಲ್ಲಿಸುವನು; ಚಿಂತಿಸದಿರು" ಎಂದು ವರವಿತ್ತನು. ಭಟ್ಟನು ಸ್ವಪ್ನಾವಸ್ಥೆಯಲ್ಲಿ ದರ್ಶನವಿತ್ತ, ಶಂಖ ಚಕ್ರ ಗದಾ ಪದ್ಮ ಪೀತಾಂಬರ ವನಮಾಲಾಧಾರಿಯಾದ, ಶ್ರೀ ಹರಿಯನ್ನು ಪರಿ ಪರಿಯಾಗಿ ಸ್ತೋತ್ರಮಾಡಿದನು. ಮಂದಹಾಸದಿಂದ ಕರುಣಾಮೃತ ವನ್ನೇ ವರ್ಷಿಸುತ್ತಿದ್ದ ಶ್ರೀನಿವಾಸನು ಅದೃಶನಾಗಲು ಭಟ್ಟನಿಗೆ ಎಚ್ಚರ ವಾಯಿತು. ಜಾಗ್ರತಾವಸ್ಥೆಯಲ್ಲೇನೂ ಕಾಣಲಿಲ್ಲ. ಸ್ತಬ್ಧನಾಗಿ ಏನೇ ನೋ ಯೋಚಿಸಿದನು. ವಿಷಯಗಳನ್ನು ಪರಿಷ್ಕರಿಸಿಕೊಳ್ಳುವುದೇ ದುಸ್ಸಾ ಧ್ಯವಾಯಿತು. ಒಂದರಮೇಲೊಂದು ತರಂಗಗಳಂತೆ ವಿಚಾರಗಳು ಭಾಸ ವಾದುವು. ಎಲ್ಲವನ್ನೂ ಅಡಗಿಸಿಟ್ಟುಕೊಳ್ಳುವುದಕ್ಕೆ ಮನಃಕೋಶವು ಕಿರಿ ಯದಷ್ಟಾಯಿತು. ಒಡನೆಯೇ ಹೆಂಡತಿಯನ್ನೆಬ್ಬಿಸಿ ಸ್ವಪ್ನ ವೃತ್ತಾಂತ ವನ್ನು ಹೇಳಲಾರಂಭಿಸಿದನು. ದೇವರ ನಾಮೋಚ್ಚಾರಣೆಮಾಡುವಷ್ಟ ರಲ್ಲೇ ಆನಂದಬಾಷ್ಪಗಳುದುರಿದುವು ಮಾತು ಹೊರಡದಂತೆ ಕಂಠರೋ ಧವಾಯಿತು. ಮೈಮರೆತು ಸುಮ್ಮನಾದನು. ಮತ್ತೆ ಮನಸ್ಸನ್ನು ಬಿಗಿ ಹಿಡಿದು ಹೇಳತೊಡಗಿದನು. ಈ ವೃತ್ತಾಂತದಿಂದ ಕೋಮಲ ಸ್ವಭಾವದ ಗೋಪಮ್ಮನಿಗಾದರೂ ಮನಸ್ಸು ನಿಲ್ಲುವುದು ಹೇಗೆ? ಆಕೆಯೂ ಆತನ ಆನಂದದಲ್ಲೇ ಸಮಭಾಗಿಯಾಗಿಬಿಟ್ಟಳು ಅಂತು, ಇಬ್ಬರೂ ರಾತ್ರಿ ಯೆಲ್ಲಾ ಸ್ವಾಮಿಯ ಧ್ಯಾನಪರವಶರಾಗಿದ್ದರು. ಬೆಳಗಾಗುತ್ತಲೇ ಎದ್ದು ಸ್ವಾಮಿ ಪುಷ್ಕರಣಿಯಲ್ಲಿ ಮಿಂದು, ವೆಂಕಟಪತಿಯ ದರ್ಶನಮಾಡಿ, ಸೇವೆ ಯನ್ನು ಮುಗಿಸಿ ಭುವನಗಿರಿಗೆ ಬಂದರು. ಶ್ರೀನಿವಾಸನ ಪ್ರೀತ್ಯರ್ಥವಾಗಿ ಬ್ರಾಹ್ಮಣ ಸಮಾರಾಧನೆಮಾಡಿದರು. ಸ್ವಲ್ಪ ಕಾಲವೆನ್ನುವುದರೊಳಗೆ ಗೋಪಮ್ಮನು ಗರ್ಭಿಣಿಯಾಗಿ, ಎಂದಿಗಿಂತ ತೇಜಸ್ವಿನಿಯಾಗಿ ಕಾಣಿಸಿದಳು. ನವಮಾಸ ತುಂಬಲು ಸುದಿನ ವಾರ ನಕ್ಷತ್ರಗಳಲ್ಲಿ ಗಂಡು ಶಿಶುವನ್ನು

ಪ್ರಸವಿಸಿದಳು. ಜ್ಯೋತಿಷ್ಕರು ಶಿಶುವಿನ ಕುಂಡಲಿಯನ್ನು ಶೋಧಿಸಿ, ಈ ಬಾಲನು ಪೂರ್ಣಾಯುಷ್ಮಂತನೂ, ಸರ್ವಜ್ಞನೂ ಆಗುವನೆಂದು ಜಾತಕ ಬರೆದರು. ವೆಂಕಟೇಶನ ಅನುಗ್ರಹದಿಂದ ಜನಿಸಿದೀಪುತ್ರನಿಗೆ ತಿಮ್ಮಣ್ಣನು ವೆಂಕಟಭಟ್ಟನೆಂದು ನಾಮಕರಣಮಾಡಿದನು. ಬಾಲಕನ ಶ್ರೇಯೋಭಿವೃದ್ಧಿಗಾಗಿ ಬಹುವಿಧ ದೇವತಾಸೇವೆಗಳೂ, ದಾನಧರ್ಮಗಳೂ ನಡೆದುವು. ಭಟ್ಟ ದಂಪತಿಗಳ ಆನಂದವು ಮಿತಿಮೀರಿತು.

ವೀಣಾ ತಿಮ್ಮಣ್ಣಭಟ್ಟನು ವಿಜಯನಗರವನ್ನು ಬಿಟ್ಟು ಹನ್ನೆರಡು ವರ್ಷಗಳ ಮೇಲಾದುವು. ದೊಡ್ಡ ವಂಶೀಕನಾದ್ದರಿಂದಲೂ, ರಾಜಾಶ್ರಯದಿಂದ ಮಾನ್ಯನಾಗಿ ಉತ್ತಮ ತರಹೆಯಲ್ಲಿ ಜೀವಿಸಿದ ಅಭ್ಯಾಸದಿಂದಲೂ, ಮಧ್ಯಕಾಲದಲ್ಲೊದಗಿದ್ದ ಸಂತತಿಯ ಕ್ಲೇಶಗಳಿಂದಲೂ ಬೇರೇವಿಧದಲ್ಲಾರ್ಜಿಸಲು ಇವನ ಮನಸ್ಸೊಡಂಬಟ್ಟಿರಲಿಲ್ಲ ಈ ಕಾರಣಗಳಿಂದ ಪಿತೃಪಿತಾಮಹರು ಕೂಡಿಟ್ಟ ಧನವು ಕ್ಷಯಿಸುತ್ತಾಬಂತು ಕಿರಿಯ ಮಗನಿಗೆ ಮೂರನೇ ವರ್ಷದಲ್ಲಿ ಚೌಲವನ್ನೂ ಅಕ್ಷರಭ್ಯಾಸವನ್ನೂ ಅಟ್ಟಹಾಸದಿಂದ ನಡೆಸಿದನು. ಭಟ್ಟನಿಗೆ ಬರಬರುತ್ತಾ ದೇಹದಾರ್ಢ್ಯವು ಕಡಿಮೆಯಾಯಿತು. ದಾರಿದ್ರ್ಯವು ತಲೆದೋರಿತು. ದೇಹಕ್ಕೆ ವೃದ್ಧಾಪ್ಯವೂ ಸಂಸಾರಕ್ಕೆ ಯವ್ವನವೂ ಬಂದಿತು. ಹಿರಿಯ ಮಗನ ವಿವಾಹ ನಡೆದುದರಿಂದ ಗೃಹಕೃತ್ಯವು ಮತ್ತಷ್ಟು ದೊಡ್ಡದಾಯಿತು.

ಹೀಗಿರಲು, ಕುಂಭಕೋಣೆಯಲ್ಲಿ ವಿಜಯೀಂದ್ರಸ್ವಾಮಿಗಳ ಮಹಾಸಮಾರಾಧನೆಗೆ ಬರಬೇಕೆಂದು ಭುವನಗಿರಿಯ ವಿದ್ವಜ್ಜನಗಳಿಗೆ ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರ ಸನ್ನಿಧಿಯಿಂದ ಆಜ್ಞಾಪತ್ರ ಬಂದಿತು. ಭಟ್ಟನು ಮಕ್ಕಳಿಬ್ಬರನ್ನೂ ಕರೆದುಕೊಂಡು ಪ್ರಯಾಣಿಕರೊಡನೆ ಹೊರಟನು. ಶ್ರೀಗಳವರ ದರ್ಶನದಿಂದ ಧನ್ಯನಾಗಿ ಮಕ್ಕಳನ್ನವರ ಪಾದದಲ್ಲಿ ಸಮರ್ಪಿಸಿದನು. ಭಟ್ಟನ ಚಿಕ್ಕಮಗನಮೇಲೆ ಸ್ವಾಮಿಗಳ ಕಟಾಕ್ಷವಾಯಿತು. ಬಾಲಕನ ಪಟುತ್ವವನ್ನೂ ತೇಜಸ್ಸನ್ನೂ ನೋಡಿ ತಮ್ಮಲ್ಲಿ ತಾವೇ ಏನೋ ಯೋಚಿಸಿಕೊಂಡು ಸುಮ್ಮನಾದರು. ಆರಾಧನೆಗೆ ಬಂದಿದ್ದ ಜನರೆಲ್ಲರಿಗೂ ಬಾಲಕನಮೇಲೆ ವಿಚಿತ್ರ ಪ್ರೇಮವುಂಟಾಗಿ ಎಲ್ಲರೂ ಅವನನ್ನು ಮಾತನಾಡಿಸಿ ಸಂತೋಷಪಡುತ್ತಿದ್ದರು. ಭಟ್ಟನಾ

ದರೊ - ಸ್ವಾಮಿಗಳ ಏಕಾಂತಸಮಯದಲ್ಲಿ ತನ್ನ ಅಂತರ್ದುಃಖಗಳನ್ನು ಹೇಳಿಕೊಂಡು ಮಕ್ಕಳ ಭವಿಷ್ಯಕ್ಕಾಗಿ ಚಿಂತಿಸಿದನು. ಶ್ರೀಗಳವರು ನಕ್ಕು,- 'ಭಟ್ಟರೇ, 'ಸರಕ್ಷಿತಾರಕ್ಷತಿಯೋಹಿಗರ್ಭೇ' ಎಂಬ ಭಾಗವತೋಕ್ತಿಯನ್ನು ಮನನಮಾಡಿರಿ ; ನಿಮಗೇತರಚಿಂತೆ ; ನಿಮಗಿಂತ ನಿಮ್ಮ ಮಕ್ಕಳು ಚೆನ್ನಾಗಿ ಬಾಳುವರು ; ಚಿಕ್ಕಮಗನ ಯೋಚನೆ ಹೆಚ್ಚಾಗಿರಬಹುದಲ್ಲವೆ ? ಅವನ ಭಾರ ಮೂಲರಾಮನದು ; ನಿಮಗಾದರೋ ದೇಹದಾರ್ಢ್ಯ ಕಡಮೆಯಾಗಿರು ವುದು ; ಒಂದು ಸ್ಥಳದಲ್ಲಿದ್ದು ಕಾಲಕಳೆಯುವದೊಳ್ಳೇದು' ಎಂದು ಮುಂತಾಗಿ ಅಪ್ಪಣೆಯಿತ್ತು ವಿಶೇಷ ಧನಸಹಾಯ ಮಾಡಿ ಕಳುಹಿಸಿದರು.

ಭಟ್ಟನಿಗೆ ಕುಂಭಕೋಣೆಯು ಪೂರ್ವಸ್ಥಳವಾಗಿದ್ದರೂ ಈಗ ಅದೂ ಪರಸ್ಥಳವಾಗಿತ್ತು. ತನ್ನ ಅಂತಿಮಕಾಲವನ್ನು ಭುವನಗಿರಿಯಲ್ಲಿ ಕಳೆಯ ಬೇಕೆಂದು ಹಿಂತಿರುಗಿದನು.



# ೨. ಶ್ರೀ ವಿಜಯೀಂದ್ರಸ್ವಾಮಿಗಳವರ ವೃತ್ತಾಂತ

ಹಿಂದಿನ ಅಧ್ಯಾಯದಲ್ಲಿ ವೀಣಾ ತಿಮ್ಮಣ್ಣಭಟ್ಟನು ತನ್ನ ಇಬ್ಬರು ಮಕ್ಕಳನ್ನು ಕರೆದುಕೊಂಡು ಶ್ರೀ ವಿಜಯೀಂದ್ರ ತೀರ್ಥರವರ ಮಹಾ ಸಮಾರಾಧನೆಗೆ ಬಂದನೆಂದು ತಿಳಿಸಿದೆ. ಅಂದಮೇಲೆ ವಿಜಯೀಂದ್ರರು ಯಾರು, ಅವರ ಗುರು ಪರಂಪರೆ ಯಾವುದು, ಅವರ ಮಹಿಮಾತಿಶಯವೇನು, ಇವೇ ಮೊದಲಾದ ಸಂಗತಿಗಳನ್ನು ಸಂಕ್ಷೇಪವಾಗಿಯಾದರೂ ತಿಳಿದುಕೊಳ್ಳಬೇಕಾದುದು ಈ ಸಮಯದಲ್ಲಿ ಸುಸಂಗತವಾಗಿಯೇ ಇದೆ. ಮಧ್ವಗುರು ಪರಂಪರೆಯಲ್ಲಿ ಪೂರ್ವಾದಿ ಮಠವೆಂದು ಪ್ರಸಿದ್ಧವಾಗಿ, (ಅಂದರೆ ಪೂರ್ವದಲ್ಲಿ ಆಶ್ರಮಸ್ವೀಕಾರ ಮಾಡಿದವರಿಂದ ಆದಿಯಾದ್ದು) ಶಕಪುರುಷರಾದ ಶ್ರೀ ರಾಘವೇಂದ್ರ ಸ್ವಾಮಿಗಳವರ ಪ್ರಭಾವದಿಂದ ರಾಘವೇಂದ್ರ ಮಠವೆಂದೇ ಕರೆಸಿಕೊಳ್ಳುತ್ತಿರುವ ಶ್ರೀ ಮಠವು ಹಂಸನಾಮಕ ಪರಮಾತ್ಮನಿಂದ ಪ್ರಾರಂಭವಾಗಿ, ಇಲ್ಲಿನವರೆಗೆ ಮೂವತ್ತು ನಾಲ್ಕು ಮಂದಿ ಯತೀಶ್ವರರಿಂದ ಅಲಂಕೃತವಾಗಿ, ವರ್ತಮಾನ ಕಾಲದಲ್ಲಿ ಶ್ರೀಮತ್ಸುಯಮೀಂದ್ರ ತೀರ್ಥ ಶ್ರೀಪಾದಂಗಳವರಿಂದ ಅಧಿಷ್ಠಿತವಾಗಿ ಶೋಭಿಸುತ್ತಲಿದೆ.

ಶ್ರೀಮನ್ಮಧ್ವಾಚಾರ್ಯರವರು ಉಡುಪೀ ಕ್ಷೇತ್ರದಲ್ಲಿ ಶ್ರೀಕೃಷ್ಣ ಪ್ರತಿಷ್ಠಾ ಮಾಡಿದ ಕಾಲದಲ್ಲಿ ಅಲ್ಲಿನ ಪೂಜಾ ಕಾರ್ಯಗಳು ನಿರ್ವಿಘ್ನವಾಗಿ ನಡೆಯಬೇಕೆಂದು ಪ್ರತ್ಯೇಕ ಎಂಟು ಮಠಗಳನ್ನು ಸ್ಥಾಪಿಸಿ, ಒಂದೊಂದು ಮಠಕ್ಕೂ ಸ್ವಕರಾರ್ಚಿತ ಪ್ರತೀಕಗಳನ್ನು ಅನುಗ್ರಹಿಸಿದರು. ಈ ಎಂಟು ಮಠದ ಯತಿಗಳೂ ಶ್ರೀ ಮಧ್ವಾಚಾರ್ಯರವರ ಆಜ್ಞೆಯಂತೆ ಪರ್ಯಾಯ ಕ್ರಮದಿಂದ ಶ್ರೀ ಕೃಷ್ಣಾರಾಧನೆಯನ್ನು ಅದ್ಯಾಪಿ ನಡೆಸಿಕೊಂಡು ಬರುತ್ತಿದ್ದಾರೆ. ಈ ಎಂಟು ಮಠಾಧಿಪತಿಗಳಾದವರೂ, ತಮ್ಮ ಗುರುಪರಂಪರೆಯನ್ನು ಹಂಸನಾಮಕ ಪರಮಾತ್ಮನಿಂದಲೇ ಗಣನೆಮಾಡಿಕೊಂಡು ಬರುತ್ತಿದ್ದಾರೆ.

ಶ್ರೀಮಧ್ವಾಚಾರ್ಯರವರು ತಮ್ಮ ಅವತಾರ ಕಾರ್ಯವನ್ನು ಪೂರ್ತಿಮಾಡಿಕೊಂಡು ಬದರಿಕಾಶ್ರಮಕ್ಕೆ ತೆರಳುವಾಗ, ತಮ್ಮ ಪಟ್ಟ ಶಿಷ್ಯರಾದ ನಾಲ್ವರ ಪೈಕಿ ಹಿರಿಯರಾದ ಪದ್ಮನಾಭತೀರ್ಥರಿಗೆ ಬ್ರಹ್ಮಕರಾರ್ಚಿತ ಶ್ರೀ ಮೂಲರಾಮ ಸ್ವಕರಾರ್ಚಿತ ದಿಗ್ವಿಜಯರಾಮ ಮೊದಲಾದ ಭಗವನ್ಮೂರ್ತಿಗಳನ್ನೊಪ್ಪಿಸಿ,

ಗುರುಪರಂಪರೆಯನ್ನು ನಡೆಸುತ್ತಾ ಜ್ಞಾನಪ್ರಚಾರ ಮಾಡಿಕೊಂಡಿರಬೇಕೆಂದು ಆಜ್ಞೆಗೈದರು. ಪದ್ಮನಾಭತೀರ್ಥರಾಗುತ್ತಲೇ ನರಹರಿತೀರ್ಥರು, ಮಾಧವ ತೀರ್ಥರು, ಅಕ್ಷೋಭ್ಯತೀರ್ಥರುಗಳು ಕ್ರಮವಾಗಿ ಸಿಂಹಾಸನಾರೋಹಣ ಮಾಡಿದರು. ಅಕ್ಷೋಭ್ಯತೀರ್ಥರವರಿಂದ ಪಟ್ಟಾಭಿಷಿಕ್ತರಾದವರು ಜಯ ತೀರ್ಥರು. ಇವರು ಶ್ರೀ ಮಧ್ವಾಚಾರ್ಯರವರ ಮೂಲಗ್ರಂಥಗಳಿಗೆ ಟೀಕೆಗಳನ್ನು ಬರೆದ ಕಾರಣ ಟೀಕಾಚಾರ್ಯರೆಂದು ಸಹ ಇವರಿಗೆ ಹೆಸರು. ಈ ಮಹನೀಯ ರಿಂದ ಸಂಸ್ಥಾನವನ್ನು ಪಡೆದವರು ಶ್ರೀ ವಿದ್ಯಾಧಿರಾಜರು. ಇವರ ಕಾಲದಲ್ಲಿ ಮಠ ವಿಭಾಗವಾಯಿತು. ಮೊದಲು ಆಶ್ರಮಪಡೆದ ರಾಜೇಂದ್ರರಿಂದ ಒಂದು ಪೀಳಿಗೆಯೂ, ಅನಂತರ ಆಶ್ರಮ ಪಡೆದ ಕವೀಂದ್ರರಿಂದ ಪ್ರತ್ಯೇಕ ಪೀಳಿ ಗೆಯೂ ಬೆಳೆಯಿತು. ರಾಜೇಂದ್ರರ ಪೀಳಿಗೆಯ ಜಯಧ್ವಜರು ಬಂಗಾಳಾ ಪ್ರಾಂತ್ಯದಲ್ಲಿ ಸಂಚರಿಸಿ ಶ್ರೀಕೃಷ್ಣ ಚೈತನ್ಯರನ್ನು ಶಿಷ್ಯರನ್ನಾಗಿ ಮಾಡಿ ಕೊಂಡು ಆ ದೇಶದಲ್ಲೇ ಆ ಕಾಲದಲ್ಲಿ ಪ್ರಚಾರದಲ್ಲಿದ್ದ ನವೀನ ತರ್ಕಪದ್ಧತಿ ಯನ್ನು ದಕ್ಷಿಣದೇಶಕ್ಕೆ ತಂದು, ವಿಶೇಷತಃ ದಕ್ಷಿಣ ದೇಶದಲ್ಲೇ ನೆಲೆಸಿದರು. ಈ ಪರಂಪರೆಯು ಕೆಲವುಕಾಲ ದಕ್ಷಿಣಾದಿ ಮಠವೆಂದು ಕರೆಸಿಕೊಂಡು ವ್ಯಾಸ ತೀರ್ಥರಂಥಾ ಶಕಪುರುಷರ ಪ್ರಭಾವದಿಂದ ವ್ಯಾಸರಾಯ ಮಠವೆನಿಸಿ ಕೊಂಡಿತು.

ಕವೀಂದ್ರರ ಪೀಳಿಗೆಯಲ್ಲಾದರೋ ಎರಡು ತಲೆ ಕಳೆಯುತ್ತಲೇ ಅಂದರೆ ವಾಗೀಶತೀರ್ಥರು ಮತ್ತು ರಾಮಚಂದ್ರತೀರ್ಥರುಗಳಾಗುತ್ತಲೇ ಮತ್ತೆ ವಿಭಾಗವಾಯಿತು ಶ್ರೀ ರಾಮಚಂದ್ರತೀರ್ಥರು ತಮ್ಮ ವೃದ್ಧಾಪ್ಯ ಕಾಲದಲ್ಲಿ ಸಕಲ ವಿದ್ಯಾವಿಶಾರದರೂ ವಾದಿನಿಗ್ರಹ ಚತುರರೂ ಆದ ರಘು ನಾಥಾರ್ಯರೆಂಬುವರಿಗೆ ಸಂಸ್ಥಾನಾಧಿಪತ್ಯ ಕೊಟ್ಟು ವಿಬುಧೇಂದ್ರರೆಂಬದಾಗಿ ನಾಮಕರಣಮಾಡಿದರು. ಕೆಲವುಕಾಲ ಗುರುಶಿಷ್ಯರಿಬ್ಬರೂ ಶ್ರೀ ಮೂಲರಾಮ ಸೀತಾದೇವಿಯರನ್ನೂ, ದಿಗ್ವಿಜಯರಾಮ ಮೊದಲಾದ ಸರ್ವಜ್ಞ ಕರಾರ್ಚಿತ ಪ್ರತಿಮೆಗಳನ್ನೂ ಆರಾಧಿಸಿದರು. ವಾದಿನಿಗ್ರಹ ಧರ್ಮಪ್ರಚಾರಗಳ ಅವಶ್ಯಕತೆ ಹೆಚ್ಚಾಗಿರುವುದನ್ನರಿತು ಶ್ರೀ ರಾಮಚಂದ್ರತೀರ್ಥರು ವಿಬುಧೇಂದ್ರರಿಗೆ ದಿಗ್ವಿ ಜಯ ರಾಮರನ್ನೂ ಜಯತೀರ್ಥ ಕರಾರ್ಚಿತ ಜಯರಾಮರನ್ನೂ ಅನುಗ್ರಹಿಸಿ ಕಾಶೀ ಪ್ರಾಂತ್ಯ ಸಂಚಾರಕ್ಕೆ ಕಳುಹಿಸಿಕೊಟ್ಟರು. ವಿಬುಧೇಂದ್ರರಾದರೋ

ಕಾಶಿಯಂಥಾ ಪ್ರಬಲ ವಿದ್ವತ್ಕೇಂದ್ರದಲ್ಲಿ ತಮ್ಮ ಪಾಂಡಿತ್ಯ ಪ್ರಭಾವದಿಂದ ವಿದ್ವಜ್ಜನರುಗಳೊಡನೆ ವಾದಿಸಿ ಪ್ರಖ್ಯಾತಿ ಪಡೆದು, ಎಲ್ಲೆಲ್ಲಾ ಧರ್ಮ ಪ್ರಚಾರ ಮಾಡಿದರು.

ಹೀಗೆ ಕೆಲವು ಕಾಲ ಕಳೆಯಲು ರಾಮಚಂದ್ರತೀರ್ಥರು ತಮ್ಮ ಕಾಲ ಸಮಾಪಿಸಿತೆಂದು ಜ್ಞಾನದೃಷ್ಟಿಯಿಂದ ತಿಳಿದು ವಿಬುಧೇಂದ್ರರಿಗೆ ಜಾಗ್ರತೆ ಯರ ಗೋಳಕ್ಕೆ ಬರಬೇಕೆಂದು ಶಿಷ್ಯನೊಬ್ಬನ ಮುಖೇನ ಪತ್ರವನ್ನು ಕಳುಹಿಸಿದರು. ವಿಬುಧೇಂದ್ರರು ಯರಗೋಳವನ್ನು ತಲಪುವಷ್ಟರಲ್ಲಿ ರಾಮಚಂದ್ರತೀರ್ಥರು ವೃಂದಾವನಸ್ಥರಾಗಿದ್ದರು.

ಯರಗೋಳವು (ಹೈದರಾಬಾದು ಸೀಮೆಯ ಗುಲ್ಬರ್ಗಾ ಜಿಲ್ಲೆಯಲ್ಲಿದೆ.) ಇದಕ್ಕೆ ಹಿಂದಿನ ಕಾಲದಲ್ಲಿ ಜೈನರಾಜರ ರಾಜಧಾನಿಯಾಗಿತ್ತು. ವಿದ್ಯಾಭಿಮಾನಿಗಳಾದ ಆ ರಾಜರು ಎರಡು ಸಾವಿರ ಅಧ್ಯಾಪಕರಿಂದ ಕೂಡಿದ ಒಂದು ದೊಡ್ಡ ಗುರುಕುಲವನ್ನು ನಡೆಸುತ್ತಾ ಸಕಲ ಮತಗಳ ಪಂಡಿತರಿಗೆ ಆಶ್ರಯ ದಾತರಾಗಿದ್ದರು. ಇಂಥಾ ದೊಡ್ಡ ಗುರುಕುಲದ ಸ್ಥಾನಪತಿತ್ವ ಮಾತ್ರ ಜೈನಭಿಕ್ಷುಗಳದಾಗಿತ್ತು. ಆ ಭಿಕ್ಷುಗಳು ಉತ್ತರ ದೇಶದಲ್ಲಿರುವ ತಮ್ಮ ಪವಿತ್ರ ಸ್ಥಾನಗಳ ಯಾತ್ರಾನಿಮಿತ್ತ ಹೊರಟಾಗ, ಜೈನರಾಜನ ಪ್ರಾರ್ಥನೆಯಿಂದ ಜಯತೀರ್ಥರು ಆ ಮಹಾ ವಿದ್ಯಾಪೀಠದ ಅಧ್ಯಕ್ಷಸ್ಥಾನವನ್ನಲಂಕರಿಸಿದರು. ಜಯತೀರ್ಥರ ಅನೇಕ ಟೀಕಾಗ್ರಂಥಗಳು ಯರಗೋಳದಲ್ಲೇ ರಚಿತವಾದವು. ಕರ್ಣಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯರಾದ ವಿದ್ಯಾರಣ್ಯ ಸ್ವಾಮಿಗಳು ಸಹ ಯರಗೋಳಕ್ಕೆ ಬಂದು, ಟೀಕಾಕೃತ್ಪಾದರ ತತ್ವ ನಿರ್ಣಯ ಮೊದಲಾದ ಗ್ರಂಥಗಳ ವ್ಯಾಖ್ಯಾನವನ್ನು ನೋಡಿ ಸಂತುಷ್ಟರಾಗಿ ತಾವು ದಿಗ್ವಿಜಯ ಮಾಡುತ್ತಿದ್ದ ಆನೆಯ ಮೇಲೆ ಜಯತೀರ್ಥರನ್ನು ಕೂಡಿಸಿ ಮಹೋತ್ಸವಮಾಡಿದರು. ಈ ಪೂರ್ವೇತಿಹಾಸವೇ ರಾಮಚಂದ್ರತೀರ್ಥರು ಯರಗೋಳದಲ್ಲಿ ತಮ್ಮ ಅಂತಿಮ ಕಾಲದಲ್ಲಿ ವಾಸಮಾಡಲು ಕಾರಣವಾಯಿತು.

ವಿಬುಧೇಂದ್ರರು ಯರಗೋಳಕ್ಕೆ ಸಕಾಲದಲ್ಲಿ ಬರಲಿಲ್ಲ. ರಾಮಚಂದ್ರ ತೀರ್ಥರು ಶ್ರೀಮೂಲ ಸೀತಾರಾಮ ವಿಗ್ರಹಗಳ ಪೆಟ್ಟಿಗೆಯನ್ನು ಧರ್ಮಣ್ಣ ಮೊದಲಾದ ಯೋಗ್ಯ ಗೃಹಸ್ಥರ ವಶಕ್ಕೆ ಒಪ್ಪಿಸಿ ವೃಂದಾವನಸ್ಥರಾದರು. ಮುಂದೆ ದೇವತಾರಾಧನೆಗಳು ನಡೆಯುವ ಬಗೆ ಹೇಗೆಂದು ತುಳುನಾಡಿನ

ಕೃಷ್ಣಾಚಾರ್ಯರೆಂಬುವರು* ಆಶ್ರಮ ಸ್ವೀಕಾರಮಾಡಿ ಧರ್ಮಣ್ಣ ಮೊದಲಾದ ಗೃಹಸ್ಥರಿಂದ ಗುರುಗಳ ಪೆಟ್ಟಿಗೆಯನ್ನು ಪಡೆದು ದೇಶಸಂಚಾರ ಹೊರಟರು. ಹೀಗೆ ಪ್ರತ್ಯೇಕ ಪೀಳಿಗೆಗೆ ಮೂಲಪುರುಷರಾದವರು ವಿದ್ಯಾನಿಧಿಗಳು. ಇವರ ಕಾಲದಿಂದ ಈ ಮಠಕ್ಕೆ ಉತ್ತರಾದಿಮಠವೆಂಬ ಹೆಸರಾಯಿತು ಅಂದರೆ ಪೂರ್ವದಲ್ಲಿ ಆಶ್ರಮ ಪಡೆದವರಿಂದ ಆದಿಯಾಗಿ ನಡೆದು ಬಂದಿರುವ ಮಠ ಪೂರ್ವಾದಿಮಠವೆಂತಲೂ, ಉತ್ತರ ಎಂದರೆ ಅನಂತರ ಆಶ್ರಮ ಪಡೆದವರಿಂದ ಆದಿಯಾಗಿ ನಡೆದು ಬಂದಿರುವ ಮಠ ಉತ್ತರಾದಿ ಮಠವೆಂತಲೂ ಇಷ್ಟೇ ಪ್ರಭೇದ. ಒಳಹೊಕ್ಕು ನೋಡಿದರೆ ಒಂದೇ ಪರಂಪರೆ, ಒಂದೇ ಮತ, ಒಂದೇ ಗುರಿ, ವ್ಯತ್ಯಾಸವೇನಿಲ್ಲ. ಭಗವದಿಚ್ಛೆಯಿಂದಲೇ ಒಂದಾಗಿದ್ದ ಮಧ್ವಾಚಾರ್ಯರವರ ಮೂಲ ಮಠವು ಮೂರಾಗಿದೆಯೆಂದು ತಿಳಿಯಬೇಕು. ಅದ್ವೈತ ಮತಸ್ಥರಲ್ಲಿರುವಂತೆ ದ್ವೈತಮತಸ್ಥರಲ್ಲೂ, ಉತ್ತರಾಮ್ನಾಯ ದಕ್ಷಿಣಾಮ್ನಾಯ ಪೂರ್ವಾಮ್ನಾಯ ಪಶ್ಚಿಮಾಮ್ನಾಯ ಮಠಗಳಿರುವವೆಂದು ಸಂತುಷ್ಟರಾಗ ಬೇಕು.

ಹೀಗೆ ವಿಬುಧೇಂದ್ರರಿಂದ ಬೆಳೆದ ಪೀಳಿಗೆಯಲ್ಲಿ ಜಿತಾಮಿತ್ರರು, ರಘುನಂದನರು, ಸುರೇಂದ್ರರು, ಕ್ರಮವಾಗಿ ೧೦೩ ವರ್ಷಗಳಷ್ಟು ಕಾಲ ಪಟ್ಟವಾಳಿದ ಮೇಲೆ ವಿಜಯೀಂದ್ರರು ಸಂಸ್ಥಾನಾಧಿಪತ್ಯಕ್ಕೆ ಬಂದರು. ಇವರೇ ನಮ್ಮ ಕಥಾನಾಯಕರ ಪರಮ ಗುರುಗಳು.

## ಪೂರ್ವವೃತ್ತಾಂತ

ವ್ಯಾಸರಾಯಸ್ವಾಮಿಗಳವರು ಶ್ರೀಪಾದರಾಜರಿಂದ ಆಜ್ಞಪ್ತರಾಗಿ, ಚಂದ್ರಗಿರಿಯ ರಾಜಾಸ್ಥಾನವನ್ನು ಕುರಿತು ಪ್ರಯಾಣ ಮಾಡುತ್ತಿದ್ದ ಮಾರ್ಗ

---

*ವಿಜಯೀಂದ್ರ ವಿಜಯವೆಂಬ ಗ್ರಂಥರಚನೆ ಮಾಡಿದ ಆರಣೀ ರಾಜಪುರೋಹಿತ ಮಧ್ವಾಚಾರ್ಯರು ಬರೆದಿರುವುದರಲ್ಲಿ ತುಳುನಾಡಿನ ಕೃಷ್ಣಾಚಾರ್ಯರಿಗೆ ರಾಮಚಂದ್ರತೀರ್ಥರಿಂದಲೇ ಆಶ್ರಮವಾಯಿತೆಂಬ ಮಾತುಬಂದಿಲ್ಲ. ಗ್ರಂಥಾಂತರಗಳ ಆಧಾರದಿಂದ ಬರೆದಿರುವ ಸತ್ಕಥಾ ಎಂಬ ಪುಸ್ತಕದಲ್ಲಿ ರಾಮಚಂದ್ರತೀರ್ಥರು ಕೃಷ್ಣಾಚಾರ್ಯರಿಗೆ ಆಶ್ರಮ ಕೊಟ್ಟರೆಂದೂ, ಆರು ತಿಂಗಳವರೆಗೆ ಕಾದಿದ್ದು ಶ್ರೀಮೂಲ ಸೀತಾರಾಮ ವಿಗ್ರಹಗಳನ್ನು ವಿಬುಧೇಂದ್ರರಿಗೆ ಒಪ್ಪಿಸಬೇಕೆಂದು ಅಪ್ಪಣೆಮಾಡಿದ್ದರೆಂದೂ, ಮೊದಲಾದ ಕಥೆಗಳು ಲಿಖಿತವಾಗಿವೆ ಎಷ್ಟೋ ಕಾಲ ಕಳೆದನಂತರ ಈಗ ಈ ವಿಚಾರ ಶೋಧನೆಗೆ ಹೊರಟರೆ ಸತ್ಯಾಂಶ ತಿಳಿದುಬರುವದು ಕಠಿಣವಾಗಿದೆ.

ಮಧ್ಯದಲ್ಲಿ, ಒಬ್ಬ ವೃದ್ಧ ಗೃಹಸ್ಥನು ತನ್ನ ಗ್ರಾಮದಲ್ಲಿಳಿದು ತನ್ನ ಮನೆಯಲ್ಲಿ ಭಿಕ್ಷ ಸ್ವೀಕಾರಮಾಡಬೇಕೆಂದು ಪ್ರಾರ್ಥಿಸಿದನು. ಗೃಹಸ್ಥನು ಆ ಗ್ರಾಮದ ಕುಲಕರಣಿಯೂ ಆಗಿದ್ದನು. ಸ್ವಾಮಿಗಳು, ಊರೂರಲ್ಲೂ ಇಳಿಯುತ್ತ ಬಂದರೆ ನಮ್ಮ ಪ್ರಯಾಣ ನಾಗುವಬಗೆ ಹೇಗೆಂದು ಪ್ರಶ್ನೆಮಾಡಿದರು. ಗೃಹಸ್ಥನು ಮಹಾಸ್ವಾಮಿ, ತಾವು ಶ್ರೀಪಾದರಾಜರ ಶಿಷ್ಯರು! ತಮ್ಮ ಹೆಸರಾದರೋ ವ್ಯಾಸರಾಜರೆಂದು! ತಾವು ಪ್ರಯಾಣ ಮಾಡುತ್ತಿರುವುದು ನಮ್ಮ ಮಹಾರಾಜ ಚಂದ್ರಗಿರಿಯ ಸಳುವ ನರಸಿಂಹರಾಜನ ಬಳಿಗೆ! ರಾಜರಾದವರು ರಾಜರನ್ನು ಅನುಗ್ರಹಿಸುವುದಕ್ಕೆ ಮಾತ್ರವೇ ಪ್ರಯಾಣ ಬೆಳೆಸುವುದಾದರೆ ನನ್ನಂಥ ದೀನನು ಉದ್ಧಾರವಾಗುವ ಬಗೆ ಹೇಗೆಂದು ದಂಡಪ್ರಣಾಮ ಮಾಡಿದನು. ಸ್ವಾಮಿಗಳು "ಸುಪುತ್ರಾವಾಪ್ತಿರಸ್ತು" ಎಂದು ಹರಸಿದರು. ಗೃಹಸ್ಥನು ನಗುತ್ತಾ 'ಬಾಲಯತಿಗಳು' ಎಂದನು. ಸ್ವಾಮಿಗಳೂ ನಗುತ್ತಾ ನಮ್ಮ ಆರಾಧ್ಯ ದೇವತೆ ಗೋಪಾಲಕೃಷ್ಣನೆಂದರು. ಗೃಹಸ್ಥನು ಗೋಪಾಲ ಕೃಷ್ಣನೇ ಇರಬಹುದು. ಆದರೆ ಆವನು ಸಂತಾನ ಗೋಪಾಲನೇ ಎಂದು ಕೇಳಿದನು. ಸ್ವಾಮಿಗಳ ಎಡಬಲದಲ್ಲಿದ್ದವರು ಗೃಹಸ್ಥನನ್ನು ಏನು ಮಿತಿ ಮೀರಿ ಮಾತಾಡುವೆಯೆಂದು ಕೈಹಿಡಿದು ಹಿಂದಕ್ಕೆ ಎಳೆದರು. ಸ್ವಾಮಿಗಳು ಒಡನೆಯೇ ಸಮೀಪಸ್ಥರನ್ನು ನೇತ್ರಸಂಜ್ಞೆಯಿಂದ ತಡೆದು ಪಲ್ಲಕ್ಕಿಯಿಂದ ಕೆಳಗಿಳಿದರು. ಕುಲಕರಣಿಯನ್ನು ಸಂಬೋಧಿಸಿ-ಅಯ್ಯಾ ನಮ್ಮ ಬಾಲ ಗೋಪಾಲನು ಸಂತಾನ ಗೋಪಾಲನೂ ಅಹುದೆಂದರು. ಗೃಹಸ್ಥನು ಮಹಾ ಸ್ವಾಮಿ ನನ್ನ ಸಾಹಸವನ್ನು ಕ್ಷಮಿಸಬೇಕು, ಆಶೀರ್ವಾದವು ಸತ್ಯವಾಗಬೇಕು ಎಂದನು. ಗೃಹಸ್ಥನ ಮನೆಯಲ್ಲೇ ಸ್ವಾಮಿಗಳ ಪೂಜಾ ಸಿದ್ಧತೆಯಾಯಿತು. ತೀರ್ಥ ಸಮಯದಲ್ಲಿ ಗೃಹಸ್ಥನಿಗೆ ಸಂತಾನ ಗೋಪಾಲ ಮಂತ್ರೋಪದೇಶವೂ ಆಯಿತು. ಸ್ವಲ್ಪ ಕಾಲದಲ್ಲೇ ಕುಲಕರಣಿಗೆ ಪುತ್ರೋತ್ಸವವಾಯಿತು. ತನ್ನ ಸಂತೋಷ ವಾರ್ತೆಯನ್ನ ಚಂದ್ರಗಿರಿಗೇ ಬಂದು ಸ್ವಾಮಿಗಳಿಗೆ ಗೃಹಸ್ಥನು ತಿಳಿಸಿದನು. ಸ್ವಾಮಿಗಳು ನಮಗೆ ಆ ಮಗನನ್ನು ಕೊಡುವೆಯೋ ಎಂದು ಕೇಳಿದರು. ಗೃಹಸ್ಥನು ಭ್ರಮೆಗೊಂಡು ಒಬ್ಬನೇ ಮಗ! ಇಷ್ಟುಕಾಲದ ಮೇಲೆ ಹುಟ್ಟಿದ ಮಗ! ಹೇಗೆ ಕೊಡಲೆಂದು ಕೇಳಿದನು. ಸ್ವಾಮಿಗಳು ಇನ್ನೊಬ್ಬ ಮಗನಾದರೆ, ಕೊಡುವೆಯೋ ಎಂದರು

ಗೃಹಸ್ಥನು ಆಗಲಿ ಎಂದನು. ಗುರ್ವನುಗ್ರಹದಿಂದ ಕುಲಕರಣಿಗೆ ಮತ್ತೆ ಪುತ್ರೋತ್ಸವವಾಯಿತು. ಮೊದಲ ಮಗನನ್ನು ಸ್ವಾಮಿಗಳು ತಮ್ಮ ಬಳಿಗೇ ಕರೆಸಿಕೊಂಡು ಉಪನಯನಾದಿಗಳನ್ನು ಮಾಡಿಸಿ ಸಕಲ ವಿದ್ಯೆಗಳನ್ನೂ ಕಲಿಸಿ ಚತುಷ್ಷಷ್ಠಿ ಕಲಾವಿಶಾರದನನ್ನಾಗಿ ಮಾಡಿ ಆಶ್ರಮವನ್ನೂ ಕೊಟ್ಟು "ವಿಷ್ಣು ತೀರ್ಥ" ಎಂದು ನಾಮಕರಣ ಮಾಡಿದರು. ಈ ವಿಷ್ಣುತೀರ್ಥರು ವ್ಯಾಸ ರಾಯರಿಂದ ಆಶ್ರಮಪಡೆದ ೭೪ ಜನ ಶಿಷ್ಯರ ಪೈಕಿ ಐದನೆಯವರು. ವ್ಯಾಸ ರಾಯರ ಸಂಪೂರ್ಣ ಅನುಗ್ರಹಕ್ಕೆ ಪಾತ್ರರು ಇವರಿಗೇ ತಮ್ಮ ವಿದ್ಯಾ ಸಿಂಹಾಸನದಲ್ಲಿ ಪಟ್ಟಾಭಿಷೇಕ ಮಾಡಬೇಕೆಂದು ಸಹ ವ್ಯಾಸರಾಯರ ಅಭಿ ಲಾಷೆಯಾಗಿತ್ತು.

ಹೀಗಿಲು, ಹಿಂದೆ ವಿಬುಧೇಂದ್ರರ ಕಾಲದಲ್ಲಿ ಪ್ರಾಪ್ತವಾಗದಿದ್ದ ಶ್ರೀಮೂಲ ರಾಮಾರ್ಚನೆಯನ್ನು ಇವರ ಶಿಷ್ಯರಾದ ಜಿತಾಮಿತ್ರರು ಸಂಪಾದಿ ಸಲಿಲ್ಲ. ಪರಮ ವಿರಕ್ತರಾದಿವರು ಬೆಂದ ಪದಾರ್ಥಗಳನ್ನೇ ಭುಜಿಸುತ್ತಿರಲಿಲ್ಲ ವಾದಿನಿಗ್ರಹ ಶಿಷ್ಯಾರ್ಜನೆಗಳ ಕಡೆಗೆ ಗಮನ ಕೊಡುತ್ತಿರಲಿಲ್ಲ. ಯಾರಾ ದರೂ ಭಕ್ತರು ತಂದುಕೊಟ್ಟ ಹಣ್ಣುಹಂಪಲಗಳನ್ನು ಶ್ರೀಹರಿಗೆ ನಿವೇದಿಸಿ ಎಂದಾದರೊಮ್ಮೆ ಸ್ವೀಕರಿಸುತ್ತಿದ್ದರು. ಒಂದು ದಿನ ಕೃಷ್ಣಾನದಿಯ ದಂಡೆ ಯಲ್ಲಿ ಕುಳಿತು ಆಹ್ನಿಕ ಮಾಡುತ್ತಿರಲು ಮಹಾ ಪ್ರವಾಹಬಂದರೂ ಏಳಲೇ ಇಲ್ಲ. ಎಬ್ಬಿಸುವ ಧೈರ್ಯ ಯಾರಿಗೂ ಆಗಲೇ ಇಲ್ಲ. ಏಳು ದಿವಸ ಪ್ರವಾಹವಿಳಿಯಲೂ ಇಲ್ಲ. ಎಷ್ಟೋ ಆಳುದ್ದ ನೀರು ಸ್ವಾಮಿಗಳ ಮೇಲೆ ಹರಿದುಹೋಯಿತು. ಅನಂತರ ಪ್ರವಾಹವಿಳಿಯಿತು. ನದಿಯ ಪಾಲಾದ ರೆಂದು ಚಿಂತಾಕ್ರಾಂತರಾಗಿದ್ದ ಶಿಷ್ಯಜನರು ಚಾಪಲ್ಯದಿಂದ ಸ್ವಾಮಿಗಳು ಕೂತಿದ್ದ ಬಂಡೆಯ ಬಳಿಗೆ ಬಂದು ನೋಡಿದರು. ಸ್ವಾಮಿಗಳು ಆಗಲೂ ಅಲ್ಲೇ ಕುಳಿತು ಅಂತರ್ಮುಖರೇ ಆಗಿದ್ದರು. ಎಷ್ಟೋ ಹೊತ್ತಿನ ಮೇಲೆ ಕುತೂಹಲದಿಂದ ಕಾಯುತ್ತಿದ್ದ ಶಿಷ್ಯರಕಡೆ ನೋಡಿ ಪೂಜೆಗೆ ಸಿದ್ಧವಾಗಿದೆಯೇ ಎಂದರು. ಶಿಷ್ಯರು ಕಣ್ಣೀರಿಡುತ್ತಾ ಸಿದ್ಧವಾಗಿದೆಯೆಂದು ನಡೆದ ಸಂಗತಿ ಯನ್ನು ತಿಳಿಸಿದರು. ಜಿತಾಮಿತ್ರರು, ಹಾಗೆಯೇ ? ಕೃಷ್ಣವೇಣಿಯೂ ನಮ್ಮ ಆಹ್ನಿಕಕ್ಕೆ ನಿರ್ವಿಘ್ನವಾಗಿರಲೆಂದು ತನ್ನ ತೀರ್ಥದಿಂದ ಮರೆಮಾಡಿ ದ್ದಳೇ ? ಆ ತಾಯಿಗೆ ನಮಸ್ಕಾರ ಎಂದರು. ಶಿಷ್ಯರು ಮಹಾಸ್ವಾಮಿ

ಎನ್ನುವಷ್ಟರಲ್ಲಿ ನೀರಿನಲ್ಲಿದ್ದರೇನು ಗಾಳಿಯಲ್ಲಿದ್ದರೇನು ಆದೂ ಭೂತ ಇದೂ ಭೂತ ಎಂದರು. ಶಿಷ್ಯರು ಮಹಾ ಅದ್ಭುತವೆಂದರು. ಈ ಮಹಾನುಭಾವರ ಹೆಸರೊಂದಲ್ಲ ಚರ್ಯೆಯೊಂದಲ್ಲ, ಅನ್ವರ್ಥವಾಗಿ ಜಿತ+ಅಮಿತ್ರ=ಶತ್ರುಗಳನ್ನು ಗೆದ್ದವರು ಎಂದಲ್ಲ, ಅಮಿತ್ರರೇ ಇಲ್ಲದಂತೆ ತಮ್ಮನ್ನು ತಾವು ಗೆದ್ದವರು ಎಂದರ್ಥ. ಇಂಥವರು ೧೨ ವರ್ಷ ಸರ್ವಜ್ಞಪೀಠವನ್ನಲಂಕರಿಸಿ ಮುಡು ಮಾಲು ಬಳಿ ಕೃಷ್ಣಾತೀರದಲ್ಲೇ ಅದೃಶ್ಯರಾದರು. ಇವರ ಸನ್ನಿಧಿಯಲ್ಲಿ ಇಂದಿಗೂ ಭಕ್ತಜನರು ಸೇವೆ ಮಾಡುತ್ತಾರೆ. ಜ್ಞಾನಾರ್ಥಿಗಳಿಗೆ ಮೂರೇ ದಿವಸಗಳಲ್ಲಿ ಶುಭ ಸೂಚನೆಯಾಗುತ್ತದೆ; ಕಾಮ್ಯಾರ್ಥಿಗಳಿಗೆ ಮಂತ್ರಾಲಯಕ್ಕೆ ಹೋಗೆಂದು ಸ್ವಪ್ನವಾಗುತ್ತದೆ.

ಇಂಥಾ ಮಹಾನುಭಾವರುಗಳಿಂದಲೇ ಅಧಿಷ್ಠಿತವಾಗಿರುವ ಶ್ರೀ ರಾಘವೇಂದ್ರ ಗುರುಪೀಳಿಗೆಯ ಸಂಕ್ಷೇಪ ಚರಿತ್ರೆಯನ್ನು ಬರೆಯೆಂದರೆ ಕಡ್ಡಿಯೋಡುವುದಿಲ್ಲ. ಕಣ್ಣು ಕಾಣುವುದಿಲ್ಲ. ಕಾಗದ ತೊಯಿದುಹೋಗುತ್ತದೆ. ಅಳುಬುರುಕನಿಂದಲೇ ಬರೆಯಿಸಬೇಕೆಂದು ಶ್ರೀರಾಯರ ಚಿತ್ತದಲ್ಲಿದ್ದರೆ ಅವರೇ ಸಂತೋಷಪಡಲಿ! "ಅಪದ್ಯೋವಾ ಸುಪದ್ಯೋವಾ ಕುಂತೀಪುತ್ರೋವಿನಾಯಕಃ" ??

ನಗಬೇಕೆಂಬುವವರು ಇಂಥಾ ಪುಸ್ತಕವನ್ನೋದಿ ಅಳಬೇಕೆನ್ನುವರೇ ? ಪುಣ್ಯಶ್ಲೋಕರ ನಾಮಸ್ಮರಣೆ ಮಾಡುವರೇ ? ಪುನೀತರಾಗುವರೇ ?

ಜಿತಾಮಿತ್ರರಿಂದ ಆಶ್ರಮ ಪಡೆದರು, ರಾಮಚಂದ್ರಾಚಾರ್ಯರೆಂಬ ಗೃಹಸ್ಥರು. ರಘುನಂದನತೀರ್ಥರೆಂದು ಕರೆಸಿಕೊಂಡರು.

ಸಪ್ತರಾತ್ರಂ ಕೃಷ್ಣವೇಣ್ಯಾ ಮುಷಿತ್ವಾ ಪುನರುತ್ಥಿತಂ
ಜಿತಾಮಿತ್ರ ಗುರುಂವಂದೇ ವಿಬುಧೇಂದ್ರಕರೋದ್ಭವಂ ||

ಎಂಬ ಗುರುಗಳ ಚರಮ ಶ್ಲೋಕವನ್ನು ಹಾಡುತ್ತಲೇ ಮತ ರಾಜ್ಯಭಾರ ವಹಿಸಿದರು. ದೇಶಪರ್ಯಟನದಿಂದ ಮಹಾ ಖ್ಯಾತಿಯನ್ನು ಸಂಪಾದಿಸಿದರು. ತಮ್ಮ ಪರಮ ಗುರುಗಳಿಂದ ಸಾಧಿಸಲಸಾಧ್ಯವಾಗಿದ್ದ ಶ್ರೀಮೂಲ ರಾಮಾರ್ಚನೆಯ ಮಹಾ ಪುಣ್ಯವನ್ನು ಸಾಧಿಸಿದರು.

"ಪರೈರಪಹೃತಾ ಮೂಲರಾಮಾರ್ಚಾಗುರ್ವನುಗ್ರಹಾತ್"
ಏನಾನೀತಾನಮಸ್ತಸ್ಮೈ ರಘುನಂದನ ಭಿಕ್ಷವೇ''

ಎಂಬ ಚರಮ ಶ್ಲೋಕದಿಂದ ಕೊಂಡಾಡಿಸಿಕೊಳ್ಳುತ್ತಾ, ಮೂವತ್ತೇಳು ವರ್ಷಗಳಷ್ಟು ಕಾಲ ಸಂಸ್ಥಾನವಾಳಿ ಈ ಮಹಿಮರು ಪರಂಧಾಮ ಹೊಂದಿದರು. ಇವರ ಶಿಷ್ಯರೇ ಸುರೇಂದ್ರರು ವಿದ್ಯಾವಂತರು, ವಿರಕ್ತರು. ವಿರಕ್ತರು ಸಂಸ್ಥಾನವನ್ನು ನಡೆಸುವ ಬಗೆ ಹೇಗೆ? ಆಶ್ರಿತರನ್ನು ಸಂರಕ್ಷಿಸಬೇಕು. ಸಂರಕ್ಷಿಸಬೇಕೋ ಶಿಷ್ಯಾರ್ಜನೆ ಮಾಡಬೇಕು; ದೇಶಪರ್ಯಟನ ಮಾಡಬೇಕು. ಮೂಲ ರಾಮದೇವರನ್ನು ಹಟಹಿಡಿದು ಸಂಪಾದಿಸುತ್ತಲೇ, ಮಠ ಮತ್ಸರಕ್ಕೆ ಮೊದಲಾಯಿತು. ಮಠಾಧಿಪತಿಗಳಿಗಿಂತ ಅವರ ಹಿಂದೆ ಬಾಲ ಬಡಿಯುವ ಶಠರ ಹಾವಳಿ ಬಲವಾಯಿತು. ರಾಜರಕ್ಷಣೆ ಬೇಕಾಯಿತು. ಸುರೇಂದ್ರರು ಕರ್ಣಾಟಕ ಸಾಮ್ರಾಜ್ಯ ದೇವತಾ ಸ್ವರೂಪರಾದ ಶ್ರೀ ವ್ಯಾಸರಾಯರಿರುವ ವಿದ್ಯಾನಗರಕ್ಕೆ ಬಂದರು. ಯಾವ ವ್ಯಾಸರಾಯರ ದರ್ಶನಕ್ಕೆ ಬರಬೇಕಾದರೆ ಕರ್ಣಾಟಕ ಸಾಮ್ರಾಟನಾದ ಕೃಷ್ಣದೇವರಾಯನಂಥವನು ಮಠದ ಬಾಗಿಲಲ್ಲಿ ನಿಂತು:—

ದ್ವಾರಿ ಕೃಷ್ಣನೃಪತಿಸ್ಸಮೇತ್ಯಸಃ ಸ್ವಾಮಿನಸ್ಸಹ ಪುರೋಹಿತಾದಿಭಿಃ ||
ದರ್ಶನಾವಸರವೀಕ್ಷತೇಧುನಾ ಪಾಕಶಾಸನ ಇವಾಬ್ಜ ಜನ್ಮನಃ ||

ತಾ|| ಪುರೋಹಿತಾದಿಗಳಿಂದ ಸಹಿತನಾಗಿ ಕೃಷ್ಣದೇವರಾಯನು ಬ್ರಹ್ಮದೇವನ ದರ್ಶನಕ್ಕೆ ಇಂದ್ರದೇವನು ಬಾಗಿಲಲ್ಲಿ ಕಾದಿದ್ದಂತೆ ಕಾಯುತ್ತಿದ್ದನೆಂದು ಮಹಾಕವಿ ಸೋಮನಾಥನು ವರ್ಣಿಸಿರುವಾಗ ವ್ಯಾಸರಾಯರ ವೈಭವವೆಷ್ಟಿರಬೇಕು!

ಇಂಥಾ ಮಹಾಮಹಿಮೆಯನ್ನು ಪಡೆದ ಯತೀಶ್ವರರೆಂದರೆ ಆದಿಯಲ್ಲಿ ವಿದ್ಯಾರಣ್ಯರು ಮತ್ತೆ ಕೇಳಿದರೆ ವ್ಯಾಸರಾಯರು; ಇಂಥಾ ಸ್ಥಾನಮಾನ ಪ್ರಪಂಚದ ಇತಿಹಾಸದಲ್ಲಿ ಮತ್ತಾರಿಗಾದರಿದೆಯೆ? ವ್ಯಾಸರಾಯರಲ್ಲಿದ್ದದ್ದು ಆಧಿಪತ್ಯ ಮಾತ್ರವಲ್ಲ, ವಲ್ಲಭಾಚಾರ್ಯರಂಥಾ ತಮ್ಮಿಂದ ಪ್ರತ್ಯೇಕ ಮತಸ್ಥಾಪಕರು ಬಂದರೆ, ಅವರಿಗೂ ಮಹದಾಶ್ರಯಕೊಟ್ಟು ಸನ್ಮಾನಿಸುವ ಔದಾರ್ಯವೂ ಇತ್ತು.

ಸುರೇಂದ್ರರು ತಾವು ವಿದ್ಯಾನಗರಿಗೆ ಬರುವೆವೆಂದು ವ್ಯಾಸರಾಯರಿಗಾಗಲಿ ಸಾರ್ವಭೌಮನಿಗಾಗಲಿ ರಾಯಸವನ್ನು ಕಳುಹಿಸಲಿಲ್ಲ. ಸಾರ್ವಭೌಮ ಸಂಸ್ಥಾನದಲ್ಲಿ ಪ್ರವೇಶಿಸಲು ತಕ್ಕ ಲೌಕಿಕ ಅಟ್ಟಹಾಸವಿಲ್ಲವೆಂಬ ಸಂಕೋಚವವರನ್ನು ಬಾಧಿಸಿತು. "ತುಂಗಭದ್ರಾನದೀ ತೀರೇ ದೃಷ್ಟ್ವೋದ್ಯಾನಮನುತ್ತಮಂ |

ಸ್ನಾತ್ವಾನದ್ಯಾಂವನೇರಾಮಂ ಪೂಜಯದ್ಭಕ್ತಿಪೂರ್ವಕಂ ||೯|| IV ವಿ. ವಿ. ಎಂಬಂತೆ ತುಂಗಭದ್ರಾ ತೀರದಲ್ಲಿರುವ ರಾಜೋದ್ಯಾನದಲ್ಲಿ ತಮ್ಮ ಆಹ್ನಿಕ ಪೂಜೆಗಳನ್ನು ನೆರವೇರಿಸಿದರು ಈ ಸಂಗತಿ ವ್ಯಾಸರಾಯರಿಗೆ ತಿಳಿದಕೂಡಲೇ ಕೇಶವಾದಿ ಚತುರ್ವಿಂಶತಿ (೨೪) ಯತಿಗಳನ್ನೂ ವಾದಿರಾಜರನ್ನೂ ಕರೆದು ಕೊಂಡು ಹೀಗೇಕೆ ಮಾಡಿದಿರೆಂದು ಕೇಳುವುದಕ್ಕೋ ಎಂಬಂತೆ ರಾಜೋ ದ್ಯಾನಕ್ಕೆ ಬಂದರು. ಪರಸ್ಪರ ವಂದನೆಗಳೂ ಕುಶಲ ವಾರ್ತೆಗಳೂ ನಡೆದುವು. ವ್ಯಾಸರಾಯರೇ ಸುರೇಂದ್ರರ ದರ್ಶನಕ್ಕೆ ತೆರಳಿರುವರೆಂಬ ವಾರ್ತೆ ಕೇಳಿ ಕೃಷ್ಣ ದೇವರಾಯನೂ ಸ್ವಾಗತ ಸಲಕರಣೆಗಳಿಂದ ಸಹಿತನಾಗಿ ಉದ್ಯಾನವನ್ನು ಪ್ರವೇಶಿಸಿದನು. ಯತಿವೃಂದಕ್ಕೆ ನಮಸ್ಕರಿಸಿ ಮಹಾರಾಜನು ನೂತನ ಯತೀಂದ್ರರ್ಯಾರು, ಇವರ ಪರಂಪರೆ ಯಾವುದು, ಇವರಲ್ಲಿರುವ ಭಗವನ್ಮೂರ್ತಿ ಗಳ್ಯಾವವು, ಎಂದು ಮೊದಲಾಗಿ ಪ್ರಶ್ನೆ ಮಾಡಿದನು. ನಿರ್ಮತ್ಸರಿಗಳಾದ ವ್ಯಾಸರಾಯರು, ಪ್ರಭುವೇ ವಿಸ್ತಾರವಾಗಿ ಕೇಳಬೇಕೆಂದಿರುವ ಪುಣ್ಯ ಚರಿತ್ರೆ ಯನ್ನು ಪೂಜಾಕಾಲದಲ್ಲಿಯೇ ವಿಸರಿಸುವೆನೆಂದು ತಿಳಿಸಿ ಮಹೋತ್ಸವದಿಂದ ಸುರೇಂದ್ರರನ್ನು ರಾಜಗೃಹಕ್ಕೆ ಕರೆದೊಯ್ದರು. ಒಂದು ಕಡೆ ಇಪ್ಪತ್ತನಾಲ್ಕು ಯತೀಶ್ವರರಿಂದ ಕೈವಾರಿಸಿಕೊಳ್ಳುತ್ತಿರುವ ವ್ಯಾಸರಾಯರ ಕೃಷ್ಣ ಪೂಜೆ, ಮತ್ತೊಂದು ಕಡೆ ಶ್ರೀ ಮೂಲರಾಮ ದಿಗ್ವಿಜಯರಾಮ ಜಯರಾಮ ಮೂರ್ತಿ ಗಳಿಂದ ಶೋಭಿತವಾಗಿರುವ ಸುರೇಂದ್ರರ ಪೂಜೆ, ಒಂದು ಕಡೆ ಋಗ್ವೇದ ಪಾರಾಯಣ ಮತ್ತೊಂದು ಕಡೆ ಯಜುರ್ವೇದ ಪಾರಾಯಣ, ಈ ವಿಭವವನ್ನು ನೋಡಿ ಆನಂದಿಸುತ್ತಿರುವ ಸಾರ್ವಭೌಮನನ್ನು ಕುರಿತು ವ್ಯಾಸರಾಯರೇ ವಿವರಿಸಲಾರಂಭಿಸಿದರು ಸುರೇಂದ್ರ ಸದೃಶರಾದ ಈ ಸುರೇಂದ್ರರು ವಿಬುಧೇಂದ್ರ ವಂಶದಲ್ಲಿ ಬಂದ ಯತಿಶ್ರೇಷ್ಠರು. ಭಕ್ತಿ ವೈರಾಗ್ಯಗಳಲ್ಲಿ ಅಸದೃಶರು. ಈ ಮಹನೀಯರು ಆರಾಧಿಸುವ ಮೂಲರಾಮ ಪ್ರತೀಕವಾದರೋ, ಮಂತ್ರ ಶಾಸ್ತ್ರಾನುಸಾರ ವಿಶ್ವಕರ್ಮನಿಂದ ನಿರ್ಮಿತವಾಗಿ ಬ್ರಹ್ಮದೇವರ ಆರಾಧನೆ ಯಲ್ಲಿದ್ದು ಕ್ರಮೇಣ ಮನುವಿಗೂ ಸೂರ್ಯನಿಗೂ ಪ್ರಾಪ್ತವಾದ ಸೌಭಾಗ್ಯ ಮೂರ್ತಿಯು. ಸೂರ್ಯವಂಶದ ರಾಜರಿಂದೆಲ್ಲಾ ಆರಾಧಿತವಾದೀ ಭಗವನ್ಮೂರ್ತಿ ಯನ್ನು ತ್ರೇತೆಯಲ್ಲಿ ಶ್ರೀ ರಾಮಚಂದ್ರನೂ ಆರಾಧಿಸಿದನು. ಶ್ರೀ ರಾಮ ಚಂದ್ರನು ಮೃಗಯಾರ್ಥವಾಗಲಿ ದಿಗ್ವಿಜಯಾರ್ಥವಾಗಲಿ ಪ್ರಯಾಣಮಾಡಿ

ದಾಗ ತನಗೆ ಪತಿಸೇವೆ ದೂರವಾಗುವುದೆಂದು ಸೀತಾದೇವಿಯು ಪ್ರಾರ್ಥಿಸಲು ತನ್ನ ಪ್ರತಿನಿಧಿಯಾಗಿ ಕುಲಪರಂಪರೆಯಲ್ಲಿ ಬಂದಿರುವ ಈ ರಾಮನನ್ನು ಪೂಜಿಸೆಂದು ಸ್ವಾಮಿಯು ದೇವಿಗೆ ಅನುಗ್ರಹಿಸಿದನು. ಅಂದಿನಿಂದಲೇ ಮೂರ್ತಿಗೆ ಪರಿಚಯ ಸೌಲಭ್ಯಕ್ಕಾಗಿ ಮೂಲರಾಮನೆಂದು ಸೀತಾದೇವಿಯು ಕರೆದಳು. ಈ ಮೂರ್ತಿಯನ್ನೇ ಲಕ್ಷ್ಮಣ ಜಾಂಬವರುಗಳು ಆರಾಧಿಸಿದರು. ಇದೇ ಮೂರ್ತಿ ಸೌಭರಿ ಮುನಿಗಳಿಗೂ ಪ್ರಾಪ್ತವಾಯಿತು. ಸೌಭರಿ ಮುನಿಗಳು ಬ್ರಹ್ಮಲೋಕಸಾಧನೆ ಪೂರ್ತಿಯಾದಾಗ ಮಾರುತಿಯನ್ನು ಕರೆದು ಈ ಭಗವನ್ಮೂರ್ತಿಯನ್ನು ಆತನಿಗೆ ಒಪ್ಪಿಸಿದರು. ದ್ವಾಪರದಲ್ಲಿ ಸೌಗಂಧಿಕಾ ಪುಷ್ಪ ವ್ಯಾಜದಿಂದ ಆಂಜನೇಯ ಭೀಮಸೇನರಿಗೆ ಕಲಹವಾಗಿ ಪ್ರೇಮದಲ್ಲಿ ಪರ್ಯವಸಾನವಾಗಲು, ಜ್ಞಾಪಕಾರ್ಥವಾಗಿ ಇದೇ ಮೂಲ ರಾಮನನ್ನು ಆಂಜನೇಯನು ಭೀಮಸೇನನಿಗೆ ಕೊಟ್ಟನು. ಧರ್ಮರಾಜಾದಿಗಳೆಲ್ಲಾ ಪೂಜಿಸಿದ ಮೂರ್ತಿಯು ಪಾಂಡವ ಸಂತತಿಯಲ್ಲಿ ಕಲಿಯುಗದ ಒಂದು ಸಾವಿರ ವರುಷದವರೆಗಿದ್ದು ಸಂತತಿ ನಷ್ಟವಾಗುತ್ತಲೇ ಗಜಪತಿ ಅರಸರ ಕೈಸೇರಿತು. ಈ ಪೂರ್ವ ಚರಿತ್ರೆಯನ್ನೆಲ್ಲಾ ಅರಿತ ಸರ್ವಜ್ಞರಾದ ಶ್ರೀಮನ್ಮಧ್ವಾಚಾರ್ಯರು ಈ ಮೂರ್ತಿಯನ್ನು ಸಂಪಾದಿಸುವುದಕ್ಕಾಗಿ ನರಹರಿ ತೀರ್ಥರನ್ನು ನೇಮಿಸಿದರು. ಅನಂತರ ನರಹರಿ ತೀರ್ಥರು ಗಜಪತಿರಾಜ್ಯವನ್ನಾಳಿದ ಕಥೆ, ಮಹಾರಾಣಿಯೂ ರಾಜಕುಮಾರನೂ ಮೂಲ ರಾಮನನ್ನು ತೀರ್ಥರಿಗೆ ಪಾರಿತೋಷಕವಾಗಿ ಕೊಟ್ಟ ಕಥೆ, ಈ ಮೂರ್ತಿಯನ್ನು ಮಧ್ವಾಚಾರ್ಯರು ಪೂಜಿಸಿ ಪದ್ಮನಾಭತೀರ್ಥರಿಗೆ ಕೊಟ್ಟ ಕಥೆ, ಇದೇ ಮೂರ್ತಿ ಗುರುಪರಂಪರೆಯಲ್ಲಿ ಸುರೇಂದ್ರರಿಂದ ಆರಾಧಿತವಾಗುತ್ತಿರುವ ಪ್ರತ್ಯಕ್ಷವೃತ್ತಾಂತ, ಅನಂತರ ಮಧ್ವಾಚಾರ್ಯರಿಂದ ಆರಾಧಿತವಾದ ದಿಗ್ವಿಜಯ ರಾಮಚರಿತ್ರೆ, ಟೀಕಾಚಾರ್ಯಕರಾರ್ಚಿತವಾದ ಜಯರಾಮಚರಿತ್ರೆ, ಇವೆಲ್ಲವನ್ನೂ ವಿಸ್ತಾರವಾಗಿ ತಿಳಿಸಿದರು ಇಂಥಾ ಪುಣ್ಯತಮವೂ ರಹಸ್ಯದಲ್ಲಿ ರಹಸ್ಯವೂ ಎನಿಸಿದ ಚರಿತ್ರೆಯನ್ನು ಕೇಳಿ ಮಹಾರಾಜನು ಪರಮಾನಂದಭರಿತನಾದನು. ಸುರೇಂದ್ರರಿಗೆ ಅನರ್ಘ್ಯಗಳಾದ ಧನಕನಕ ವಾಹನಗಳನ್ನರ್ಪಿಸಿ ಇಂಥಾ ಮಹಾತ್ಮರ ದರ್ಶನ ಮಾಡಿಸಿದಿರೆಂದು ವ್ಯಾಸರಾಯರಿಗೆ ಸಾಷ್ಟಾಂಗ ಪ್ರಣಾಮ ಮಾಡಿದನು.

ಅನಂತರ ಒಂದು ದ್ವಾದಶೀ ಪಾರಣೆಯ ಕಾಲ ! ಸುರೇಂದ್ರರು ವ್ಯಾಸರಾಯರ ಅತಿಥಿಗಳಾಗಿದ್ದಾರೆ ! ಆಪೋಶನ ಹಿಡಿದಿದ್ದಾರೆ ! ವ್ಯಾಸರಾಯರು ಸ್ವೀಕರಿಸಬೇಕೆಂದು ಉಪಚಾರೋಕ್ತಿಗಳನ್ನಾಡುತ್ತಿದ್ದಾರೆ! ಆಗ ಸುರೇಂದ್ರರು ನಾನು ಭಿಕ್ಷು ! ಅತಿಥಿ ! ಎಂದರು. ವ್ಯಾಸರು ಹೌದು ನನಗೆ ತಾವು ನಾರಾಯಣ ಸ್ವರೂಪರು ಆಪೋಶನ ತೆಗೆದುಕೊಳ್ಳಬೇಕೆಂದರು. ಸುರೇಂದ್ರರು ನಾನು ಕೇಳುವುದನ್ನು ಕೊಡುವಿರಾ ಎಂದರು. ವ್ಯಾಸರಾಯರು ಮಠ ಸರ್ವಸ್ವವೂ ತಮ್ಮದೇ ಎಂದರು. ಜಡವಸ್ತುಗಳನ್ನು ನಾನು ಕೇಳಲಿಲ್ಲವೆಂದು ಸುರೇಂದ್ರರು ನುಡಿದರು. ಚೇತನವಸ್ತುವನ್ನು ಬೇಡುವಿರಾದರೆ ನಾನೇ ತಮ್ಮವನೆಂದು ವ್ಯಾಸರು ನುಡಿದರು. ತಮ್ಮ ಭಿಕ್ಷವನ್ನು ನಾನು ಬೇಡಲಿಲ್ಲವೆಂದರು ಸುರೇಂದ್ರರು. ವಿಷ್ಣುತೀರ್ಥರೊಬ್ಬರ ವಿನಾ ಎಲ್ಲವೂ ಎಲ್ಲರೂ ತಮ್ಮವರೇ ಎಂದರು ವ್ಯಾಸರು. ನಾನು ಬಂದಷ್ಟೇ ವಿಷ್ಣುತೀರ್ಥರಿಗಾಗಿ ಎಂದರು ಸುರೇಂದ್ರರು.

ವ್ಯಾಸರಾಯರಿಗೆ ಧರ್ಮಸಂಕಟಕ್ಕಿಟ್ಟಿತು. ತಮ್ಮ ಪೀಠದಲ್ಲಿ ಕೂಡಿಸಬೇಕೆಂದಿದ್ದ ವಿಷ್ಣುತೀರ್ಥರನ್ನು ಕೇಳುತ್ತಿರುವರಲ್ಲಾ ಎಂಬ ವಿಚಾರ ಮನಸ್ಸಿನಲ್ಲಾಯಿತು. ಆಗಲಿ ಭಗವದಿಚ್ಛೆಯೆಂದು ವ್ಯಾಸರಾಯರು ನುಡಿದರು. ಸುರೇಂದ್ರರು ಆಪೋಶನವನ್ನು ಸ್ವೀಕರಿಸಿದರು. ವ್ಯಾಸರಾಯರು, ಸುರೇಂದ್ರರೇ, ತಾವು ವಿಶ್ವಾಮಿತ್ರ ಮುನಿಗಳಂತೆ ದಯಮಾಡಿಸಿರುವಿರಿ, ಸಂತೋಷದಿಂದ ಭಿಕ್ಷ ಸ್ವೀಕಾರಮಾಡಬೇಕೆಂದರು. ಸುರೇಂದ್ರರು – ಪರಮಾನಂದ! ಪರಮಾನಂದ! ವಿಶ್ವಾಮಿತ್ರರಂತೆ ಬರದಿದ್ದರೆ ನಮ್ಮ ಧರ್ಮರಕ್ಷಣೆ ಆಗುವ ಬಗೆ ಹೇಗೆಂದು ನುಡಿದರು. ಇಂದು ವ್ಯಾಸಭಗವಾನರು ಸುರೇಂದ್ರ ಮುನಿಗೆ ಕೊಟ್ಟ ಭಿಕ್ಷವಿದಲ್ಲ. ಮೂಲರಾಮನಿಗೇ ಕೊಟ್ಟ ಭಿಕ್ಷೆಯೆಂದು ಅತಿಥಿಗಳು ಸಂತೋಷ ಪ್ರದರ್ಶನಮಾಡಿದರು. ವ್ಯಾಸರಾಯರಾದರೋ— ಹಾಗೇಕೆ ? ಗೋಪಾಲಕೃಷ್ಣದೇವರೇ ಸುರೇಂದ್ರಮುನಿಗಳಿಗೆ ಕೊಟ್ಟ ಭಿಕ್ಷೆಯೆಂದು ತಿಳಿಯಬೇಕೆಂದು ನುಡಿದರು.

ಸುರೇಂದ್ರರ ಸಂತೋಷಕ್ಕೆ ಪಾರವಿಲ್ಲದಂತಾಯಿತು. ಮಾತು ಮಾತಿಗೆ ಆನಂದಬಾಷ್ಪಗಳನ್ನುದುರಿಸಿದರು. ನಮ್ಮ ಮೂಲರಾಮನಿಗೆ ಇಂದೇ ವನವಾಸ ಪೂರ್ತಿಯಾಯಿತು ; ಇಂದು ತಾವು ಕೊಟ್ಟ ಭಿಕ್ಷ ನಮ್ಮ ರಾಮನಿಗೆ

ಭಾರದ್ವಾಜಾಶ್ರಮದ ರಾಜಪೌತಣ; ನಿಮಗೆ ಅನಂತಪ್ರಣಾಮಗಳು ಎಂದು ಸಂತುಷ್ಟರಾದರು.

## ವಿಷ್ಣುತೀರ್ಥರಿಗೆ ವ್ಯಾಸರಾಯರ ಹಿತೋಪದೇಶ

ಭಗವದನುಗ್ರಹದಿಂದ ನೀವು ಚತುಷ್ಷಷ್ಟಿ ಕಲಾಕೋವಿದರಾದಿರಿ. ನಿಮ್ಮ ನಿಷ್ಠೆ ನಿಮ್ಮ ಸತತೋದ್ಯೋಗಗಳಿಂದ ನಿಮಗೆ ದೈವಾನುಕೂಲವಾಯಿತು. ಭಾರತಭೂಮಿಯಲ್ಲಿ ಈ ಕಾಲದಲ್ಲಿ ಕೋಟಿಗೊಬ್ಬರೂ ಚತುಷ್ಷಷ್ಟಿ ಕಲಾವಿದರಿಲ್ಲದಂತಾಗಿದೆ. ಒಂದು ಜನ್ಮದಲ್ಲಿ ಒಂದು ವಿದ್ಯಾಪಾರಂಗತನಾಗುವುದೇ ಮಾನವನಿಗೆ ದುರ್ಲಭವಾಗಿದೆ. ಇದು ಕಲಿಗಾಲ; ಜನರು ಅಲ್ಪಾಯುಷರು, ಅಲ್ಪಬಲರು, ಅಲ್ಪಬುದ್ಧಿಯವರು, ಅಹಂಮಾನಿಗಳು; ಕಿಂಚಿತ್ ವಿದ್ಯಾ ಪ್ರಾಪ್ತಿಯಾದರೂ ವಿದ್ಯೆಯನ್ನು ದುರ್ವಾದದಲ್ಲಿ ವಿನಿಯೋಗಿಸುವರು. ಅನಧಿಕಾರಿಗಳಿಗೀ ವಿದ್ಯೆಯನ್ನುಪದೇಶಿಸಬಾರದು. ವಾದಿನಿಗ್ರಹದಲ್ಲೂ ಈ ವಿದ್ಯೆಗಳನ್ನು ಪ್ರಯೋಗಿಸಕೂಡದು. ಪರಕಾಯ ಪ್ರವೇಶವನ್ನಂತು ನೀವು ಯತಿಗಳಾದ ಕಾರಣ ಮಾಡಲೇಕೂಡದು. ಆಕರ್ಷಣ ಉಚ್ಚಾಟನ ವಿದ್ಯೆಗಳನ್ನು ಅತ್ಯಂತ ಪ್ರಬಲ ಕಾರಣವಿದ್ದ ವಿನಾ ಪ್ರಯೋಗಿಸಿ ತೋರಿಸಬಾರದು. ದಕ್ಷಿಣ ದೇಶದಲ್ಲಿ ತಾಂತ್ರಿಕ ಮತಗಳೂ ಕೌಳ ಮಾರ್ಗಗಳೂ ಬಹು ಪ್ರಬಲವಾಗಿವೆ. ಅವರು ಭಾಗವತ ಧರ್ಮವನ್ನು ಬಲು ದ್ವೇಷಿಸುತ್ತಾರೆ. ನಿಮ್ಮ ಕಾರ್ಯಕ್ಷೇತ್ರವು ಆ ಕಾರಣದಿಂದ ದಕ್ಷಿಣ ದೇಶವಾಗಿರಬೇಕು. ಕುಂಭಕೋಣೆಯಲ್ಲಿ ನೀವು ವಾಸಮಾಡಬೇಕು. ತ್ರಾಂತಿಕರ ಚಾಟು ವಿದ್ಯೆಗಳಿಂದಲೂ ವಿಷ ಪ್ರಯೋಗಗಳಿಂದಲೂ ನೀವು ಯಾವಾಗಲೂ ಜಾಗರೂಕರಾಗಿರಬೇಕು. ಕೋಪವನ್ನು ಶಾಂತಿಯಿಂದಲೂ, ದ್ವೇಷವನ್ನು ಪ್ರೀತಿಯಿಂದಲೂ, ಅಜ್ಞಾನವನ್ನು ಜ್ಞಾನದಿಂದಲೂ, ಅನೀತಿಯನ್ನು ನೀತಿಯಿಂದಲೂ, ಭೋಗವನ್ನು ತ್ಯಾಗದಿಂದಲೂ ಜಯಿಸುವುದೇ ನಮ್ಮ ಮತದ ಸಾರತತ್ವ. ವಿದ್ಯಾಪೀಠದಲ್ಲಿ ಪಟ್ಟಾಭಿಷೇಕವಾಗುವ ಕಾಲಕ್ಕೆ ಮೂಲರಾಮನೇ ನಿಮ್ಮ ಸೇವೆಯನ್ನು ಬಯಸಿ ಬಂದನು. ಸುರೇಂದ್ರರ ಪೀಠವಾದರೂ ವಿದ್ಯಾಪೀಠವೇ. ಆ ಪೀಠದಲ್ಲಿದ್ದು ಸಾಧಿಸಬೇಕಾದ ಕಾರ್ಯವಿಶೇಷಗಳಿರುವ ಕಾರಣ ಸುರೇಂದ್ರರನ್ನಿಲ್ಲಿಗೆ ಕರೆತಂದನು. ನಾವಾದರೂ ಒಮ್ಮೆ ನಿಮ್ಮ ಪೀಠದಲ್ಲಿ ಬಂದೇವು! ಎಂಬುದಾಗಿ ವ್ಯಾಸರಾಯರು ವಿಷ್ಣುತೀರ್ಥರಿಗೆ ಹಿತೋಪದೇಶಮಾಡಿದರು.

ವಿಷ್ಣುತೀರ್ಥರು ವ್ಯಾಸರಾಯರನ್ನಗಲಬೇಕಾಯಿತಲ್ಲಾ, ಎಂದು ತಲೆ ತಗ್ಗಿಸಿ ನಿಂತವರು ಮಾತುಮಾತಿಗೆ ಮಹದಾಜ್ಞಾ ಮಹದಾಜ್ಞಾ ಎಂದು ಮಾತ್ರ ನುಡಿದು ಉಭಯ ಗುರುಗಳಿಗೂ ಪ್ರಣಾಮ ಮಾಡಿದರು. ಸುರೇಂದ್ರರು ವಿಷ್ಣುತೀರ್ಥರನ್ನು ಸುಮುಹೂರ್ತದಲ್ಲಿ ಪುತ್ರತ್ವೇನ ಸ್ವೀಕಾರ ಮಾಡಿ ದಂಡಭೇದ ಮಂತ್ರೋಪದೇಶಗಳಿಂದ ನೂತನ ನಾಮಕರಣಮಾಡಿ ವಿಜಯೀಂದ್ರರೆಂದು ಕರೆದರು.

ಸುರೇಂದ್ರರು ಪ್ರಯಾಣ ಮಂಗಳಾವಸರದ ಕೊನೆಯ ದರ್ಶನದಲ್ಲಿ ವ್ಯಾಸರಾಯರೊಡನೆ ಏಕಾಂತದಲ್ಲಿ ಕುಳಿತು "ಸ್ಯಾನ್ನಃ ಪುನರ್ದರ್ಶನಂ, ಸ್ಯಾನ್ನಃ ಪುನರ್ದರ್ಶನಂ," ಎನ್ನುತ್ತಾ ಆನಂದ ಬಾಷ್ಪಗಳಿಂದ—"ವ್ಯಾಸ ಭಗವಾನರೆ, ತಾವು ಅಭಿನವವ್ಯಾಸರು ; ವೇದವ್ಯಾಸರ ಪ್ರಸ್ಥಾನತ್ರಯಗಳು ಹೇಗೋ ಹಾಗೆ ತಮ್ಮಿಂದ ರಚಿತವಾಗಿರುವ ತರ್ಕತಾಂಡವ ನ್ಯಾಯಾಮೃತ ಚಂದ್ರಿಕಾಗ್ರಂಥಗಳು ನಮ್ಮ ಮತದ ಪ್ರಸ್ಥಾನತ್ರಯಗಳು ; ತಾವು ಮತೋದ್ಧಾರಕರು ಮಾತ್ರವಲ್ಲ, ನಮ್ಮ ಮಠೋದ್ಧಾರಕರೂ ಆದಿರಿ ; ಮಠ ಭೇದ ಗಳಿಂದ ಜನರ ಮತಿ ಭೇದವಾಗಿರುವುದಕ್ಕೆ ಮಾತ್ರ ಚಿಂತಿಸಬೇಕಾಗಿದೆ. ನಮ್ಮ ಮಠದ ಅಭಿಮಾನ ತಮಗಿರಬೇಕು ; ನಮ್ಮ ಮಠವೇ ತಮ್ಮ ಮಠ ಎಂದರು.

ವ್ಯಾಸರಾಯರು—ಸುರೇಂದ್ರರೇ, ತಮಗೆ ಇನ್ನೂ ತಿಳಿಸಬೇಕಾದ ರಹಸ್ಯವೊಂದಿರುವುದು. ಸರ್ವಜ್ಞಶಾಸ್ತ್ರಾಧ್ಯಯನಮಾಡಿ ಅಪರೋಕ್ಷಕರಾಗಿ ಜೀವನ್ಮುಕ್ತರಾದರೂ, ಭಕ್ತಜನರು ಸರ್ವಜ್ಞರಾಯರ ಸೇವಾನಿಮಿತ್ತ ವಾಗಿಯೂ, ಮತ್ತು ಕಲಿಯುಗದಲ್ಲಿ ಜನ್ಮತಾಳುವ ಸಜ್ಜನರ ನಿಮಿತ್ತ ವಾಗಿಯೂ, ಜನ್ಮತಾಳಿ ಬರಬೇಕಾಗುವುದು ಶ್ರೀಮದಾಚಾರ್ಯರವರ ಅವತಾರ ತ್ರಯಗಳಲ್ಲೂ ಪೂಜೆಗೊಂಡ ಶ್ರೀಮೂಲರಾಮನ ಸೇವೆ ಸಾಮಾನ್ಯ ವಾಗಿ ಲಭಿಸುವುದಲ್ಲ. ವಿಬುಧೇಂದ್ರರಂಥವರು ಸಹ ಅದೇ ಚಿಂತೆಯಿಂದ ಪುನಃ ಜನ್ಮತಾಳಿ ವಿಜಯೀಂದ್ರರ ರೂಪದಿಂದ ತಮಗೆ ಶಿಷ್ಯರಾಗಿ ಬಂದಿರು ವರು. ಜಿತಾಮಿತ್ರರೂ ಕಾಲಕ್ರಮದಲ್ಲಿ ತಮ್ಮ ಪೀಠವನ್ನು ಅಲಂಕರಿಸಿ ಮೂಲರಾಮನ ಸೇವೆಗೈಯುವರು. ನಾನಾದರೂ ತಮ್ಮ ಪೀಠದಲ್ಲಿ ಒಮ್ಮೆ ಕುಳಿತೇನು. ಈ ಜನ್ಮದಿಂದ ಪೂರ್ತಿಯಾಗದ ಸೇವೆಯನ್ನು ಶ್ರೀಹರಿಗೆ

ಸಮರ್ಪಣೆ ಮಾಡೇನು ! ತಿಳಿಯಿತೇ ಪೀಠಪ್ರಭಾವ ! ಎಂದು ಪರವಶರಾಗಿ ಕುಳಿತರು.

ಸುರೇಂದ್ರರ ಸ್ಥಿತಿಯಂತೂ ಅವರ್ಣನೀಯವಾಯಿತು. ವ್ಯಾಸರಾಯರ ಪಾದಗಳಿಗೆ ನಮಸ್ಕರಿಸಿದರು. ವ್ಯಾಸರಾಯರು ಪ್ರತಿಯಾಗಿ ನಮಸ್ಕರಿಸಿದರು. ದೂರದಲ್ಲಿದ್ದ ವಿಜಯೀಂದ್ರರೂ ತಮ್ಮ ವಿದ್ಯಾಗುರುಗಳಿಗೆ ಅನಂತ ಪ್ರಣಾಮಗಳನ್ನು ಮಾಡಿದರು. ರಾತ್ರಿಮಂಗಳದ ಕಾಲವಾಯಿತು, ಸೇವಕರು ಪರಾಕು ಹೇಳಿದರು. ಸುರೇಂದ್ರರು ವಿಜಯೀಂದ್ರರೊಡನೆ ಪಲ್ಲಕ್ಕಿಯಲ್ಲಿ ಕುಳಿತರು. ವ್ಯಾಸರಾಯರು ನೆಟ್ಟ ಕಣ್ಣುಗಳಿಂದ ದಿಟ್ಟಿಸಿ ನೋಡುತ್ತಾ ಅನಿಮಿಷರಂತಾದರು. ಬಲು ಹೊತ್ತು ಕಣ್ಣು ಕಣ್ಣುಗಳೇ ಕಲೆತು ಅಮೃತ ವೃಷ್ಟಿಗರೆದವು.

—— ೦ ——

ಶ್ಲಾಘಾಕಂಪನ ಏಕ ಏವ ಶಿರಸಃ ಶ್ರೀವ್ಯಾಸಯೋಗೀಶಿತುಃ ।
ಮೇರೂಣಾಂ ಶತಪೂರ್ತಿಕ್ಷಿತಿಫಲೀ ವಿದ್ಯಾಸುವಿದ್ಯಾವತಾಂ ॥

ಎಂಬದಾಗಿ ವ್ಯಾಸಯೋಗಿ ಚರಿತೆಯನ್ನು ಚಂಪೂಕಾವ್ಯವಾಗಿ ಬರೆದ ಸೋಮನಾಥ ಕವಿಯು ಹೇಳಿರುತ್ತಾನೆ. ಅಂದರೆ—ಸೋಮನಾಥ ಕವಿಯನ್ನು ನೋಡಿ ಸಹಿಸದ ಮತ್ತು ವ್ಯಾಸರಾಯರ ಮಹೋನ್ನತಿಗೆ ದುಃಖಿಸುತ್ತಿದ್ದ ಕೆಲವು ಕುತ್ಸಿತ ಮನೋವೃತ್ತಿಯ ಪಂಡಿತರುಗಳು, ಕವಿಯ ಬುದ್ಧಿ ಭೇದನಮಾಡಿ ವಿದ್ಯಾನಗರಿಯಿಂದ ಕಳುಹಿಸಿಬಿಡಬೇಕೆಂದು ಯೋಚಿಸಿ, 'ಅಯ್ಯಾ ಸೋಮನಾಥ ! ಒಬ್ಬ ಮಾಧ್ವ ಸನ್ಯಾಸಿಯ ಆಶ್ರಯದಲ್ಲೇಕಿರುವೆ, ಕಳಿಂಗ ರಾಜನ ಸಭೆಗೆ ಹೋಗು, ಅಲ್ಲಿ ನಿನಗೆ ಮಹಾ ಮನ್ನಣೆ ದೊರೆಯುತ್ತದೆ, ಗ್ರಾಮ ಭೂಮಿಗಳ ಮಾನ್ಯಸಿಗುತ್ತದೆ, ಅಲ್ಲಿ ನೀನೇ ನೀನಾಗಿರುವೆ'ಯೆಂದು ಬೋಧಿಸಿದರಂತೆ ! ಜಾಣಾಕ್ಷ ಕವಿಯು ಆ ಕುತ್ಸಿತ ಜನರನ್ನು ಕುರಿತು ಮೇಲ್ಕಂಡ ಶ್ಲೋಕಾರ್ಥದಲ್ಲಿ ಹೇಳಿದಂತೆ—"ಶ್ರೀ ವ್ಯಾಸಯೋಗಿಗಳು ನಾನು ವಾಕ್ಯಾರ್ಥ ಮಾಡುವಾಗ, ಅವಧಾನ ವಿದ್ಯಾಪ್ರದರ್ಶನ ಮಾಡುವಾಗ, ಒಂದು ಸಲ ತಲೆ ದೂಗಿದರೆಂದರೆ, ಅದೇ ನನಗೆ ನೂರು ಮೇರು ಪರ್ವತಗಳು ದೊರೆತಂತೆ" ಎಂಬದಾಗಿ ಹೇಳಿದನಂತೆ.

ಇಂಥಾ ವ್ಯಾಸರಾಯರ ಮುಖ್ಯ ಶಿಷ್ಯರು ವಿಜಯೀಂದ್ರರು. ಇವರನ್ನು ಶಿಷ್ಯರನ್ನಾಗಿ ಪಡೆದು ಸುರೇಂದ್ರರು ದಿಗ್ವಿಜಯಾರ್ಥ ಹೊರಟರೆ ಮನ್ನಿಸದವರಾರು ? ಚೋಳಮಂಡಲ ತುಂಡೀರಮಂಡಲಗಳಲ್ಲಿ ಹೆಜ್ಜೆ ಹೆಜ್ಜೆಗೂ ಬ್ರಾಹ್ಮಣರ ಅಗ್ರಹಾರಗಳು. ಎಲ್ಲಿ ನೋಡಿದರೂ ವೇದಾಧ್ಯಯನ ಶಾಸ್ತ್ರ ಪ್ರವಚನಗಳು. ಕಾಷಾಯಧಾರಿ ಯತಿಗಳೆಂದರೇ ಮನುಷ್ಯ ಮಾತ್ರರಿಗೆ ಗೌರವ. ತರ್ಕವ್ಯಾಕರಣ ಮೀಮಾಂಸಾ ಶಾಸ್ತ್ರಗಳೆಂದರೆ ಮತತ್ರಯದವರಿಗೂ ಸಮಾನ. ಸಂಚರಿಸಿದೆಡೆಗಳಲ್ಲಿ ದಿನವೂ ವಿದ್ವತ್ಸಭೆ, ದಿನವೂ ವಾಕ್ಯಾರ್ಥ, ಯಾವ ವಾಕ್ಯಾರ್ಥದಲ್ಲೂ ವಿಜಯೀಂದ್ರರ ಪ್ರಶಂಸೆ ವಿನಾ ಅನ್ಯಮಾತುಗಳಿರಲಿಲ್ಲ. ಉತ್ತರ ಮೀಮಾಂಸಾ ಶಾಸ್ತ್ರದ ವಿಚಾರ ಬಂದೊಡನೆಯೇ ಇದು ನಮ್ಮ ಮತಪ್ರಕ್ರಿಯೆ, ವಾದದಲ್ಲಿ ವಿರೋಧ ಬರಬಾರದು, ಎಂದು ಆಗತಾನೆ ಪ್ರಚಾರಕ್ಕೆ ಬರುತ್ತಿದ್ದ ವ್ಯಾಸತ್ರಯಗಳ ಯುಕ್ತಿಗಳನ್ನನುವಾದಿಸಿ ಸಿದ್ಧಾಂತ ಮಾಡುತ್ತಿದ್ದರು. ನೂತನ ವಾದಸರಣಿಗೆ ಜನರು ತಲೆದೂಗುತ್ತಿದ್ದರು. ಮನವೊಪ್ಪಿದವರು ಶಿಷ್ಯರಾಗುತ್ತಿದ್ದರು. ಹೀಗೆ ಬೆಳೆಯಿತು ವಿಜಯೀಂದ್ರರ ಖ್ಯಾತಿ. ಗುರುಗಳಾಜ್ಞೆಯಂತೆ ವಿಜಯೀಂದ್ರರು ಕುಂಭಕೋಣೆಯನ್ನು ಸೇರಿದರು. ಅದನ್ನೇ ತಮ್ಮ ಮುಖ್ಯಸ್ಥಾನವನ್ನಾಗಿ ಮಾಡಿಕೊಂಡರು.

ಸುರೇಂದ್ರರಾದರೋ—ಸಂಸ್ಥಾನದ ಸಕಲ ಭಾರವನ್ನೂ ವಿಜಯೀಂದ್ರರಿಗೊಪ್ಪಿಸಿ ಮಿತ ಪರಿವಾರದೊಡನೆ ತೀರ್ಥಾಟನೆ ಮಾಡುತ್ತಾ ಪಂಪಾಕ್ಷೇತ್ರಕ್ಕೆ ಬಂದು ಶಾಲೀವಾಹನಶಕ ೧೪೬೧ ನೇ ವಿಕಾರಿ ಸಂವತ್ಸರ ಪುಷ್ಯ ಶುದ್ಧ ದ್ವಾದಶಿಯ ದಿನ ಬೃಂದಾವನಸ್ಥರಾದರು.

ಆ ಕಾಲದಲ್ಲಿ ಕುಂಭಕೋಣೆಯು ವೈದಿಕ ವಿದ್ಯಾಪಾರಂಗತರಿಗೆ ಕೇಂದ್ರಸ್ಥಾನವಾಗಿತ್ತು. ಅಧ್ಯಯನ ಮಾಡದ ಬ್ರಾಹ್ಮಣನಿರಲಿಲ್ಲ. ಶಾಸ್ತ್ರಪಾರಂಗತರ ಸಂಖ್ಯೆ ಹೇರಳವಾಗಿತ್ತು. ತಂಜಾವೂರಿನ ನಾಯಕರಾಜರ ಆಶ್ರಯವು ವಿದ್ವಜ್ಜನಗಳಿಗೆ ವಿಶೇಷವಾಗಿತ್ತು.

## ಅಪ್ಪಯ್ಯ ದೀಕ್ಷಿತರು

ಅಪ್ಪಯ್ಯ ದೀಕ್ಷಿತರೆಂಬ ಮಹಾ ಪಂಡಿತರು ವಿಶೇಷತಃ ಕುಂಭಕೋಣೆಯಲ್ಲಿ ವಾಸವಾಗಿರುತ್ತಿದ್ದರು. ದೀಕ್ಷಿತರ ಶಿಷ್ಯರು ಇವರನ್ನು "ಪಂಡಿತ

ಸಾರ್ವಭೌಮ, ಅಪರಶಂಕರಾಚಾರ್ಯ'' ಎಂಬ ಬಿರುದುಗಳಿಂದ ಹೊಗಳು ತ್ತಿದ್ದರು ಸಿದ್ಧಾಂತ ರತ್ನಾಕರವೆಂಬ ಗ್ರಂಥದಲ್ಲಿ ಶಿವಾಧಿಕ್ಯ ವಿಸ್ತರಣಾವಸರದಲ್ಲಿ ದೀಕ್ಷತರನ್ನು—

**ಮಧ್ವಧ್ವಾಂತಾದಿ ವಿಧ್ವಂಸನ ದಿನಮಣಿ ಬೌದ್ಧ ಸಿದ್ಧಾಂತವನ್ಯಾ**
**ವಹ್ನಿಃ ಪಾಷುಂಡ ಷಂಡೋರಗ ಫಣಪಟಲೋ ದಂಡತುಂಡಾಂಡ**
**ಜೇಂದ್ರಃ**
**ದೃಪ್ಯದ್ರಾಮಾನುಜೋದ್ಯದ್ಧರಣಿ ಧರಮಹಾದಂಭ ದಂಭೋಲಿಕೇಲಿಃ**
**ಶೈವಾಚಾರಾಬ್ಧಿ ಚಂದ್ರಃ ಸಜಯತಿ ಕವಿರಾಡಪ್ಪಯಾಖ್ಯಾಧ್ವರೀಂದ್ರಃ॥**

ಎಂಬುದಾಗಿ ಸಹ ಕೊಂಡಾಡಿದ್ದಾರೆ. ಮಧ್ವರಾಮಾನುಜ ಬೌದ್ಧ ಮೊದಲಾದ ಮತಗಳಿಗೆಲ್ಲಾ ದೀಕ್ಷಿತರು ಮಹಾ ವಿರೋಧಿಗಳೆಂದೂ ಈ ಮತಗಳನ್ನಿವರು ಧ್ವಂಸ ಮಾಡಿದವರೆಂದೂ ಮೇಲ್ಕಂಡ ಶ್ಲೋಕದಿಂದಲೇ ವ್ಯಕ್ತವಾಗುತ್ತದೆ. ಅದ್ವೈತ ಮತದಲ್ಲಿ ಶ್ರೀ ಶಂಕರಾಚಾರ್ಯರಂತೆ ವಿದ್ಯಾರಣ್ಯರೂ ಅಪ್ಪಯ್ಯ ದೀಕ್ಷಿತರೂ ಬಹು ಗಣ್ಯಸ್ಥಾನವನ್ನು ಪಡೆದಿರುತ್ತಾರೆ. ದೀಕ್ಷಿತರು ಹರಿಹರರಿಗೆ ಅಭೇದ ಹೇಳುತ್ತಲೇ ತಮ್ಮ ಗ್ರಂಥಗಳಲ್ಲಿ ಮಾತ್ರ ಶಿವಾಧಿಕ್ಯವನ್ನು ಪ್ರತಿ ಪಾದಿಸಿರುತ್ತಾರೆ. ರಾಮಾಯಣದಂಥಾ ವಿಷ್ಣುಪರ ಗ್ರಂಥವನ್ನು ಶಿವಪರವಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಮಹಾ ಭಾರತಕ್ಕೂ ಶಿವಪಾರಮ್ಯ ಪ್ರಖ್ಯಾಪಕ ವಾದ ಭಾರತ ತಾತ್ಪರ್ಯ ಸಂಗ್ರಹವೆಂಬ ಗ್ರಂಥವನ್ನು ಬರೆದಿರುತ್ತಾರೆ. ಶಂಕರಾಚಾರ್ಯರು ಖಂಡಿಸಿದ ಶೈವಮತಗಳನ್ನಿವರು ಉದ್ಧರಿಸಿ ಆಯಾ ಭಾಷ್ಯ ಗಳಿಗೆ ವಾಖ್ಯಾನ ಮಾಡಿರುತ್ತಾರೆ. ಅನೇಕ ಕಾವ್ಯನಾಟಕ ಅಲಂಕಾರ ಲಕ್ಷಣ ಗ್ರಂಥಗಳನ್ನು ರಚಿಸಿರುವುದು ಮಾತ್ರವಲ್ಲದೆ ಶಾಸ್ತ್ರದಲ್ಲಿ ಸಹ ಇವರ ಗ್ರಂಥಗಳು ಹೇರಳವಾಗಿವೆ. ನಾರಾಯಣ ಶಬ್ದವನ್ನು ಶಿವಪರವಾಗಿ ಅರ್ಥಮಾಡಲು ದೀಕ್ಷಿತರು ಮಾಡಿರುವ ಸಾಹಸವೇ ಒಂದು ದೊಡ್ಡ ಗ್ರಂಥವಾಗಿದೆ. ದೀಕ್ಷಿತರು ಚತುಷ್ಷಷ್ಟಿ ಕಲಾಕೋವಿದರಾಗಿದ್ದರೆಂದು ಆದೇಶಿಯರು ಹೇಳುತ್ತಾರೆ. ದ್ವಿಷಷ್ಟಿ ಕಲಾವಿದರೆಂದು ಬಲ್ಲ ಕೆಲಜನರು ಹೇಳಿದ್ದಾರೆ. ರಾಮಾನುಜ ಮತ ಖಂಡನೆ ಮಾಡುವುದರಲ್ಲಿ ಕಟುತರವಾದ ಶಬ್ದಯೋಜನೆಮಾಡಿ "ರಾಮಾನುಜಶೃಂಗ ಭಂಗ" ವೆಂಬ ಗ್ರಂಥವನ್ನು ಬರೆದಿದ್ದಾರೆ. ಶಿವಾರ್ಚನಾಚಂದ್ರಿಕಾ ಎಂಬ

ಗ್ರಂಥದಲ್ಲಿ ರಾಮಾನುಜರಿಗೂ ಮಾಧ್ವರಿಗೂ ಬಲವಾದ ಪೆಟ್ಟನ್ನು ಕೊಟ್ಟಿದ್ದಾರೆ. ಆ ಶ್ಲೋಕವಾದರೋ—

ಸಂಚಾರಿತೇಽಪಿ ನಮತೇಷ್ವಯುತೇಕ್ಷಿತೇನ
ದೋಷಾನುಪಾಲಬಾಹತೆ ಮತಂ ಮತದ್ವಯಂಸ್ಥಿತಸ್ತ್ವಂ
ಶೃಂಗಿತ್ವಮಪ್ಯುಪವೃಷೇಷು ಚ ವಾಹನಸ್ತ್ವಂ
ಹಾರಿದ್ರ ಚೂರ್ಣಮುಬಲಾ ಬಂಚ ಬಂಗಡೀಷು ||

ಇಷ್ಟೇ ಅಲ್ಲದೆ ದೀಕ್ಷಿತರು "ಮಧ್ವತಂತ್ರಮುಖಮರ್ದನ" ಎಂಬ ಗ್ರಂಥವನ್ನೂ ಇದಕ್ಕೆ ವ್ಯಾಖ್ಯಾನ ರೂಪವಾದ "ಮಧ್ವಮತವಿಧ್ವಂಸನ" ಗ್ರಂಥವನ್ನೂ ರಚಿಸಿರುತ್ತಾರೆ. ಈ ಗ್ರಂಥಗಳನ್ನು ಪ್ರತಿ ಮಾಧ್ವರೂ ಓದುವುದರಿಂದ ತಮ್ಮ ವಿಚಾರ ಸರಣಿಯನ್ನು ಬೆಳೆಸಿದಂತಾಗುತ್ತದೆ. ಆದರೂ ದೀಕ್ಷಿತರು ಮಧ್ವಮತಾನುಸಾರಿಯಾದ "ನ್ಯಾಯ ಮುಕ್ತಾವಳಿ" ಯೆಂಬ ಗ್ರಂಥ ಬರೆದಿರುವುದು ವಂದನಾರ್ಹವಾಗಿದೆ. ಒಟ್ಟು ದೀಕ್ಷಿತರು ರಚಿಸಿರುವ ಗ್ರಂಥಗಳ ಸಂಖ್ಯೆ ೧೦೪ ಎಂದು ತಜ್ಞರು ಹೇಳುತ್ತಾರೆ. ಇವರ ಅನೇಕ ಗ್ರಂಥಗಳು ಸಂಸ್ಕೃತ ಶಾಲೆಗಳ ಪಠ್ಯಪುಸ್ತಕಗಳಾಗಿವೆ.

ದೀಕ್ಷಿತರು ಶಂಕರಾದ್ವೈತ ಪ್ರತಿಪಾದಕರಾಗಿರಲಿ, ಅಥವಾ ಅವರಿಂದ ಬೇರೆಯಾದ ತಮ್ಮದೇ ಬೇರೊಂದು ಅದ್ವೈತ ಸರಣಿಯ ಪ್ರವರ್ತಕರಾಗಿರಲಿ, ಮತ ಖಂಡನೆಯಲ್ಲಿ ಕಟುತರ ಟೀಕೆಮಾಡಿರಲಿ, ಅಥವ ತನ್ಮತಾನುಸಾರಿ ಗ್ರಂಥವನ್ನು ಬರೆದಿರಲಿ, ಹಂಚಿದರು ಒಂದೇ ಎನಲಿ, ಅಥವಾ ಹರನೇ ದೊಡ್ಡವನೆನ್ನಲಿ; ಇವರು ಬಹು ದೊಡ್ಡ ಪಂಡಿತರು, ಕವಿಗಳು ಬಹು ತೀವ್ರ ಬುದ್ಧಿಯುಳ್ಳವರು, ಅನೇಕ ಯಜ್ಞಾಚರಣೆ ಮಾಡುವ ಮಹಾ ಕರ್ಮಯೋಗಿಗಳು, ಭರತ ಭೂಮಿಯಲ್ಲಿ ವೈದಿಕ ಧರ್ಮವಿರುವವರೆಗೆ ಇವರ ಹೆಸರು ಮರೆಯುವಂತಿಲ್ಲ.

ಇಷ್ಟೊಂದು ಯೋಗ್ಯತೆಯಿದ್ದುದರಿಂದಲೇ ದೀಕ್ಷಿತರಿಗೂ ವಿಜಯೀಂದ್ರರಿಗೂ ಪರಿಚಯವಾಯಿತು. ಪರಿಚಯವು ಮೈತ್ರಿಯಾಗಿ ಪರಿಣಮಿಸಿತು. ಶಾಸ್ತ್ರವಾದದಲ್ಲಿ ದೀಕ್ಷಿತರನ್ನು ನೋಡದಿದ್ದರೆ ವಿಜಯೀಂದ್ರರಿಗೆ ಬೆಳಗಾಗುತ್ತಿರಲಿಲ್ಲ. ಸ್ವಾಮಿಗಳನ್ನು ಕಾಣದಿದ್ದರೆ ದೀಕ್ಷಿತರಿಗೆ ಬೆಳಗಾಗುತ್ತಿರಲಿಲ್ಲ. ವಿಜಯೀಂದ್ರರು ವ್ಯಾಸರಾಯರಂತೆ ಮಹಾ ಶಾಂತಮೂರ್ತಿಗಳಾಗಿದ್ದುದರಿಂದ ವಾದದಲ್ಲಿ ಲೇಶವಾದರೂ ವಿಕಾರಕ್ಕೊಳಗಾಗುತ್ತಿರಲಿಲ್ಲ.

ಕಟುತರ ಟೀಕೆಗಳನ್ನು ನಗುತ್ತಲೇ ಕೇಳಿ ಲೀಲಾಜಾಲವಾಗಿ ನಗುತ್ತಲೇ ಖಂಡಿಸುತ್ತಿದ್ದರು. ದೀಕ್ಷಿತರು ಸ್ವಾಮಿಗಳ ಶಾಂತ ಮನೋಭಾವಕ್ಕೆ ತಲೆ ದೂಗುತ್ತಿದ್ದರು. ತಾತಾಚಾರ್ಯರಿಗೂ ದೀಕ್ಷಿತರಿಗೂ ಉಂಟಾದ ವ್ಯಕ್ತಿವೈರಸ್ಯ ವಿಜಯೀಂದ್ರರಿಗೂ ದೀಕ್ಷಿತರಿಗೂ ಆಗಲಿಲ್ಲ ದೀಕ್ಷಿತರ ಪ್ರತಿಗ್ರಂಥಗಳನ್ನೂ ವಿಜಯೀಂದ್ರರು ಅವಲೋಕಿಸಿದರು. "ಮಧ್ವತಂತ್ರ ಮುಖಮರ್ದನ"ವನ್ನೂ "ಮಧ್ವಮತ ವಿಧ್ವಂಸನ" ವನ್ನೂ ದೀಕ್ಷಿತರ ಮುಖದಿಂದಲೇ ಸ್ವಾಮಿಗಳು ಶ್ರವಣಮಾಡಿದರು. ದೀಕ್ಷಿತರು ಗ್ರಂಥವನ್ನು ಪಠಿಸಿದಂತೆಲ್ಲಾ ಸ್ವಾಮಿಗಳು ತಲೆದೂಗುತ್ತಿದ್ದರು. ತಮ್ಮ ವಾದಸರಣಿ ಸ್ವಾಮಿಗಳ ಮನಸ್ಸಿಗೆ ಒಪ್ಪಿತೆಂದೇ ದೀಕ್ಷಿತರು ಸಂತುಷ್ಟರಾದರು. ಪಠಸಮಾಪ್ತಿಯಲ್ಲಿ ಮನವುಬ್ಬಿ

**ತಥಾಪ್ಯಾನಂದ ತೀರ್ಥೀಯಂ ಮತಮಗ್ರಾಹ್ಯಮೇವನಃ**
**ಯತ್ರ ವೈದಿಕಮರ್ಯಾದಾ ಭೂಯಸ್ಯಾಕುಲತಾಂಗತಾ ||**

ಎಂಬ ಶ್ಲೋಕವನ್ನು ಓದಿ ಸಮ್ಮತವಾಗಿದೆಯೇ ವಿಧ್ವಂಸನಗ್ರಂಥ! ಎಂದರು. ಸ್ವಾಮಿಗಳು, ಆಹಾ! ಬಲು ಚೆನ್ನಾಗಿದೆ, ಆಕ್ಷೇಪವೇನಿದೆ ! ಎಂದರು. ದೀಕ್ಷಿತರು ಸ್ವಲ್ಪ ವಿನೋದ ಮಾಡಬೇಕೆಂದು, ಭಸ್ಮರುದ್ರಾಕ್ಷಗಳು ಸಿದ್ಧ ವಾಗಿವೆಯೆಂದರು. ವಿಜಯೀಂದ್ರರು ಅದೇ ಭಾಷೆಯಲ್ಲಿ ಗೋಪೀಚಂದನ ಇನ್ನೂ ಗಟ್ಟಿಯಾಗಿದೆಯೆಂದರು. ಹಾಗಿದ್ದರೆ ಶ್ಲೋಕ ಕೇಳಿ ಸಮ್ಮತಿಸಿದ ಕಾರಣವೇನೆಂದು ದೀಕ್ಷಿತರು ಕೇಳಿದರು. ಸ್ವಾಮಿಗಳು ಶ್ಲೋಕವನ್ನು ಯಾರನ್ನು ಸಂಬೋಧಿಸಿ ಹೇಳಿದಿರಿ ಎಂದು ಕೇಳಿದರು. ತಮ್ಮನ್ನು ಸಂಬೋಧಿ ಸಿದೆನೆಂದು ದೀಕ್ಷಿತರು ಉತ್ತರ ಕೊಟ್ಟರು. ಅವರಲ್ಲಿ ಒಂದು ಅನುಸ್ವಾರ ತೆಗೆದುಬಿಟ್ಟರೆ ಸಂಬೋಧನೆ ಸರಿಯಾಗುವುದೆಂದು ಸ್ವಾಮಿಗಳು ನುಡಿದರು. ದೀಕ್ಷಿತರು ಕಕ್ಕುಬಿಕ್ಕಾಗಿ ತಲೆಯನ್ನು ಸವರಿಕೊಂಡರು. ಸ್ವಾಮಿಗಳು ನಕ್ಕರು. ದೀಕ್ಷಿತರೂ ನಕ್ಕರು. ಸ್ವಾರಸ್ಯವಿಷ್ಟೇ. ತಥಾಪ್ಯಾನಂದ ತೀರ್ಥೀಯಂ ಮತಂ ಎಂದು ಮೂಲದಲ್ಲಿದೆ. ಶ್ಲೋಕ ತಾತ್ಪರ್ಯವಾದರೋ "ಆದರೂ ಆನಂದ ತೀರ್ಥಸಂಬಂಧವಾದ ಮತವು ನಮಗೆ ಅಗ್ರಾಹ್ಯವೇ, ಏಕೆಂದರೆ ವೇದ ಶೃತಿಗಳಿಗೆ ಅರ್ಥಮಾಡುವ ಮರ್ಯಾದೆಯು ವ್ಯಾಕುಲಿತವಾಗಿದೆ." ಶ್ಲೋಕವನ್ನು ಸಂಬೋಧಿಸಿದಂತೆ ಹೇಳಿದರೆ "ತಥಾಪ್ಯಾನಂದ ತೀರ್ಥೀಯ ಮತಮಗ್ರಾಹ್ಯಮೇವನಃ" ಎಂದಾಗುತ್ತದೆ. ಅಂದರೆ-ಆದಕಾಲಕ್ಕೂ ಆನಂದ

ತೀರ್ಥಸಂಬಂಧಿಯಾದ ಹೇ ವಿಜಯೀಂದ್ರ ಮುನಿಯೇ, ನಮ್ಮ ಮತವು ಅಂದರೆ ಅದ್ವೈತ ಮತವು ನಮಗೆ ಅಗ್ರಾಹ್ಯವೇ! ಎಂದು ಹೇಳಿಕೊಂಡಂತಾಗುತ್ತದೆ. ಇದರಿಂದ ದೀಕ್ಷಿತರಿಗೆ ಸ್ವವ್ಯಾಹತಿ ಬಂದಂತಾಗುತ್ತದೆ.

ಅದ್ವೈತ ಮತದ ಸಾರವಾದರೋ ಜಗತ್ತು ಮಿಥ್ಯಾ, ಜೀವನೇ ಬ್ರಹ್ಮ, ಎಂದಾಗಿರುತ್ತದೆ ದ್ವೈತಮತದ ಸಾರವಾದರೋ ಜಗತ್ತು ಸತ್ಯ, ಜೀವೇಶ್ವರರಿಗೆ ಭೇದ ಎಂದಾಗಿರುತ್ತದೆ. ಈ ಮೂಲ ತತ್ವಗಳನ್ನು ಗುರಿಯಾಗಿಟ್ಟುಕೊಂಡು ಉಭಯ ಮತೀಯರೂ ವೇದ ಶ್ರುತಿಗಳಿಗೆ ಅರ್ಥಮಾಡುತ್ತಾರೆ. ಉಭಯಮತೀಯರೂ ಶ್ರುತಿಗಳಿಗೆ ಅರ್ಥಮಾಡುವಾಗ ಶಿಕ್ಷಾವ್ಯಾಕರಣ ನಿರುಕ್ತ ಮೊದಲಾದ ವೇದಾಂಗ ಭೂತವಾದ ಶಾಸ್ತ್ರಗಳ ಮರ್ಯಾದೆಯನ್ನನುಸರಿಸುತ್ತಾರೆ. ಇಲ್ಲೇ ಒಬ್ಬರ ದಾರಿ ಒಬ್ಬರಿಗೆ ಒಪ್ಪಿತವಾಗುವುದಿಲ್ಲ. ಇದಕ್ಕಾಗಿಯೇ ಒಬ್ಬೊಬ್ಬರೂ ಲಕ್ಷ ಲಕ್ಷ ಗ್ರಂಥಗಳನ್ನು ಬರೆಯುತ್ತಾರೆ. ಕೋಟಿ ಕೋಟಿಯಾಗಿ ವಾದಿಸುತ್ತಾರೆ. ಈ ಬಗೆಯ ದ್ವೈತಾದ್ವೈತ ವಾದಗಳು ಜಗದಾದಿಯಿಂದ ಜಗದಂತ್ಯದವರೆಗೂ ಬಗೆ ಹರಿಯುವುದಿಲ್ಲ ಎರಡು ಸಮಾನಾಂತರ ರೇಖೆಗಳನ್ನೆಳೆದು ಒಂದಕ್ಕೊಂದು ಕೂಡುವುದೆಲ್ಲಿ ಎಂದು ಕೇಳಿದರೆ ಬರುವ ಉತ್ತರವ್ಯಾವುದೋ ದ್ವೈತಾದ್ವೈತಗಳು ಕೂಡುವುದೆಲ್ಲಿ ಎಂದು ಕೇಳಿದರೆ ಬರುವ ಉತ್ತರವೂ ಅದೇ.

ಜ್ಞಾನಾರ್ಥಿಯಾದ ಯಾವ ಸಾಧಕನಾದರೂ ನಾನಿದ್ದೇನೆ, (ಜೀವ) ವೇದ ಶಾಸ್ತ್ರಗಳಿವೆ, ಈಶ್ವರನಿದ್ದಾನೆ, ಎಂದು ನಂಬಿ ಶಾಸ್ತ್ರವ್ಯಾಸಂಗಕ್ಕಾರಂಭಿಸುತ್ತಾನೆ. ನಾನೇ ಈಶ್ವರ (ಬ್ರಹ್ಮ) ನೆಂದು ಶಾಸ್ತ್ರಕ್ಕೆ ಕೈಹಾಕುವುದಾದರೆ ಶಾಸ್ತ್ರ ಯಾರಿಗೆ? ವಿಧಿ ನಿಷೇಧ ಬೋಧಕವಾದ ಶಾಸ್ತ್ರವನ್ನು ಈಶ್ವರನು ತನಗಾಗಿ ತಾನೇ ಮಾಡಿಕೊಂಡನೆ? ಹೀಗೆ ಯೋಚಿಸಿದರೆ ರಾಜನಾದವನು ತಾನು ಮಾಡಿಸಿದ ಬೇಡಿಯನ್ನು ತನ್ನ ಕಾಲಿಗೆ ತಾನೇ ಹಾಕಿಕೊಂಡಂತಾಗುವುದಿಲ್ಲವೆ? ಇದೆಂದಿಗೂ ಅಸಂಭಾವಿತ ಅದ್ವೈತಿಗಳು ಮೊದಲಾಗಿ ಸಕಲರೂ ಮಾಡುವ ಯಜ್ಞಾದಿ ಕರ್ಮಗಳು ಯಾರಿಗಾಗಿ, ಏತಕ್ಕಾಗಿ? ಈಶ್ವರನು ಪಡೆಯದಿರುವುದ್ಯಾವುದು, ಪಡೆಯಬೇಕಾದ್ದು ಯಾವುದು? ಆದ್ದರಿಂದ ಐಕ್ಯ ಭಾವವನ್ನು ಚಿಂತಿಸದೆ ಸಹಜವಾಗಿರುವ ಜೀವೇಶ್ವರ ಭೇದವನ್ನು ನಂಬಿ ಭಗವದಾರಾಧನೆಮಾಡಿ ಸದ್ಗತಿಯನ್ನು ಪಡೆಯಬೇಕೆಂಬುದೇ

ಸಕಲ ಮಾನವರ ಹೃದಯದಿಂದ ಹುಟ್ಟಿಬರುವ ಸ್ವಾಭಾವಿಕವಾದ ನಿಷ್ಕಳಂಕ ವಾಣಿ. ಹೀಗೆ ಪ್ರತಿವಾದಿಸುವುದೇ ಮಧ್ವಮತ, ಮಾಧ್ವರೆಂದಿಗೂ ಶಾಸ್ತ್ರವನ್ನೆದುರಿಸಿ ಶೃತಿ ಮಾತೆಯನ್ನು ಹಿಂಸಿಸಿ ಅರ್ಥಮಾಡುವರಲ್ಲ ಎಂಬ ಅಭಿಪ್ರಾಯಗಳನ್ನಿಟ್ಟುಕೊಂಡು ವಿಜಯೀಂದ್ರರು ಯಾವ ವಾದಿಗಳೊಡನಾದರೂ ವಾದಿಸಿದರು. ಸ್ವಾಮಿಗಳ ಮತ್ತು ದೀಕ್ಷಿತರ ವಾದಗಳು ನಿರಂತರ ನಡೆದರೂ ವೈರಸ್ಯ ಹುಟ್ಟಲಿಲ್ಲ. ವ್ಯಕ್ತಿ ದ್ವೇಷಕ್ಕೆ ಕಾರಣವಾಗಲಿಲ್ಲ.

ವಿಜಯೀಂದ್ರರಾದರೂ ದೀಕ್ಷಿತರಂತೆ ೧೦೪ ಗ್ರಂಥಗಳನ್ನು ರಚಿಸಿದರು.

**ಚಾತುರ್ಯೆಸ್ತ್ಯ ಕಾಕೃತಿರ್ಯಶ್ಚತುರಧಿಕ ಶತಗ್ರಂಥರತ್ನಪ್ರಣೇತಾ**
**ಧೂತಾರಾತಿಪ್ರಬಂಧಃ ಸ್ಫುಟವಿದಿತ ಚತುಷ್ಷಷ್ಟಿ ವಿದ್ಯಾವಿಶೇಷಃ**
**ಸೋಽಯಂ ನಸ್ಸುರೇಂದ್ರ ಪ್ರತಿವರತನಯೋಽದ್ವೈತವಿದ್ಯಾಸಹಿಷ್ಣುಃ**
**ಪುಷ್ಣಾತು ಶ್ರೀವಿಜಯೀಂದ್ರ ಸ್ತ್ರಿಭುವನವಿದಿತಸ್ಸರ್ವತಂತ್ರಸ್ವತಂತ್ರಃ ||**

ಎಂಬ ಶ್ಲೋಕದಿಂದ ಸಹ ವಿಜಯೀಂದ್ರರು ೧೦೪ ಗ್ರಂಥಕರ್ತರೆಂಬುವುದೂ, ಚತುಷ್ಷಷ್ಟಿ ಕಲಾವಿಶಾರದರೆಂಬುವುದೂ ಮತ್ತೊಮ್ಮೆ ಸ್ಪಷ್ಟವಾಗುತ್ತದೆ. ಇನ್ನೂ ಶತಮಾನಗಳಿಂದ ಪ್ರಸಿದ್ಧವಾಗಿ ಕೇಳಿಕೆಯಾಗಿ ಸಿಂತಿರುವ "ದೀಕ್ಷಿತರಿಗೂ ವಿಜಯೀಂದ್ರರಿಗೂ ಪತ್ರಿಕಾ ಪ್ರಸಂಗದ ವ್ಯಾಖ್ಯಾರ್ಥಗಳು ಜರುಗಿದಾಗ ದೀಕ್ಷಿತರು ಮಧ್ವಮತ ಖಂಡನೆಮಾಡಿ ಯಾವದಾದರೂ ವಿಷಯವನ್ನು ಪುಸ್ತಕದಲ್ಲಿ ಬರೆದಿಟ್ಟರೆ, ಆ ಪುಸ್ತಕವನ್ನು ವಿಜಯೀಂದ್ರರು ತಮ್ಮ ಆಕರ್ಷಣ ವಿದ್ಯಾಬಲದಿಂದ ಬರಮಾಡಿಕೊಂಡು, ಖಂಡನಾ ಪತ್ರದಲ್ಲಿ ಕೆಳಗಡೆಯಲ್ಲೇ ಮಂಡನ ವಾಕ್ಯಗಳನ್ನು ಬರೆದು ಉಚ್ಚಾಟನ ವಿದ್ಯಾಸಾಮರ್ಥ್ಯದಿಂದ ಪುಸ್ತಕವನ್ನು ಇದ್ದಲ್ಲಿ ಇರುವಂತೆ ಮಾಡುತ್ತಿದ್ದರು. ಇದನ್ನು ನೋಡಿ ದೀಕ್ಷಿತರು ಆಶ್ಚರ್ಯಪಡುತ್ತಿದ್ದರು" ಎಂಬ ಕೇಳಿಕೆಯು ದೀಕ್ಷಿತರ ಆಶ್ಚರ್ಯಕ್ಕಿಂತ ಹೆಚ್ಚಿನ ಆಶ್ಚರ್ಯವನ್ನು ಉಂಟುಮಾಡುತ್ತಿದೆ. ಇದರಿಂದಲೇ ದೀಕ್ಷಿತರಿಗೆ ಚತುಷ್ಷಷ್ಟಿ ಕಲೆಗಳ ಪೈಕಿ "ಆಕರ್ಷಣ ಉಚ್ಚಾಟದ" ವಿದ್ಯೆಗಳ ಪರಿಶ್ರಮವಿರಲಿಲ್ಲೆಂದು ಸ್ಪಷ್ಟವಾಗುತ್ತದೆ.

ದೀಕ್ಷಿತರು ಬರೆದ ಮಧ್ವತಂತ್ರಮುಖಮರ್ದನ, ಮಧ್ವಮತ ವಿಧ್ವಂಸನ ಗ್ರಂಥಗಳಿಗೆ ಪ್ರತಿಯಾಗಿ ವಿಜಯೀಂದ್ರರು "ಮಧ್ವಮುಖಭೂಷಣ ಮತ್ತು ಅಪ್ಪಯ್ಯ ಕಪೋಲಚಪೇಟಿಕಾ" ಎಂಬ ಗ್ರಂಥಗಳನ್ನು ಬರೆದಿದ್ದಾರೆ.

ಆ ಕಾಲದಲ್ಲಿ ದ್ವೈತಾದ್ವೈತ ವಾದಗಳು ಯಾವ ಗಾಂಭೀರ್ಯದಿಂದ ನಡೆದವೋ ಅದೇ ಗಾಂಭೀರ್ಯದಿಂದ ವಿಶಿಷ್ಟಾದ್ವೈತ ಅದ್ವೈತ ವಾದಗಳು ನಡೆಯಲಿಲ್ಲ. ವಿವಾದಗಳು ವ್ಯಕ್ತಿ ದ್ವೇಷಕ್ಕೆ ಕಾರಣವಾದವು. ಅದ್ವೈತ ಪಕ್ಷದ ನಾಯಕರು ಅಪ್ಪಯ್ಯ ದೀಕ್ಷಿತರಾದರೆ ವಿಶಿಷ್ಟಾದ್ವೈತ ಪಕ್ಷದ ನಾಯಕರು ತಾತಾಚಾರ್ಯರಾದರು. ಶಿವವಿಷ್ಣು ದೇವಾಲಯಗಳಂಥಾ ದಕ್ಷಿಣ ದೇಶದ ದೊಡ್ಡ ಸಂಸ್ಥೆಗಳು ವಾದ ರಣರಂಗಗಳಾದುವು. ಬಲು ಹೀನ ತರಗತಿಯ ಪಾಪ ಕಾರ್ಯಗಳು ನಡೆದುವು. ಅದೇ ಕುಂಭಕೋಣೆಯಲ್ಲಿ ಮಾತ್ರ ಶಾರ್ಙಪಾಣಿ, ಚಕ್ರಪಾಣಿ, ಕುಂಭೇಶ್ವರ ದೇವಾಲಯಗಳಂಥಾ ದೊಡ್ಡ ಸಂಸ್ಥೆಗಳು ವಿಜಯೀಂದ್ರರ *ಆಡಳಿತಕ್ಕೊಳಪಟ್ಟರೂ ದೇವಾಲಯಗಳು ಮಾತ್ರ ವಾದ ರಂಗಗಳಾಗಲಿಲ್ಲ.

ವೇದಾಂತ ವಾಕ್ಯಾರ್ಥದಲ್ಲಿ ದೀಕ್ಷಿತರಿಗೆ ವಿಜಯೀಂದ್ರರು ಅಜೇಯರೆನಿಸಿದರು. ಮುಖತಃ ವ್ಯಾಕ್ಯಾರ್ಥಮಾಡಲಿ, ಪತ್ರ ಪ್ರಸಂಗದ್ವಾರಾ ವಾದಿಸಲಿ, ಗ್ರಂಥರಚನೆ ಮಾಡಲಿ, ಎಲ್ಲಕ್ಕೂ ಸರಿಸರಿಯಾಗಿ ನಿಂತು ವಾದ ಮಾಡಿ ಗ್ರಂಥರಚನೆ ಸಹ ಮಾಡಿದ ಕಾರಣ ವಿಜಯೀಂದ್ರರ ಖ್ಯಾತಿ ಹೆಚ್ಚಿತು. ದೀಕ್ಷಿತರ ವ್ಯಾಕುಲ ಬಹಳವಾಯಿತು.

ಹೀಗಿರಲು ರಾಮೇಶ್ವರ ಯಾತ್ರಾ ನಿಮಿತ್ತ ಹೊರಟಿದ್ದ "ಭಟ್ಟೋಜೀ ದೀಕ್ಷಿತ"ರೆಂಬ ಮಹಾ ಪ್ರಸಿದ್ಧ ವ್ಯಾಕರಣ ಪಂಡಿತರು ಸಂಚಾರ ಕ್ರಮದಲ್ಲಿ ವಿಜಯೀಂದ್ರರ ಖ್ಯಾತಿಯನ್ನು ಕೇಳಿ ಅವರ ದರ್ಶನಾರ್ಥವಾಗಿ ಕುಂಭಕೋಣೆಗೆ ಬಂದರು. ಸ್ವಾಮಿಗಳು ಭಟ್ಟೋಜೀ ಎಂಬ ಹೆಸರು ಕೇಳಿದ ಕೂಡಲೇ ಬಹಳವಾಗಿ ಅವರನ್ನು ಸನ್ಮಾನಿಸಿದರು ಸಿದ್ಧಾಂತ ಕೌಮುದೀ ಮೊದಲಾದ ಪ್ರಸಿದ್ಧ ಗ್ರಂಥಕರ್ತರೇ ಇವರಾದ ಕಾರಣ ಇವರಿಗೂ ಸ್ವಾಮಿಗಳಿಗೂ ವ್ಯಾಕರಣದಲ್ಲಿ ಪ್ರಸ್ತಾಪಗಳಾದವು. ಭಟ್ಟೋಜೀಗಳು ಬರೆದಿರುವ ಅನೇಕ ಸಂಗತಿಗಳು ವ್ಯಾಕರಣ ಮಹಾಭಾಷ್ಯಕ್ಕೆ ವಿರೋಧವಾಗಿರುವುದನ್ನು ಸ್ವಾಮಿಗಳು ತೋರಿಸಿಕೊಟ್ಟರು. ಆದಕ್ಕೆ ಭಟ್ಟೋಜೀಗಳು ತಕ್ಕ ಸಮರ್ಥನೆಗಳನ್ನು ಹೇಳಿದರು. ಆ ಸಮಾಧಾನಗಳು ಪುಷ್ಟಿಕರಗಳಾಗಲಿಲ್ಲ. ಮಹಾ ವಿದ್ವಾಂಸರೆಂದು

*ಕುಂಭೇಶ್ವರ ದೇವಾಲಯದ ಕಲ್ಲುಗೋಡೆಯ ಮೇಲೆ ವಿಜಯೀಂದ್ರರು ಕುಂಭಕೋಣೆಯ ದೇವಾಲಯಗಳ ಮುಖ್ಯಾಧಿಕಾರ ಮಾಡುತ್ತಿದ್ದರೆಂಬರ್ಥದ ಲೇಖನವಿದೆ.

ವಿಜಯೀಂದ್ರರೇನೋ ಅವರನ್ನು ಬಹಳವಾಗಿ ಸನ್ಮಾನಿಸಿದರು ನನ್ನಂತೆ, ವ್ಯಾಕರಣದಲ್ಲಿ ಗ್ರಂಥರಚನೆ ಮಾಡದಿದ್ದರೂ ವಿಜಯೀಂದ್ರರು ಇಷ್ಟೊಂದು ಪ್ರಬಲರಾಗಿರುವರಲ್ಲಾ ಎಂಬ ವ್ಯಾಕುಲ ಭಟ್ಟೋಜೀಗಳಿಗಾಯಿತು ಆ ಕಾಲದಲ್ಲಿ ಅಪ್ಪಯ್ಯ ದೀಕ್ಷಿತರು ಚಿದಂಬರದಲ್ಲಿದ್ದರು. ಅವರನ್ನೂ ಆ ಕ್ಷೇತ್ರವನ್ನೂ ದರ್ಶನ ಮಾಡಿಬಿಡೋಣವೆಂದೇ ಭಟ್ಟೋಜೀಗಳು ಚಿದಂಬರಕ್ಕೆ ಬಂದರು. ಅಪ್ಪಯ್ಯ ದೀಕ್ಷಿತರು ಭಟ್ಟೋಜೀಗಳೊಡನೆ ವ್ಯಾಕರಣದಲ್ಲಿ ಮಾತನಾಡಿದರು. ವಿಜಯೀಂದ್ರರ ಬಳಿ ನಡೆದ ಸಮಾಚಾರವನ್ನೆಲ್ಲಾ ಕೇಳಿ, ಮಹಾಭಾಷ್ಯಕ್ಕೆ ವಿರೋಧವಾಗಿರುವ ವಿಷಯಗಳಲ್ಲಿ ನಿಮ್ಮ ಸಮರ್ಥನೆಯೂ ಸರಿಯಾಗಿದೆಯೆಂದು ಅಭಯಕೊಟ್ಟರು. ರಾಮೇಶ್ವರ ಯಾತ್ರಾ ಮುಗಿಸಿ ಇಲ್ಲಿಗೇ ಬರಬೇಕೆಂದು ನಿಬಂಧನೆ ಮಾಡಿದರು. ಅದರಂತೆ ಭಟ್ಟೋಜೀಗಳು ದೀಕ್ಷಿತರ ಬಳಿಗೆ ಬಂದರು. ಆಗ ಅಪ್ಪಯ್ಯ ದೀಕ್ಷಿತರು ಭಟ್ಟೋಜೀಗಳಿಗೆ ಅದ್ವೈತ ವೇದಾಂತವನ್ನುಪದೇಶಿಸಿ ನನಗೆ ಏನು ಗುರುದಕ್ಷಿಣೆ ಕೊಡುವಿರೆಂದು ಕೇಳಿದರು ವಿದ್ಯಾರೂಪವಾಗಿ ಏನು ದಕ್ಷಿಣೆ ಕೊಡಬೇಕೆಂದರೂ ಕೊಡುವೆನೆಂದು ಭಟ್ಟೋಜೀಗಳು ಹೇಳಿದರು. ಹಾಗಿದ್ದರೆ ಯಾರಿಂದಲೂ ಅಜೇಯರಾಗಿರುವ ಈ ವಿಜಯೀಂದ್ರರನ್ನು ಜೈಸಬೇಕು. ನಾನು ಮಧ್ವತಂತ್ರ ಮುಖಮರ್ದನ, ಮಧ್ವಮತ ವಿಧ್ವಂಸನಗಳೆಂಬ ಎರಡು ಗ್ರಂಥಗಳಲ್ಲೂ ದಿಗ್ದರ್ಶನ ಮಾಡಿದಂತೆ ಖಂಡನೆಗಳನ್ನು ಬರೆದದ್ದರಿಂದ ವಿಜಯೀಂದ್ರರು ಅದನ್ನೆಲ್ಲಾ ಮಧ್ವಮುಖ ಭೂಷಣ ಮತ್ತು ಚಪೇಟಿಕಾ ಗ್ರಂಥಗಳಿಂದ ಖಂಡಿಸಿಬಿಟ್ಟರು. ನೀವು ಈ ನಾಲ್ಕು ಗ್ರಂಥಗಳನ್ನೂ ನೋಡಿ ಇವೆಲ್ಲಕ್ಕೂ ಬಲಿಷ್ಠವಾದ ಒಂದು ಗ್ರಂಥ ಬರೆದು ಅದರಲ್ಲಿ ಮಧ್ವಮತವನ್ನು ಚನ್ನಾಗಿ ಖಂಡಿಸಿ ನನ್ನನ್ನು ಮೆಚ್ಚಿಸಿ ಗುರುದಕ್ಷಿಣೆ ಕೊಡಬೇಕು, ಎಂಬುದಾಗಿ ಹೇಳಿದರು. ಭಟ್ಟೋಜೀಗಳು ಸಮ್ಮತಿಸಿ ಸ್ವದೇಶಕ್ಕೆ ಪ್ರಯಾಣ ಮಾಡಿದರು. ಸ್ವಲ್ಪಕಾಲವೆನ್ನುವುದರಲ್ಲೇ ಭಟ್ಟೋಜಿಗಳು "ತತ್ವಕೌಂಸ್ತುಭ" ಎಂಬ ಎರಡು ಪರಿಚ್ಛೇದಗಳುಳ್ಳ ಮಧ್ವಮತ ಖಂಡನಾತ್ಮಕ ಗ್ರಂಥವನ್ನು ಬರೆದು ಶಿಷ್ಯರ ಮುಖೇನ ಅಪ್ಪಯ್ಯ ದೀಕ್ಷಿತರಿಗೆ ಕಳುಹಿಸಿಕೊಟ್ಟರು. ಗ್ರಂಥವನ್ನು ನೋಡಿ ದೀಕ್ಷಿತರು ಸಂತುಷ್ಟರಾಗಿ ಅದನ್ನು ವಿಜಯೀಂದ್ರರ ಬಳಿಯಲ್ಲಿ ಅನುವಾದ ಮಾಡಿದರು. ಅದನ್ನೂ ವಿಜಯೀಂದ್ರರು ಸಂತೋಷದಿಂದ ಕೇಳಿ ಪ್ರತಿಗ್ರಂಥ ಬರೆದು ಮುಂಡನಮಾಡಿಬಿಟ್ಟರು.

ಅಪ್ಪಯ್ಯ ದೀಕ್ಷಿತರು ವಿಜಯೀಂದ್ರರನ್ನು ಏನು ಮಾಡಿ ನಿರುತ್ತರರನ್ನಾಗಿ ಮಾಡಬೇಕೆಂದು ಚಿಂತಿಸುತ್ತಾ, ಆ! ಶಾಸ್ತ್ರದಲ್ಲಿ ವಿಜಯೀಂದ್ರರು ಅಜೇಯರಿರಬಹುದು; ಕಾವ್ಯದಲ್ಲೂ ಅವರು ಪಾರಂಗತರೆಂಬುದಕ್ಕೆ ಇದುವರೆಗೆ ಅವರು ಒಂದು ಕಾವ್ಯವನ್ನೂ ಬರೆದಿಲ್ಲ; ಆದ್ದರಿಂದ ಆದೊಂದು ಪರೀಕ್ಷೆಯನ್ನೂ ಮಾಡಿಬಿಡೋಣವೆಂದು ಉತ್ಸಾಹದಿಂದ ಮಠಕ್ಕೇ ಬಂದರು. ಸ್ವಾಮಿಗಳು ದೀಕ್ಷಿತರನ್ನು ಬಲು ಅವಸರವಾಗಿ ಬಂದಹಾಗಿದೆ, ಮತ್ತೇನು ತಂದಿರುವಿರಿ ನೋಡೋಣವೆಂದರು. ಗ್ರಂಥವೇನೂ ತಂದಿಲ್ಲ, ಕವಿತ್ವ ಸ್ಪರ್ಧೆಗೆ ಕರೆಯುತ್ತೇನೆ ಬರುವಿರೋ ಎಂದರು. ನೀವು ಕರೆದಮೇಲೆ ಬರುವದಿಲ್ಲವೆಂದು ಹೇಳುವುದು ಹೇಗೆ, ಆಗಲಿ ಕವಿತಾ ಸ್ಪರ್ಧೆ! ಎಂದು ಸ್ವಾಮಿಗಳು ನುಡಿದರು. ಒಡನೆಯೇ ದೀಕ್ಷಿತರು ಇದು ಪ್ರಾಸ ಸ್ಪರ್ಧೆ! ಒಂದೇ ಶ್ಲೋಕದಲ್ಲಿ ಪರೀಕ್ಷೆ! ಎಂದರು ಸ್ವಾಮಿಗಳು ಆಗಲಿ ಹೇಳಿ ಎಂದರು ತತ್‍ಕ್ಷಣ ದೀಕ್ಷಿತರು:—

**ಅಸ್ತ್ಯರಣ್ಯಾಂತರಣ್ಯಾಂಘ್ರಿಸರಣ್ಯಾಂತರ್ಧಿಪಾದಪಂ||**

ಎಂದು ಹೇಳಿ, ಹೂಂ, ಎಂದರು. ಸ್ವಾಮಿಗಳು ತಡಮಾಡದೆ—

"**ಝರೀದತ್ತಪರೀರಂಭದರೀಸುಪ್ತಸರೀಸೃಪಂ** ||" ಎಂದರು.

ದೀಕ್ಷಿತರು ಪ್ರಥಮಾರ್ಧದಲ್ಲಿ ಮೂರು ಪ್ರಾಸಗಳನ್ನು ಹೇಳಿದರು. ಸ್ಪರ್ಧೆಯಾದುದರಿಂದ ಒಂದು ಪ್ರಾಸ ಹೆಚ್ಚುಮಾಡಿ ನಾಲ್ಕು ಪ್ರಾಸಗಳನ್ನು ಸ್ವಾಮಿಗಳು ಹೇಳಿದರು.

ದೀಕ್ಷಿತರು ನನ್ನ ಪ್ರಾಸಕ್ಕೆ ಒಂದನ್ನು ಜಾಸ್ತಿಮಾಡಿ ಹೇಳಿದಿರಿ ಸಂತೋಷ. ನಾಮಕ್ಕೆ ತಕ್ಕಂತೆ ನೀವು ವಿಜಯಶಾಲಿಗಳು. ಹೇಗೂ ಸನ್ಯಾಸಿಗಳು. ಒಂದು ನಮಸ್ಕಾರ ಹಾಕುತ್ತೇನೆಂದರು ವಿಜಯೀಂದ್ರರು ನಿಮ್ಮ ನಮಸ್ಕಾರವನ್ನು ನಾವು ತೆಗೆದುಕೊಳ್ಳುವುದೇ ಇಲ್ಲವೆಂದರು ದೀಕ್ಷಿತರು ವಾಪಸು ಕೊಡುವಿರಾ ಎಂದು ಕೇಳಿದರು. ಸ್ವಾಮಿಗಳು ದತ್ತಾಪಹಾರ ಮಾಡುವಿರಾ ಎಂದರು. ನನಗೂ ಬೇಡ ನಿಮಗೂ ಬೇಡ ನಾರಾಯಣನಿಗೊಪ್ಪಿಸುವೆನೆಂದು 'ನಾರಾಯಣ ನಾರಾಯಣ' ಎಂದರು. ಹೀಗೆ ನಡೆಯಿತು ವಿಜಯೀಂದ್ರರ ಮತ್ತು ದೀಕ್ಷಿತರ ಸಲ್ಲಾಪ! ಇಲ್ಲಿ ನೋಡಬೇಕಾದ್ದು

ನಮ್ಮ ಗಿರ್ವಾಣ ವಿದ್ಯಾ ಪ್ರಭಾವವನ್ನು ! ಇಲ್ಲಿ ನೋಡಬೇಕಾದ್ದು ಉಭಯರ ಬುದ್ಧಿ ಚಾತುರ್ಯವನ್ನು !

---

## ವಿಜಯೀಂದ್ರರ ಸಮಕಾಲಿಕರು

ವಿಜಯೀಂದ್ರರಸಮಕಾಲಿಕರೂ ವಿಜಯೀಂದ್ರರಿಂದ ಸನ್ಮಾನಿತರೂ ಆದ ಅನೇಕ ವಿದ್ವನ್ಮಣಿಗಳ ಹೆಸರನ್ನಾದರೂ ತಿಳಿಸಿದರೆ ಎಂದಾದರೂ ಯಾರಾದರೂ ಅವರ ಗ್ರಂಥಗಳನ್ನು ಪ್ರಯತ್ನವಟ್ಟಾದರೂ ಸಂಪಾದಿಸಬಹುದೆಂದು ಕೆಳಗೆ ಕೊಡಲಾಗಿದೆ.

೧ ಅಪ್ಪಯ್ಯ ದೀಕ್ಷಿತರು
೨ ಭಟ್ಟೋಜೀ ದೀಕ್ಷಿತರು
೩ ರತ್ನಖೇಟ ದೀಕ್ಷಿತರು
೪ ದೊಡ್ಡಯ್ಯಾಚಾರ್ಯರು
೫ ವರನಂದಿ
೬ ನಾರಾಯಣಾಧ್ವರಿ
೭ ಸಾರ್ವಭೌಮ ಕವಿ
೮ ಗುರುರಾಮ ಕವಿ
೯ ವೆಂಕಟೇಶ್ವರಮಖಿ
೧೦ ನೀಲಕಂಠ ದೀಕ್ಷಿತರು
೧೧ ವ್ಯಾಸಭಟ್ಟರು
೧೨ ನೃಸಿಂಹಸ್ವಾಮಿ
೧೩ ಗೋವಿಂದ ದೀಕ್ಷಿತರು
೧೪ ತಾತಾಚಾರ್ಯರು

ವಿಜಯೀಂದ್ರರು ಚತುಷ್ಷಷ್ಟಿ ಕಲಾವಿದರೆಂದು ಲೋಕಪ್ರಸಿದ್ಧಿಯಾದದ್ದು ಸುಖಕ್ಕೆ ಕಾರಣವಾಗಲಿಲ್ಲ ಬಹು ವಿಧ ಸತ್ವ ಪರೀಕ್ಷೆಗೆ ಅವರು ಒಳಗಾಗಬೇಕಾಯಿತು. ವ್ಯಾಸರಾಯರ ಹಿತೋಪದೇಶದಲ್ಲಿ ಹೇಳಿದಂತೆ ಆ ಕಾಲದಲ್ಲಿ ತಾಂತ್ರಿಕರ ಹಾವಳಿ ಬಹಳವಾಗಿತ್ತು. ಶಂಕರಾಚಾರ್ಯರ ಕಾಲದಿಂದ ಕೌಳಮಾರ್ಗದ ವಾಮಾಚಾರವನ್ನು ಖಂಡಿಸುತ್ತ ಬಂದಿದ್ದರೂ ದುರಾಚಾರ ನಿರ್ಮೂಲವಾಗಿರಲಿಲ್ಲ. ಶವಸಾಧನೆ ಮೊದಲಾದ ಕಠಿಣ ಕ್ಷುದ್ರ ದೇವತೋಪಾಸನಮಾಡಿ ತಾತ್ಕಾಲಿಕ ಸಿದ್ಧಿಗಳನ್ನು ಪಡೆದು ಮಹಾನುಭಾವಿಕೆಯನ್ನು ಬೆಳೆಸುವ ಬೂವಾಬಾಜಿಯು ಬಹಳವಾಗಿತ್ತು. ಅದರಿಂದ ಬಹು ಜನರು ಮೋಸಕ್ಕೊಳಗಾಗುತ್ತಿದ್ದರು. ಸಮಾಜದ ನೀತಿ ಕೆಡುತ್ತಿತ್ತು. ಚೈತನ್ಯ ಮಹಾಪ್ರಭುಗಳಂಥವರು ಬಂಗಾಳದಲ್ಲಿ ಎಷ್ಟೋ ಬಗೆಯಿಂದ

ಸಾತ್ವಿಕ ಭಗವದುಪಾಸನಾ ಮಾರ್ಗವನ್ನು ಬೋಧಿಸಿದರೂ ಅಲ್ಲಿ ತಾಂತ್ರಿಕರ ಹಾವಳಿ ಕಡಿಮೆಯಾಗಲಿಲ್ಲ. ಅಂದಮೇಲೆ ದಕ್ಷಿಣದೇಶದ ಪಾಡೇನು ?

ಯಾವುದನ್ನೂ ಸರ್ವನಾಶವಾಗಿರುವ ಈ ಕಾಲಮಾನದಿಂದ ಅಳೆಯ ಬಾರದು. ಆ ಕಾಲದ ಇತಿಹಾಸವನ್ನು ಆ ಕಾಲದ ಮಾನದಿಂದಲೇ ಅಳೆಯ ಬೇಕು. ಏನನ್ನೂ ನಂಬದ ಮೊಂಡ ಬುದ್ಧಿಯವರಿಗೆ ಅವರನ್ನು ಅವರೇ ನಂಬದ ಪ್ರಸಂಗ ಬರಬಹುದಾದ ಕಾರಣ ಅಂಥವರೊಡನೆ ಆಡುವುದಕ್ಕೆ ಮಾತೇ ಇರುವುದಿಲ್ಲ.

ವಿಜಯೀಂದ್ರರ ಬಳಿಗೆ ವಿವಿಧ ಕಲಾವಿದರು ಒಬ್ಬರಾಗುತ್ತಲೊಬ್ಬರು ಬರಲಾರಂಭಿಸಿದರು ಚತುಷ್ಷಷ್ಟಿ ಕಲೆಗಳನ್ನು ಬಲ್ಲಿರೆಂದ ಮೇಲೆ ನಮ್ಮ ಕಲೆಯಲ್ಲಿ ಪರೀಕ್ಷೆ ಕೊಡುವಿರೋ ಎನ್ನಲಾರಂಭಿಸಿದರು. ಕುಂಬಾರ ಕಮ್ಮಾರ ಚಮ್ಮಾರನೇಕಾರರಿಗೆಲ್ಲಾ ಆಯಾ ಕಲೆಗಳಲ್ಲಿ ಪರೀಕ್ಷೆ ಕೊಡಬೇಕಾಯಿತು. ಆಯಾ ಕುಶಲ ವಿದ್ಯೆಗಳಲ್ಲಿ ಅವರಿಗಿಂತ ಮೇಲಾಗಿ ಕೆಲಸಮಾಡಿ ತೋರಿಸು ವುದು ಮಾತ್ರವಲ್ಲ, ಬಂದವರಿಗೆ ಸಂಸ್ಥಾನಾಧೀಶ್ವರರಾದ್ದರಿಂದ ಸಂಭಾವನೆ ಯನ್ನೂ ಕೊಡಬೇಕಾಯಿತು. ಬಂದವನ ಸೋಲು ಹಣ ದೊರೆಯು ತ್ತಿದ್ದುದರಿಂದ ಗೆಲುವೇ ಆಗುತ್ತಿತ್ತು. ಗಾನ ಕಲೆಯವರು ಬಂದರೆ ಅವರೆದು ರಿಗೆ ತಾವು ಹಾಡಿ ಅವರಿಗೇ ಸಂಭಾವನೆ ಕೊಡಬೇಕು. ಮೃದಂಗಕಾರನು ಬಂದರೆ ಅದನ್ನು ಬಾರಿಸಿ ಕೊನೆಗೋಲು ಮಾಡಿ ಸಂಭಾವನೆ ಕೊಡಬೇಕು. ಹೀಗೆ ನಡೆಯಿತು ನಿತ್ಯೋತ್ಸವ ! ಇದಕ್ಕೆಲ್ಲಾ ಹಣವೆಲ್ಲಿ ಬಂತೆಂದು ಯಾರಾ ದರೂ ಕೇಳಿದರೆ ಅವರಿಗಾದರೂ ಉತ್ತರ ಕೊಡಬೇಕಲ್ಲವೆ ? ಜೊತೆಯಲ್ಲೇ ವಿಜಯೀಂದ್ರರ್ಯಾರೆಂಬುದನ್ನು ಅವರಾದರೂ ವಿಚಾರಿಸಬೇಕಲ್ಲವೆ ?

ವಿಜಯೀಂದ್ರರು ವ್ಯಾಸರಾಯರ ಶಿಷ್ಯರು. ವ್ಯಾಸರಾಯರು ವಿಜಯ ನಗರದ ಚಕ್ರವರ್ತಿಗೇ ಗುರುಗಳು. ರಾಜ್ಯಾಡಳಿತದ ವರದಿ ದಿನವೂ ದೀವಟಿಗೆ ಸಲಾಮಿನ ಕಾಲದಲ್ಲಿ ಚಕ್ರವರ್ತಿಯೇ ವರದಿ ಮಾಡದಿದ್ದರೆ ರಾಜ್ಯಾಡಳಿತ ನಡೆಯುತ್ತಿರಲಿಲ್ಲ. ತುಂಡೀರ ಮಂಡಲ ಚೋಳ ಮಂಡಲಗಳ ಮಾಂಡಲಿಕ ರಾಜರೆಲ್ಲಾ ವಿಜಯನಗರದ ಅರಸನ ಆಜ್ಞಾಧಾರಕರು. ಒಬ್ಬೊಬ್ಬ ಮಹಾ ಪಂಡಿತನಿಗೆ ಜನ್ಮದಲ್ಲಿ ಒಬ್ಬ ಮಾಂಡಲಿಕರಾಜ ಒಮ್ಮೆ ಕನಕಾಭಿಷೇಕ

ಮಾಡಿವರೆ, ವಿಜಯೀಂದ್ರರಿಗೆಷ್ಟು ಜನ ಮಾಂಡಲಿಕ ರಾಜರು ಎಷ್ಟು ಸಲ ಕನಕಾಭಿಷೇಕ ಮಾಡಿ ಎಷ್ಟು ಕಾಣಿಕೆಯನ್ನೊಪ್ಪಿಸಿರಬೇಕು ?

ಎಲ್ಲ ಪರೀಕ್ಷೆಯೂ ಇರಲಿ, ಜಲಸ್ತಂಭ ಮಾಡುವೆನೆಂದು ಬಂದ ಮಾಂತ್ರಿಕನ ಪರೀಕ್ಷೆ ಪ್ರಾಣ ಪರೀಕ್ಷೆಯಾಯಿತು ಆ ಕಲೆಯಲ್ಲಿ ಅವನಿಗೇ ಕಠಿಣವಾಗುವ ಪ್ರಯೋಗಮಾಡಲು, ಪ್ರತಿ ಪ್ರಯೋಗ ಮಾಡುವ ಶಕ್ತಿಯಿಲ್ಲದೆ ಮಾಂತ್ರಿಕನು ಪರಾಜಿತನಾದನು. ಆ ಪ್ರಯೋಗದಲ್ಲಿ ನಗೆಗೀಡಾದ ಸಂಗತಿ ಯೆನಿತ್ತೋ, ತಡೆಯಲಾರದೆ ಜನರು ನಕ್ಕುಬಿಟ್ಟರು ಮಾಟಗಾರನಿಗೆ ಅವಮಾನವಾದಂತಾಯಿತು ವಿಜಯೀಂದ್ರರನ್ನೇ ಇಲ್ಲದಂತೆ ಮಾಡುವೆನೆಂದು ಕಾವೇರಿಯಲ್ಲಿ ಮುಳುಗಿ ಜಲಪಾನಮಾಡಲಾರಂಭಿಸಿದನು. ಅವನು ಜಲಪಾನ ಮಾಡಿದ ಹಾಗೆಲ್ಲಾ ಸ್ವಾಮಿಗಳಿಗೆ ಹೊಟ್ಟೆಯುಬ್ಬುವುದಕ್ಕಾರಂಭ ವಾಯಿತು. ಅವರು ಅದರ ಮರ್ಮವರಿತು ಎಷ್ಟು ಸಲ ಜಲಸ್ಪರ್ಶಕ್ಕೆ ಹೋಗಬೇಕಾಗುವುದೋ ನೋಡೋಣವೆಂದು ಪರೀಕ್ಷೆಮಾಡುತ್ತ ಬಂದರು. ಮಾಯಕಾರನು ಇಷ್ಟು ಹೊತ್ತಿಗೆ ಸ್ವಾಮಿಗಳ ಗತಿಯೇನಾಗಿದೆಯೆಂದು ನೋಡುವುದಕ್ಕೆ ಬಂದನು. ಸ್ವಾಮಿಗಳು ನಗುತ್ತಲೇ ಏನು ಬಂದೆಯೆಪ್ಪಾ ಎಂದರು. ಇದಲ್ಲ ಕಾಲ, ಜಪಮಾಡಿ ಪೂಜೆಗೆ ಕೂತಾಗ ಏಳಲು ಸಾಧ್ಯವಿರುವುದಿಲ್ಲವಾದ್ದರಿಂದ ಆಗ ಜಲಪಾನ ಮಾಡಿ ಸನ್ಯಾಸಿಯ ಹೊಟ್ಟೆಯೊಡೆಯುತ್ತೇನೆಂದು ಮಾರನೇ ದಿನ ಜಪಕಾಲದಲ್ಲೇ ತನ್ನ ಕಾರ್ಯಾರಂಭ ಮಾಡಿದನು. ಸ್ವಾಮಿಗಳು ಪೂಜೆಗೆ ಕುಳಿತು ಪೂಜಿಸುವುದೇ ಕಠಿಣವಾಯಿತು. ಕೂಡುವುದರ ಬದಲು ನಿಂತು ನೋಡಿದರು. ಅದೂ ದುಸ್ಸಾಧ್ಯವಾಯಿತು. ಸೇವಕನನ್ನು ಕರೆದು ಹಿತ್ತಲುಕಡೆ ಇರುವ ಒಂದು ಬಾಳೆಯ ಗಿಡವನ್ನು ಕಡಿದು ಬಾರೆಂದು ಸ್ನಾನಕ್ಕೆ ಹೊರಟರು. ಮಾಂತ್ರಿಕನು ಪಾನಮಾಡಿದ ಜಲವೆಲ್ಲಾ ಬಾಳೆಯ ಗಿಡದಿಂದ ಸುರಿಯುತ್ತಾ ತೋಟಕ್ಕೆ ನೀರು ಕಟ್ಟಿದಂತಾಯಿತು. ಸ್ವಾಮಿಗಳ ಪೂಜೆಯಾಯಿತು. ಭಿಕ್ಷವಾಯಿತು. ಶಿಷ್ಯರಿಗೆ ಪಾಠಕ್ಕೂ ಪ್ರಾರಂಭವಾಯಿತು. ಮಾಂತ್ರಿಕನು ಬಂದು ನೋಡಿದನು. ಸ್ವಾಮಿಗಳು ನಗುತ್ತಲೇ ಮತ್ತೇನು ಮಾಡುವೆಯೆಂದರು. ಉಪಾಯ ಶೂನ್ಯನಾದ ಅವನು ಸಾಷ್ಟಾಂಗ ಪ್ರಣಾಮಮಾಡಿದನು ನನ್ನದು ತಪ್ಪಾಯಿತೆಂದನು. ಪ್ರತಿ ಕ್ರಿಯೆ ಏನು ಮಾಡಿದಿರೆಂದು ಮೊರೆಯಿಟ್ಟು ಕೇಳಿದನು. ಸ್ವಾಮಿಗಳು ಹಿತ್ತಲ

ತೋಟವನ್ನು ನೋಡಿಬಾರೆಂದರು. ಮಾಂತ್ರಿಕನು ಕಡಿದಿದ್ದ ಬಾಳೇ ಗಿಡ ದಿಂದ ನೀರು ಹರಿದು ತೋಟವೆಲ್ಲಾ ನೆನೆದಿರುವುದನ್ನು ಕಂಡನು. ಮತ್ತೆ ಶರಣಾಗತನಾದನು. ಅಂಥವನಿಗೂ ದಯಾಳುಗಳಾದ ವಿಜಯೀಂದ್ರರು ಸನ್ಮಾನವಾಡಿ ಪ್ರತಿಕ್ರಿಯೆ ತಿಳಿಯದೆ ವಿಷ ಪರೀಕ್ಷೆಗೆ ಹೋಗಬೇಡನೆಂದು ಬುದ್ಧಿ ಹೇಳಿದರು.

ಇಂಥಾ ಕಥೆಗಳನ್ನೆಲ್ಲಾ ನಂಬಬಹುದೇ ಎಂಬ ಪ್ರಶ್ನೆ ಸ್ವಾಭಾವಿಕ ವಾಗಿ ಹುಟ್ಟುತ್ತದೆ. ಇಂಗ್ಲೀಷಿನಲ್ಲಿ ಸಾಯಿಬಾಬಾರವರ ಚರಿತ್ರೆ ಓದಿದರೆ ಅವರ ಕೆಲವು ಅತಿಮಾನುಷ ಮಹಿಮೆಗಳನ್ನು ಭಾಷಾ ಚಾಕ್ಷಿಕ್ಯದಿಂದಾದರೂ ಒಪ್ಪಬೇಕೆನ್ನಿಸುತ್ತದೆ. ಪಾಲ್‌ಬ್ರುಂಟನ್ನನಂಥಾ ಬಿಳಿಯ ಮನುಷ್ಯನು ಬರೆದರೆ ಉಪ್ಪುಕಾರ ಹಚ್ಚಿ ಹೇಳಬೇಕೆನ್ನಿಸುತ್ತದೆ. ಇನ್ನೂ ನಮ್ಮ ಜನರ ತಲೆಯನ್ನಾವರಿಸುವುದು ರಾಜಮೋಹ ರಾಜಮೋಹವೆಂದರೆ ರಾಜಭಾಷಾ ಮೋಹ. ರಾಜಭಾಷೆಯನ್ನು ಕಲಿತು ಅಧಿಕಾರ ಮಾಡಬೇಕೆಂಬ ಮೋಹ. ಅವರಾಡಿದಂತಾಡಿ ಉಂಡಂತೆ ಉಂಡು ಉಟ್ಟಂತೆ ಉಡುವುದೇ ಪರಮಾರ್ಥ ಸಾಧನೆ.

ಏನೂ ಬೇಡ ನನ್ನ ವಯಸ್ಸಿನ ಹಳೇ ಜನರಲ್ಲಿ ಕೆಲವರಾದರೂ ನೋಡಿದ್ದ ಪೇರಣೇ ವಿದ್ಯೆ ಈಗ ಶುದ್ಧಾಂಗ ಮರೆತುಹೋಗಿದೆ. ಪೇರಣೆ ಯೆಂದರೇ ಶಬ್ದಾರ್ಥ ಗೊತ್ತಾಗುವುದಿಲ್ಲ. ಪೇರಣೇ ವಿದ್ಯಾ ಪ್ರದರ್ಶನವಾ ದರೋ ಈ ರೀತಿಯಿದೆ. ತೊಡೆಯಗಾತ್ರ ನಾಲ್ಕು ಸ್ತಂಭಗಳನ್ನು ಚೌಕ ಟ್ಟಾಗಿ ನಿಲ್ಲಿಸುತ್ತಾರೆ. ನಾಲ್ಕು ಮಧ್ಯ ಪ್ರದೇಶಗಳಲ್ಲೂ ಮೊಳಕ್ಕೊಂದರಂತೆ ಹರಿತವಾದ ಕತ್ತಿಗಳನ್ನು ಚೌಕಟ್ಟಿನಲ್ಲಿ ಹೂಗಿಸುತ್ತಾರೆ. ಪೇರಣೆಕಾರನು ಅಂದೇ ತಲೆಯನ್ನು ನುಣ್ಣಗೆ ಮಾಡಿಕೊಂಡು ಸಭಾಯೋಗ್ಯವಾದ ಉಡುಪಿ ನಿಂದ ಸಭಾ ಪ್ರವೇಶ ಮಾಡುತ್ತಾನೆ. ತಲೆಯಮೇಲೆ ನೀರು ತುಂಬಿದ ತಪ್ಪಲೆಯೊಂದನ್ನು ಶಿಂಬೆಯಿಲ್ಲದೆ ಯಾರಾದರೂ ಇಡುತ್ತಾರೆ. ಅಲಂಕಾರ ವಾಗಿ ಕಾಣಲೆಂದು ತಪ್ಪಲೆಯ ಕುತ್ತಿಗೆಗೆ ಹೂವನ್ನು ಸುತ್ತಿರುತ್ತಾರೆ. ಪೇರಣೆ ಕಾರನು ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡು ಝಣಝಣ ಸದ್ದುಮಾಡುತ್ತಾ, ಕೈಯಲ್ಲಿ ಪೀಟಲು ಹಿಡಿದುಕೊಂಡು ಬಾರಿಸುತ್ತಾ ಬಾಯಿಂದ ಪಲ್ಲವಿ ಯನ್ನು ಹಾಡುತ್ತಾ ಕತ್ತಿಗಳಮೇಲೆ ಆಕಡೆಯೊಂದು ಈಕಡೆಯೊಂದು

ಕಾಲಿಡುತ್ತಾ ಹತ್ತುತ್ತಾನೆ. ಎಡಬಲದಲ್ಲಿ ಮೃದಂಗ ಪಿಟೀಲಿನವರು ನಿಂತು ಜಮಾವಣೆಯಾಗಿ ಬಾರಿಸುತ್ತಾರೆ. ಮೃದಂಗದವನು ಮುಕ್ತಾಯಕೊಡುವಾಗೆಲ್ಲಾ ಕತ್ತಿಯಮೇಲೆ ನರ್ತನಮಾಡುತ್ತಾ ಅದೇ ಮುಕ್ತಾಯಗಳನ್ನು ಪ್ರೇರಣೆಕಾರನು ಕಾಲಿನಿಂದ ಕೊಡುತ್ತಾನೆ. ತಲೆಯ ಮೇಲಿಟ್ಟಿರುವ ನೀರು ತುಂಬಿದ ತಪ್ಪಲೆಯಿಂದ ಒಂದು ತೊಟ್ಟಾದರೂ ನೀರು ಬೀಳಕೂಡದು. ನರ್ತನದಲ್ಲಿ ತಾಳ ತಪ್ಪಕೂಡದು. ಬಾಯಿನಿಂದ ಹಾಡಬೇಕು. ಕೈಯಿಂದ ಪೀಟಿಲು ಬಾರಿಸಬೇಕು. ಮೇಲಿನಿಂದ ಕೆಳಕ್ಕೂ ಕೆಳಗಿನಿಂದ ಮೇಲಕ್ಕೂ ಕನಿಷ್ಠ ಹತ್ತು ಮೆಟ್ಟಿಲನ್ನಾದರೂ ಹತ್ತಬೇಕು ಇಳಿಯಬೇಕು ಪಲ್ಲವಿಯು ಎರಡನೇ ಕಾಲಕ್ಕೆ ಹೋದರೆ ಗತಿಯು ಎರಡರಷ್ಟು ವೇಗವಾಗುತ್ತದೆ. ಮೂರನೇ ಕಾಲಕ್ಕೆ ಹೋದರೆ ಅದಕ್ಕೆ ಎರಡರಷ್ಟು ವೇಗವಾಗುತ್ತದೆ. ಈ ಗತಿ ಈ ವೇಗವನುಸರಿಸಿ ಕತ್ತಿಯ ಮೇಲೆ ಹತ್ತಬೇಕು ಇಳಿಯಬೇಕು; ತಾಳಗತಿಯಂತೆ ಕಾಲಿಡಬೇಕು. ಮುಕ್ತಾಯ ಕೊಡಬೇಕು ನಾಲದುದಕ್ಕೆ ಪ್ರೇಕ್ಷಕರು ಕತ್ತಿಯಮೇಲೆ ಕಾಲಿಡುವ ಜಾಗದಲ್ಲಿ ಕಬ್ಬಿನ ತುಂಡನ್ನಿಡುತ್ತಾರೆ. ಕಬ್ಬು ಚಕ್ ಚಕ್ ಎಂದು ಕತ್ತರಿಸಿ ಬೀಳುತ್ತದೆ. ಇದು ಪೇರಣೆ.

ಇಂಥಾ ಪೇರಣೆಕಾರರು ಮೈಸೂರು ಸೀಮೆಯ ಹೊಳೇನರಸೀಪುರದಲ್ಲಿದ್ದರು. ದಿವಂಗತ ಚಾಮರಾಜ ಒಡೆಯರು ಆ ವಿದ್ವಾಂಸರಿಗೆ ಬಹಳ ಮರ್ಯಾದೆ ಮಾಡಿದ್ದರು. ರಾಜ ಮಹಾರಾಜರುಗಳೂ, ಗೌರ್ನರ್ ವೈಸರಾಯಿಗಳೂ, ಕೊಟ್ಟ ಯೋಗ್ಯತಾ ಪತ್ರಗಳು ಅವರ ಬಳಿಯಲ್ಲಿ ಕಟ್ಟು ಕಟ್ಟಾಗಿ ಬಿದ್ದಿತ್ತು. ಇವನ್ನು ನಂಬುವರೇ? ಪೇರಣೆಕಾರನ ಹೆಸರು ಪುಟ್ಟಣ್ಣಯ್ಯ.

ಮತ್ತೊಂದು ಚಾಟು ಚಮತ್ಕಾರ ನಾನು ನೋಡಿದಂತೆ ಬರೆಯುತ್ತೇನೆ. ಮೈಸೂರು ಹಳೇಅಗ್ರಹಾರದಲ್ಲಿ ನಾನು ವಾಸಿಸುತ್ತಾ ಇದ್ದಾಗ, ಒಬ್ಬ ಮಲೆಯಾಳಿ ಮಾಂತ್ರಿಕ ನನ್ನ ಬಳಿಗೆ ಬಂದ. ನನ್ನ ಮೇಜಿನ ಮೇಲಿದ್ದ ಕಾಗದದ ತುಂಡೊಂದನ್ನು ತೆಗೆದುಕೊಂಡು ಚೌಕವಾದ ಮಡಿಕುಡಿಕೆ ಮಾಡಿದ. ಇದನ್ನು ಎತ್ತು ಎಂದ. ಎತ್ತಿದೆ, ಅಂಗೈಮೇಲಿಟ್ಟುಕೊಂಡು ನೋಡಿದೆ. ಏನೂ ಚಮತ್ಕಾರ ಕಾಣಲಿಲ್ಲ. ಅದನ್ನೇ ತನ್ನ ಅಂಗೈಮೇಲಿಟ್ಟುಕೊಂಡು ಕಣ್ಣು ಮುಚ್ಚಿಕೊಂಡ. ಕೆಳಗಿಟ್ಟ. ಎತ್ತು ಎಂದ. ನನ್ನಿಂದ ಅದನ್ನು ಎತ್ತ

ಲಾರದಷ್ಟು ಭಾರವಾಯಿತು. ಅವನೇ ತೆಗೆದು ನನ್ನ ಅಂಗೈಮೇಲಿಟ್ಟ. ಭಾರ ತಾಳಲಾರದೆ ನನ್ನ ಕೈ ನೆಲಕ್ಕೆ ಇಳಿಯಿತು. ಇದು ಏನು ಹೇಳು ಅಂದ. ಇದು ಪಿಶಾಚಿಯ ತಂತ್ರ ಅಂದ.

ನಿನಗೇನು ಬೇಕೆಂದು ಕೇಳಿದೆ. ತಲೆಗೆ ಕೊಬರಿಯಣ್ಣೆ, ಉಡಲು ಒಂದು ಮುಂಡು, ಒಪ್ಪತ್ತು ಊಟ ಕೊಟ್ಟರೆ ಸಾಕೆಂದ!

ಭಾರತ ಭೂಮಿಯಲ್ಲಿ ಎಂಥೆಂಥಾ ಕಲೆಗಳಿದ್ದವೋ, ಅವಶೇಷವಾಗಿ ಯಾವದು ಉಳಿದುಕೊಂಡಿದೆಯೋ ವಿಚಾರಿಸುವರ್ಯಾರು ?

ವಿಜಯೀಂದ್ರಸ್ವಾಮಿಗಳೇನೋ ಚತುಷ್ಷಷ್ಟಿ ಕಲೆಗಳಲ್ಲಿ ಅನೇಕ ಕಲೆಗಳನ್ನು ಜನರಿಗೆ ಪ್ರದರ್ಶನಮಾಡಿ ತೋರಿಸಿದರು. ಅವರ ಸಮಾನ ಸರ್ವಜ್ಞರೇ ಇಲ್ಲವೆಂದು ಗೌರವ ಪಡೆದರು.

ಹೀಗೆ ಬಹುಕಾಲ ಕುಂಭಕೋಣೆಯಲ್ಲಿ ವಾಸಮಾಡಿದನಂತರ ದೇಶಾಟನೆ ಮಾಡಬೇಕೆಂದು ಶ್ರೀರಂಗ ಕ್ಷೇತ್ರಕ್ಕೆ ಬಂದು ರಂಗನಾಥನನ್ನು ಸೇವಿಸಿ ರಂಗಕ್ಷೇತ್ರದಲ್ಲಿ ತಮ್ಮದೇ ಪ್ರತ್ಯೇಕ ಮಠವನ್ನು ಸ್ಥಾಪಿಸಿದರು. ಗುರುಗಳ ಬೃಂದಾವನ ದರ್ಶನ ನಿಮಿತ್ತ ಸಂಚಾರ ಮಾಡಿಕೊಂಡು ವಿಜಯನಗರಕ್ಕೆ ಬಂದಾಗ ಅಳಿಯ ರಾಮರಾಜನು ಸಾಮ್ರಾಟನಾಗಿದ್ದನು. ಪೂರ್ವ ಪರಿಚಯ ಒಂದುಕಡೆ, ಸಂಸ್ಥಾನಾಧಿಪತಿಗಳಾಗಿ ಬಹುಕಾಲದ ಮೇಲೆ ವಿದ್ಯಾನಗರಿಗೆ ಬಂದಿರುವರೆಂಬುದೊಂದುಕಡೆ, ಈ ಎರಡು ವಿಧವಾದ ಗೌರವದಿಂದಲೂ ರಾಮರಾಜನು ವಿಜಯೀಂದ್ರರನ್ನು ಬಹು ವಿಧದಿಂದ ಸತ್ಕರಿಸಿದನು. ದಿವ್ಯಾಸನದ ಮೇಲೆ ಕೂಡಿಸಿ ಹಿಂದೆ ಕೃಷ್ಣದೇವರಾಯನು ವ್ಯಾಸರಾಯರಿಗೆ ಮಾಡಿದಂತೆಯೇ ಬಹುವಿಧ ರತ್ನರಾಶಿಗಳಿಂದ ರತ್ನಾಭಿಷೇಕ ಮಾಡಿದನು.

ಈ ವಿಷಯದಲ್ಲಿ ರಾಘವಾಭ್ಯುದಯವೆಂಬ ದಿವ್ಯ ಕಾವ್ಯವು—

**ಶ್ಲೋಕ॥ ವಿದ್ವದ್ವರೋಽಸ್ಮಾದ್ವಿಜಯೀಂದ್ರಯೋಗೀ।**
**ವಿದ್ಯಾಸುಹೃದ್ವ್ಯಾಪ್ತತುಲಪ್ರಭಾವಃ॥**
**ರತ್ನಾಭಿಷೇಕಂ ಕಿಲರಾಮರಾಜಾತ್**
**ಪ್ರಾಪ್ಯಾಯಮಗ್ರ್ಯಾನ್ ಅಕೃತಾಗ್ರಹಾರಾನ್॥**

ಎಂಬುದಾಗಿ ಮಹಾನುಭಾವರ ಕೀರ್ತಿಯನ್ನು ಕೊಂಡಾಡುತ್ತಿದೆ.

ವಿಜಯೀಂದ್ರರು ಉತ್ತರ ಭಾರತದಲ್ಲಿ ಸಂಚಾರ ಮಾಡಿದರೇ ಇಲ್ಲವೇ ಎಂಬುವುದು ಎಲ್ಲೂ ಗೊತ್ತಾಗುವುದಿಲ್ಲ ಸಂಚರಿಸಿರಲಿ ಬಿಡಲಿ, ಅದೊಂದು ದೂಷಣ ಭೂಷಣದಲ್ಲಿ ಸೇರುವುದಿಲ್ಲ. ಉಪಲಬ್ಧವಾಗಿರುವುದರಲ್ಲೇ ಆಯಿತು ವಿಜಯೀಂದ್ರಸ್ವಾಮಿಗಳವರ ವೈಭವ ವರ್ಣನೆಯ ಏಕದೇಶ ವಿಸ್ತಾರ ! ಮುಂದೇನು ? ನಾವೇನು ತಿಳಿದಂತಾಯಿತು ? ಆ ಸ್ವಾಮಿಗಳನ್ನು ನಮ್ಮವರೆಂದು ನೆಂಟತನವನ್ನು ಗಂಟುಹಾಕಿಕೊಂಡು ಅವರು ಮಹಾನುಭಾವರು, ಅವರು ಚತುಃಷಷ್ಟಿ ಕಳಾವಿದರು, ಅವರು ೧೦೪ ಗ್ರಂಥಗಳನ್ನು ಬರೆದವರು, ಮತ್ತೂ ಕೇಳಿದರೆ ಅಪ್ಪಯ್ಯ ದೀಕ್ಷಿತರ "ಮಧ್ವಮತ ವಿಧ್ವಂಸನ"ಕ್ಕೆ "ಅಪ್ಪಯ್ಯ ಕಪೋಲಚಪೇಟಿಕಾ" ಎಂಬ ಗ್ರಂಥವನ್ನು ಬರೆದವರು; ಎಂಬಿಷ್ಟೇ ಮಾತುಗಳಿಂದ ಗತವೈಭವವನ್ನು ಸ್ಮರಿಸುತ್ತಾ ನಮ್ಮ ಭುಜವನ್ನು ನಾವೇ ತಟ್ಟಿಕೊಳ್ಳುತ್ತಾ ಕುಳಿತರೆ ಸಾಕೋ ?

ಅಪ್ಪಯ್ಯ ದೀಕ್ಷಿತರ ೧೦೪ ಗ್ರಂಥಗಳಲ್ಲಿ ಲಂಕ್ಕೆ ಮೇಲ್ಪಟ್ಟು ಉಪಲಬ್ಧವಾಗಿ, ಕೆಲವು ಗ್ರಂಥಗಳಾದರೂ ಪ್ರಕಟವಾಗಿ ಜನರ ಕೈಯಲ್ಲಿರುವಾಗ, ಅವರ ಸಮಕಾಲಿಕರಾದ ವಿಜಯೀಂದ್ರರ ಗ್ರಂಥಗಳ ಪ್ರಕಟಣೆ ಶೋಧನೆಗಳ ಕಾರ್ಯಗಳನ್ನು ಅವರ ಶಿಷ್ಯರೆನಿಸುವ ಭಕ್ತ ಜನರು ಮಾಡಬೇಡವೊ ? ಕುವಲಯಾನಂದದಂಥಾ ದೀಕ್ಷಿತರ ದಿವ್ಯ ಗ್ರಂಥವನ್ನು ಓದದಿದ್ದರೆ ಸಂಸ್ಕೃತ ಸಾಹಿತ್ಯ ಪಾಂಡಿತ್ಯ ಸಂಪಾದನೆ ಮಾಡುವುದು ಯಾರಿಗಾದರೂ ಸಾಧ್ಯವೋ? ಇದನ್ನು ಸಮಾಜವೇ ಯೋಚಿಸಬೇಕು ಮಾಡಬೇಕಾದ ಕಾರ್ಯವನ್ನು ಈಗಲೇ ಶುದ್ಧ ಮನಸ್ಸಿನಿಂದಲೂ ತ್ಯಾಗಬುದ್ಧಿಯಿಂದಲೂ ಮಾಡಬೇಕು.

ಕುಂಭಕೋಣೆಯ ನಾಗರಾಜಶರ್ಮರವರು ವರ್ಷಕ್ಕೊಮ್ಮೆ ವಿಜಯೀಂದ್ರರ ವಿಷಯವಾಗಿ ಏನಾದರೊಂದು ಶೋಧನೆಮಾಡಿ ಅವರ ಪರಿಚಿತ ವಿಷಯವನ್ನು ಇಂಗ್ಲೀಷ್ ಭಾಷೆಯಲ್ಲಿ ಮಾಡಿಸಿಕೊಡುತ್ತಾ ಇದ್ದಾರೆ. ಅದನ್ನು ನೋಡಿಯಾದರೂ ನಮ್ಮ ಸಮಾಜದ ಇಂಗ್ಲೀಷ್ ಪಂಡಿತರು ತಾವೂ ಸ್ವಲ್ಪ ಶೋಧನಾಕಾರ್ಯಕ್ಕೆ ತೊಡಗಬೇಕು. ನಿರಾಶಾಬುದ್ಧಿ ಎಂದಿಗೂ ಯಾರಿಗೂ ಇರಬಾರದು, ಬರಬಾರದು.

### ಒಂದು ಕೇಳಿಕೆ.

ವಿಜಯೀಂದ್ರರೂ ವಾದಿರಾಜರೂ ಸಮಕಾಲೀನರಾಗಿದ್ದು ವ್ಯಾಸರಾಯರಲ್ಲೇ ವ್ಯಾಸಂಗ ಮಾಡುತ್ತಿದ್ದ ಕಾರಣ, ಏನೋ ನಿಮಿತ್ತ ಒಬ್ಬೊಬ್ಬರಿಗೆ ವಿವಾದವಾಯಿತು. ವಾದಿರಾಜರು ಬರೆದ ಕೆಲವು ಗ್ರಂಥಗಳನ್ನು ವಿಜಯೀಂದ್ರರು ನೋಡಿದರು. ಒಬ್ಬರೊಬ್ಬರ ಸರಸ ವಿರಸವಾಯಿತು. ನಿಮ್ಮ ಗ್ರಂಥಗಳು ಲೋಕದಲ್ಲಿ ಪ್ರಚಾರವಾಗಬಾರದೆಂದು ಒಬ್ಬೊಬ್ಬರೂ ಮತ್ತೊಬ್ಬರಿಗೆ ಶಾಪಕೊಟ್ಟರು. ಆದ್ದರಿಂದ ವಿಜಯೀಂದ್ರರ ಗ್ರಂಥಗಳು ಸಿಗುವುದಿಲ್ಲ. ಹಾಗೆಯೇ ವಾದಿರಾಜರ ಗ್ರಂಥಗಳೂ ಸಿಗುವುದಿಲ್ಲ, ಎಂದು. ಇದು ಸತ್ಯವಾಗಿದ್ದರೆ ವಾದಿರಾಜರ ಗ್ರಂಥ ಒಂದಾದರೂ ಸಿಗದಿರಬೇಕಾಗಿತ್ತು. ವಾದಿರಾಜರ ಪ್ರಸಿದ್ಧ ಯುಕ್ತಿಮಲ್ಲಿಕೆ, ತೀರ್ಥಪ್ರಬಂಧ, ರುಗ್ಮಿಣೀಶ ವಿಜಯ, ಭಾರತಕ್ಕೆ ವ್ಯಾಖ್ಯಾನರೂಪವಾಗಿರುವ ಲಕ್ಷಾಭರಣ, ಇನ್ನೂ ಅನೇಕ ಸಂಸ್ಕೃತ ಸ್ತೋತ್ರಗಳು ನಾಶವಾಗಿಲ್ಲ, ದೊರೆಯುತ್ತಿವೆ. ಅಂತೆಯೇ ವಿಜಯೀಂದ್ರರ ದುರಿತಾಪಹಾರ ಸ್ತೋತ್ರವು ಅನೇಕರು ಪಠಿಸುತ್ತಿರುವಂತೆ ಉಪಲಬ್ಧವಾಗಿರುವುದು ಕಾಣುತ್ತದೆ. ಮಧ್ವಮುಖಭೂಷಣ ಅಪ್ಪಯ್ಯ ಕಪೋಲ ಚಪೇಟಿಕಾಗಳು ಇನ್ನೂ ಹಸ್ತಲಿಖಿತ ಪ್ರತಿಗಳಾಗಿ ದೊರೆಯುತ್ತಿವೆ. ಅಂದಮೇಲೆ ಒಂದೇ ಮತದ ಒಬ್ಬರೇ ಗುರುಗಳ ಶಿಷ್ಯರಾಗಿ ಒಬ್ಬೊಬ್ಬರೂ ಒಂದೊಂದು ಮಠಾಧೀಶರಾಗಿರುವಾಗ ಈ ಯತೀಶ್ವರರಲ್ಲಿ ಎಂದಾದರೂ ದ್ವೇಷ ಬರುವದುಂಟೆ ? ಒಬ್ಬರಿಗೊಬ್ಬರು ಶಾಪಕೊಡುವುದುಂಟೆ ? ಇಂಥಾ ಸೋಮಾರಿತನ ನಿರಾಶೆಗಳನ್ನುಂಟುಮಾಡುವ ಮಾತನ್ನು ಯಾರೂ ನಂಬಬಾರದು, ಆಡಲೂ ಬಾರದು.

---

## ವಿಜಯೀಂದ್ರರ ಉಡುಪೀ ಯಾತ್ರೆ

ವಿದ್ಯಾನಗರದಿಂದ ವಿಜಯೀಂದ್ರರು ಸಂಚಾರಮಾಡುತ್ತಾ ಉತ್ತರ ಕರ್ಣಾಟಕದ ಭಾಗಗಳಲ್ಲೂ ಮೈಸೂರು ಸೀಮೆಯಲ್ಲೂ ಭಕ್ತಜನರಿಗೆ ದರ್ಶನ ಕೊಟ್ಟು, ಕಾವೇರೀ ಮೂಲದಲ್ಲಿ ಕೆಲವುಕಾಲ ತಪಸ್ಸುಮಾಡಿ, ಶ್ರೀ ಕ್ಷೇತ್ರ ಉಡುಪಿಗೆ ಬಂದರು. ಬಹುಕಾಲದಮೇಲೆ ದರ್ಶನ ಲಾಭವಾಯಿತೆಂದು

ಮಹಾನುಭಾವರಾದ ವಾದಿರಾಜಸ್ವಾಮಿಗಳು ವಿಜಯೀಂದ್ರರಿಗೆ ಯೋಗ್ಯ ವಾದ ಸ್ವಾಗತಮಾಡಿದರು. ವಾದಿರಾಜರೇ ಎದುರುಗೊಳ್ಳಲು ಹೊರಟ ಮೇಲೆ ಅವರ ಅನುಯಾಯಿಗಳಾದ ಮಿಕ್ಕ ಎಲ್ಲಾ ಮಠಗಳವರೂ ವಿಜ ಯೀಂದ್ರರಿಗೆ ಸ್ವಾಗತವಿತ್ತರೆಂದು ಪ್ರತ್ಯೇಕ ಹೇಳುವುದೇನು ? ವಾದಿರಾಜರ ಮಠದಲ್ಲೇ ವಿಜಯೀಂದ್ರರಿಗೆ ಬಿಡಾರವಾಯಿತು. ಮಧ್ವಸರೋವರ ಸ್ನಾನ ಕೃಷ್ಣ ದರ್ಶನಗಳಿಂದ ಸಂತೃಪ್ತರಾದ ವಿಜಯೀಂದ್ರರು ಶ್ರೀ ಕೃಷ್ಣಸ್ವಾಮಿಗೂ ಎಲ್ಲಾ ಮಠಾಧಿಪತಿಗಳಿಗೂ ಅನರ್ಘ್ಯ ಕಾಣಿಕೆಗಳನ್ನೊಪ್ಪಿಸಿದರು. ಆ ಕಾಲದಲ್ಲಿ ಪೂರ್ವಾದಿ ಮಠಕ್ಕೆ ಪ್ರತ್ಯೇಕ ಶಾಖಾಮಠ ಉಡುಪಿಯಲ್ಲಿರಲಿಲ್ಲ ವಾದ್ದರಿಂದ ವಾದಿರಾಜರ ಸಹಾಯದಿಂದ ವಿಜಯೀಂದ್ರರು ತಮ್ಮದೊಂದು ಮಠವನ್ನು ಸ್ಥಾಪಿಸಿದರು. ಆ ಮಠವು ಆರ್ಕಾಡಿ ಮಠವೆಂದು ಬಹುಕಾಲ ಕರೆಸಿಕೊಳ್ಳುತ್ತಿದ್ದು ಈಚೆಗೆ ಶ್ರೀ ಸುಶೀಲೇಂದ್ರಸ್ವಾಮಿಗಳವರು ಉಡುಪೀ ಯಾತ್ರೆಗೆ ಹೋಗಿದ್ದಾಗ ಶ್ರೀ ರಾಘವೇಂದ್ರಸ್ವಾಮಿಗಳವರ ಬೃಂದಾವನ ಪ್ರತಿಷ್ಠೆಯೂ ಆಗಿ ರಾಘವೇಂದ್ರ ಮಠವೆಂದು ಪ್ರಸಿದ್ಧವಾಗಿದೆ. ಉಡುಪಿ ಯಿಂದ ಮತ್ತೆ ಸಂಚಾರ ಮಾಡುತ್ತಾ ರಾಮೇಶ್ವರ ಮೊದಲಾದ ಎಲ್ಲಾ ದಕ್ಷಿಣ ದೇಶದ ಕ್ಷೇತ್ರಗಳ ದರ್ಶನಮಾಡಿ ವಿಜಯೀಂದ್ರರು ಪುನಃ ಕುಂಭ ಕೋಣೆಗೆ ದಿಗ್ವಿಜಯಮಾಡಿದರು.

ವಾದಿರಾಜರನ್ನು ಅನೇಕ ಭಕ್ತರು ಋಜುಪದಸ್ಥರೆಂದು ಹೇಗೆ ತಿಳಿ ದಿರುವರೋ, ಹಾಗೆಯೇ ವಿಜಯೀಂದ್ರರನ್ನೂ ಋಜುಪದಸ್ಥರೆಂದು ತಿಳಿ ದಿರುವ ಭಕ್ತ ಜನರಿದ್ದಾರೆ. ಇದು ಉಪಾಸಕರ ಭಕ್ತಿಗೆ ಸಂಬಂಧಪಟ್ಟ ವಿಷಯವಾದ್ದರಿಂದ ಹೆಚ್ಚು ವಿಮರ್ಶೆಗೆ ಒಳಪಡುವ ಪ್ರಮೇಯವಲ್ಲ

ಪುರಂದರದಾಸರ ಕಡೆಯ ಮಕ್ಕಳಾದ ಮಧ್ವಪತಿದಾಸರು ವಿಜ ಯೀಂದ್ರ ಸ್ವಾಮಿಗಳ ಮೇಲೆ ಮಾಡಿರುವ ಪದವೊಂದನ್ನು ಲೇಖಕನ ಬಾಲ ಭಾಷೆಯನ್ನೋದಿ ಬೇಸತ್ತವರಿಗೆ ಅಮೃತಪಾನ ಮಾಡಿದಂತಿರಲೆಂದು ಈ ಕೆಳಗೆ ಕೊಟ್ಟಿರುತ್ತೇನೆ.

**ರಾಗ ಪೂರ್ವಿ ತಾಳ ಆದಿ**

**ವಿಜಯೀಂದ್ರ ಮುನೀಂದ್ರರೆಂಬಾಶ್ಚರ್ಯದ ।**
**ಗಜೇಂದ್ರ ಬಂದದೆ ಸುಜನರು ನೋಡಬನ್ನಿ ॥ಪ॥**

**ಕಲುಷವೆಂಬ ಪಂಕವನೀಡಾಡಿ। ವಿಮಲ ಶ್ರೀಹರಿಪದತೀರಿಥವ।**
**ಜಲಪಾನವನಮಾಡಿ ಮಧ್ವಮತಾಂಬುಧಿಯೊಳು ನಲಿದುನಲಿದು**
**ಕುಣಿ ಕುಣಿದಾಡುತಲಿ ॥೧॥**

**ರಮೇಶನ ಧ್ಯಾನವೆಂಬ ಕುದುರೇರಿ। ಮಮತೆ ಕೆದಳಕಿತ್ತಾಡಿ।**
**ವಿಮಲ ಶ್ರೀಹರಿಪದ ರತಿಶರಧಿ ಧರಿಸಿ। ಕುಮತಗಳೆಂಬ**
**ತರುಗಳ ಮುರಿಯುತಲಿ ॥೨॥**

**ಗುರುಸುರೇಂದ್ರ ತೀರಿಥರೆಂಬ। ವರ ಗುರುಗಳಾಜ್ಞೆಯೊಳಿದ್ದು।**
**ಗುರುಮಧ್ವಪತಿ ವಿಠಲನ ನವವಿಧ ಭಕ್ತಿ। ಸರಪಳಿಯೊಳು ನಲಿ**
**ನಲಿದಾಡುತಲಿ ॥೩॥**

ಪುಟಸಂಖ್ಯೆ ೩೨ ಆದರೂ ವಿಜಯೀಂದ್ರರ ನಿಜಚರಿತ್ರೆ ತಿಳಿದಂತಾಗ ಲಿಲ್ಲ. ಮಹಾನುಭಾವರ ಚರಿತ್ರೆ ಅತಿಮಾನುಷ ಮಹಿಮೆಗಳೇ ಅಲ್ಲ. ಅವರ ಚರಿತ್ರೆ ಅವರ ಜ್ಞಾನ, ಅವರ ಚರಿತ್ರೆ ಅವರ ಆತ್ಮಾನುಭವ, ಅವರ ಪ್ರತೀಕ, ಅವರ ಗ್ರಂಥಗಳು, ಅವರ ಅನುಗ್ರಹಬೇಕೆಂಬುವವರಿಗೆ ಅವರ ಗ್ರಂಥಪಠನೆಯೇ ದಿವ್ಯಮಾರ್ಗ. ತರ್ಕಸಿದ್ಧವಾದ ಗ್ರಂಥಪಠನೆಯಿಂದ ಸಾಧಕನಿಗೆ ಚಿತ್ತ ಶುದ್ಧಿಯಾಗಿ ತತ್ವ ನಿಶ್ಚಯವಾಗುತ್ತದೆ. ತತ್ವನಿಶ್ಚಯದಿಂದ ನ್ಯಾಯ ಸುಧೆ ಯಲ್ಲಿ ಶ್ರೀ ಜಯತೀರ್ಥರು ವಿವರಿಸಿದಂತೆ ಸಹಸ್ರ ವಿಘ್ನಗಳು ಬಂದರೂ, ದಾರಾಪುತ್ರ ವಿತ್ತ ಕ್ಷೇತ್ರಗಳೆಲ್ಲದರ ಮೇಲಿರುವುದಕ್ಕಿಂತ ಶ್ರೀ ಹರಿಭಕ್ತಿ ಹೆಚ್ಚಾಗುತ್ತದೆ. ಭಕ್ತಿಯಿಂದ ಮಾಡಿದ ಭಗವದುಪಾಸನೆಗೆ ಫಲವಾಗಿ ಹೃದಯದ ಅಜ್ಞಾನ ಗ್ರಂಥಿಯು ಭೇದಿಸಿ ಸಕಲ ಸಂಶಯಗಳ ನಿವಾರಣೆ ಯಾಗಿ ಸಂಚಿತಾಗಾಮಿಗಳು ನಾಶವಾಗಿ ಬಿಂಬಾಪರೋಕ್ಷವಾಗುತ್ತದೆ. ಬಿಂಬಾಪರೋಕ್ಷಿಗೆ ಕರ್ಮಲೇಪವಿರುವುದಿಲ್ಲ ಆದ್ದರಿಂದ ಪುನರ್ಜನ್ಮವೂ ಬರುವುದಿಲ್ಲ. ಇಚ್ಛಾಮಾತ್ರದಿಂದ ಜನ್ಮತಾಳಿದ ಅವರಿಗೆ ಬಂಧನ ಗಳಿರುವುದಿಲ್ಲ.

ಹೀಗೆ ವೃದ್ಧದಂಪತಿಗಳ ಉದರದಲ್ಲಿ ಶ್ರೀವ್ಯಾಸತೀರ್ಥರ ಅನುಗ್ರಹ ದಿಂದ ಜನ್ಮತಾಳಿದ ವಿಠಲಾಚಾರ್ಯರು, ಅದೇ ವ್ಯಾಸರಾಯರ ಪರಮಾನುಗ್ರಹ ದಿಂದ ಚತುಷ್ಷಷ್ಠಿ ಕಲಾವಿಶಾರದರಾದರು. ವಿಷ್ಣುತೀರ್ಥರೆಂದು ಕೆಲವು ಕಾಲ ಕರೆಸಿಕೊಂಡು ಮಠಭೇದದಿಂದ ಪ್ರಸಿದ್ಧ ವಿಜಯೀಂದ್ರರಾಗಿ, ಸುಮಾರು

೫೭ ವರ್ಷ ಮಠರಾಜ್ಯಭಾರ ಮಾಡಿದರು. ಅದ್ವೈತ ವಿಶಿಷ್ಟಾದ್ವೈತ ಮತಗಳ ರಣರಂಗವಾಗಿದ್ದ ದಕ್ಷಿಣ ದೇಶದಲ್ಲಿ ದ್ವೈತಮತಕ್ಕೆ ಸ್ಥಳವೇ ಇಲ್ಲವೆಂಬಷ್ಟು ಕಷ್ಟ ಪರಿಸ್ಥಿತಿಯಿದ್ದಾಗ, ಕುಂಭಕೋಣೆಯಂಥಾ ವಿದ್ವತ್ಕೇಂದ್ರದಲ್ಲಿ ದ್ವೈತಧರ್ಮಧ್ವಜವನ್ನು ಸ್ಥಾಪಿಸಿದರು. ಕಟೂಕ್ತಿಗಳಿಂದ ವಾದಿಸಲು ಬಂದ ವಾದಿಗಳೊಡನೆ, ಮೃದೂಕ್ತಿಯಿಂದಲೇ ಮಧ್ವಮತ ತತ್ವಗಳನ್ನು ಘೋಷಿಸಿ, ವಾದಿಸಿ ಜಯಶೀಲರಾದರು ವಾದದಲ್ಲಿ ಅಜೇಯರಾಗಿರುವ ವಿಜಯೀಂದ್ರರನ್ನು ನೋಡಿ ಒಮ್ಮೆ ಅಪ್ಪಯ್ಯ ದೀಕ್ಷಿತರು—'ಸ್ವಾಮಿಗಳೇ ವಾದದ ಮಾತಿರಲಿ, ನಿಮ್ಮ ಮನಸ್ಸಿನಿಂದ ಹೇಳಿಬಿಡಿ, ದ್ವೈತ ಸತ್ಯವೋ ಅದ್ವೈತ ಸತ್ಯವೋ' ಎಂದು ಪ್ರಶ್ನೆಮಾಡಲು—''ದೀಕ್ಷಿತರೆ, ನಿಮಗಿನ್ನೂ ಈ ಕ್ಲೇಶ ಬಿಡಲಿಲ್ಲ! ನಿಮ್ಮ ಸಂಸ್ಕಾರ ಬಲದಿಂದ ಪ್ರಾಪ್ತವಾಗಿರುವ ಬುದ್ಧಿ ಭೇದನವನ್ನು ಯಾರಿಂದಲೂ ಮಾಡಲು ಸಾಧ್ಯವಲ್ಲ. ನಿಮ್ಮಿಷ್ಟ ದೇವತೆಯನ್ನು ಭಕ್ತಿಯಿಂದ ಆರಾಧಿಸಿ ಯೋಗ್ಯಗತಿಯನ್ನು ಸಂಪಾದಿಸಿರಿ" ಎಂದು ಮಾತ್ರ ಹೇಳಿಬಿಟ್ಟರು.

ಮಧ್ವಮತದ ಇತಿಹಾಸದಲ್ಲಿ ಈ ಕಾಲದವರೆಗೆ ಹೇಗೆ ಜಯತೀರ್ಥರೋ ಹಾಗೆ ವ್ಯಾಸತೀರ್ಥರು, ಹೇಗೆ ವ್ಯಾಸತೀರ್ಥರೋ ಹಾಗೆ ವಿಜಯೀಂದ್ರರು ಎಂಬ ಪ್ರಖ್ಯಾತಿ ಭರತಖಂಡದಲ್ಲೆಲ್ಲಾ ವ್ಯಾಪಿಸಿತು. ವಾದಿಗಳೊಡನೆ ವಾದಿಸುವುದರಲ್ಲೂ ಗ್ರಂಥರಚನೆಯಲ್ಲೂ ಹೆಚ್ಚುಕಾಲ ಕುಂಭಕೋಣೆಯಲ್ಲಿರಬೇಕಾಗಿದ್ದುದರಿಂದ, ಇವರು ವಿಶೇಷ ದೇಶಪರ್ಯಟನೆ ಮಾಡಲಿಲ್ಲ. ಇದ್ದ ಬಳಿಯಲ್ಲಿ ಇದ್ದರೂ ಮಾಂಡಲಿಕರಾಜರ ಮತ್ತು ಜನಸಮಾಜದ ಆದರಣೆ ವಿಶೇಷವಾಗಿದ್ದುದರಿಂದ ವಿಜಯೀಂದ್ರರು ಬಡತನವೆಂಬುದನ್ನು ಕಾಣಲಿಲ್ಲ. ಹೀಗೆ ಮಧ್ವಮತದ ಸಿರ್ವಕಾಲಕೀರ್ತಿಯನ್ನು ಬೆಳೆಸಿದರು ವಿಜಯೀಂದ್ರರು.

"ಪೆರೀಶಾಮಿಯಾರ್, ಪೆರೀಶಾಮಿಯಾರ್" ಎಂದು ನಾಲ್ಕು ನೂರು ವರ್ಷಗಳಾಗುತ್ತ ಬಂದರೂ ಮಹಾನುಭಾವರ ಬೃಂದಾವನವನ್ನು ಸೇವಿಸಿ ಇಷ್ಟಾರ್ಥಗಳನ್ನು ಪಡೆಯುವವರ ಸಂಖ್ಯೆ ಇನ್ನೂ ಹೇರಳವಾಗಿರುವಾಗ, ಪ್ರತ್ಯಕ್ಷ ದರ್ಶನ ದೊರೆಯುತ್ತಿದ್ದಾಗ ವಿಜಯೀಂದ್ರರಿಂದ ಭುಕ್ತಿಮುಕ್ತಿಗಳನ್ನು ಪಡೆದು ಕೃತಾರ್ಥರಾದವರ ಸಂಖ್ಯೆಯೆಷ್ಟೋ, ಗಣಿಸಿದವರಾರು?

ಇಂಥಾ ಮಹಾನುಭಾವರು ತಮ್ಮ ಸಂಸ್ಥಾನಾಧಿಪತ್ಯವನ್ನು ಸುಧೀಂದ್ರರಿಗೆ ವಹಿಸಿ ಪರಂಪರಾಗತವಾದ ಚತುಷ್ಷಷ್ಟ್ಯಾದಿ ಸಕಲ ಕಲೆಗಳನ್ನೂ ಉಪದೇಶಿಸಿ, ಶಾಲೀವಾಹನ ೧೫೧೭ನೇ ಮನ್ಮಥ ಸಂವತ್ಸರ ಜ್ಯೇಷ್ಠ ಬಹುಳ ತ್ರಯೋದಶೀ ದಿವಸ ಕುಂಭಕೋಣೆಯಲ್ಲಿ ಕಾವೇರಿತೀರದಲ್ಲಿ ಬೃಂದಾವನಸ್ಥರಾದರೆಂಬುವುದು ಹೃದಯವಿದಾರಕವಲ್ಲವೆ?

ಲೋಕದಲ್ಲಿ ಶಾಸ್ತ್ರಜ್ಞರಾದ ಪಂಡಿತರು ಸರ್ವದಾ ಶಾಸ್ತ್ರಪ್ರವಚನ ಮಾಡುತ್ತಾ ಪರಮಾತ್ಮನ ಚಿಂತನೆಯಿಂದ ಪಾಪದೂರರಾಗಿ ಸದ್ಗತಿಯನ್ನು ಪಡೆಯುತ್ತಾರೆ. ದೇಹದಾರ್ಢ್ಯವುಳ್ಳ ಕರ್ಮಠರು ಸತ್ಕರ್ಮಾನುಷ್ಠಾನದಿಂದ ಚಿತ್ತಶುದ್ಧಿಮಾಡಿಕೊಂಡು ಪಾಪದೂರರಾಗಿ ಸದ್ಗತಿಯನ್ನು ಪಡೆಯುತ್ತಾರೆ. ಎರಡೂ ಇಲ್ಲದ ಶ್ರೀಮಂತರೂ ರಾಜರೂ ದೊಡ್ಡವರ ಸೇವೆಯಿಂದಲೂ ಜನೋಪಯೋಗಿಯಾದ ಧರ್ಮಕಾರ್ಯದಿಂದಲೂ ದುರಿತಗಳನ್ನು ಕಳೆದುಕೊಂಡು ಸದ್ಗತಿಯನ್ನು ಪಡೆಯುತ್ತಾರೆ. ಮೇಲ್ಕಂಡ ಮೂರೂ ಇಲ್ಲದವರ ಗತಿಯೇನು? ಇಂತಹ ಜನರ ಉದ್ಧಾರಾರ್ಥವಾಗಿಯೇ ಕಾಯಕವಾಗಿಲ್ಲದಿದ್ದರೂ ಕಲಿಯ ಭಂಡಾರವಾದ ಮಾನಸಿಕ ಪಾಪಚಿಂತನೆಯಿಂದ ಸಹ ಮುಕ್ತರಾಗಿ ಸದ್ಗತಿ ಪಡೆಯಲೆಂದು ಪರಮ ಕಾರುಣಿಕರಾದ ವಿಜಯೀಂದ್ರರು "ದುರಿತಾಪಹಾರ"ವೆಂಬ ಸ್ತೋತ್ರವನ್ನು ರಚನೆಮಾಡಿ ಕೊಟ್ಟಿರುತ್ತಾರೆ. ಈ ಸ್ತೋತ್ರಪಾರಾಯಣದಿಂದಲೇ ಮಾನವನು ಸಕಲ ದೋಷದೂರನಾಗಿ ಸದ್ಗತಿಯನ್ನು ಪಡೆಯುತ್ತಾನೆಂದು ಸಹ ಅಭಯಕೊಟ್ಟಿರುತ್ತಾರೆ.

ಆ ಸ್ತೋತ್ರವಾದರೋ—

ಸುಕೃತಂ ತಿಲಮಾತ್ರ ತುಲ್ಯಮೀಶ
ಕ್ರಿಯತೇನ್ನೈವ ಮಯೈಕ ವತ್ಸರೇಪಿ
ಅಪಿತುಕ್ರಿಯತೇ ಸದಾಘಪೂಗಃ
ಪ್ರತಿಯಾಮಂ ಸಕಲೇಂದ್ರಿಯೈರ್ಮುಕುಂದ ॥ ೧ ॥
ನಶಿರಶ್ಚಲತೀಹಮೇ ಕದಾಪಿ
ಶೃತಿಜಾನಂದಭರೇಣ ಸದ್ಗುಣಾನಾಂ
ಅಪಿತುಪ್ರಭುಬಂಧು ದುರ್ಗುಣಾನಾಂ
ಶ್ರವಣಾರ್ಥಂಚಲಿತಂ ಭವತ್ಯಶಂಕಂ ॥ ೨ ॥

ಶ್ರವಣೇಶ್ರವಣಾಯ ಸತ್ಕಥಾಯಾ
ನಯತೇತೇತವ ಪುಣ್ಯಕೀರ್ತನಸ್ಯ
ಅಪಿತುವ್ಯಭಿಚಾರ ಲೋಕವಾರ್ತಾ
ಶ್ರವಣಾಯೈವ ಮಹಾಪರಂ ಪ್ರಯಾತಃ || ೩ ||
ನಮಮಾಕ್ಷಿಯುಗಂ ಪ್ರವರ್ತತೇ ಶ್ರೀ
ಭಗವಚ್ಛಾಸ್ತ್ರಕುಲಾವಲೋಕನಾಯ
ಅಪಿತುಧ್ರುವ ಬಾಲನರ್ತಕೀನಾಂ
ಗಣಿಕಾನಾಂ ಪರಿನರ್ತನಾದಿ ದೃಷ್ಟ್ಯೈ || ೪ ||
ನಹಿನಾಸಿಕಯಾ ಕದಾಪಿ ವಿಷ್ಣೋಃ
ಪದಪದ್ಮಾರ್ಪಿತ ಪುಷ್ಪಗಂಧ ಬುದ್ಧಿಃ
ಕಮಲೇಶಭವಾಮಿಕಿಂತು ವಿಷ್ಣೋಃ
ಚರಣಾನರ್ಪಿತ ಪುಷ್ಪಗಂಧಬುದ್ಧಿಃ || ೫ ||
ನೃಹರೇಚ್ಯುತ ಮಾಧವೇಶದಾಮೋ
ದರ ಕೃಷ್ಣಾದ್ರಿಕರೇತಿ ನಾಮಜಾತಂ
ನಚಕೀರ್ತಯತೀಹಮೇ ಕುಜಿಹ್ವಾ
ಪಿತುದುರ್ಲಿಂಗ ಭಗಾಂಕಿತಾಕುಶಬ್ದಾ || ೬ ||
ತವಮಂದಿರ ಮಾರ್ಜನಾದಿಸೇವಾಂ
ನಕರೌಮೇಕುರುತಃ ಕದಾಪಿಭಕ್ತ್ಯಾ
ಅಪಿತೂರು ಗುಣಾರ್ಣದುಷ್ಟವಸ್ತು
ಗ್ರಹಣಾಯೈವ ಯತೇತ ಇಂದಿರೇಶ || ೭ ||
ಉದರಂ ಮಮಧಿಕ್ ಶಠಸ್ಯ ವಿಷ್ಣ್ವ
ರ್ಪಿತ ಪೂತಾನ್ನ ವಿವರ್ಜಿತಂ ನಿತಾಂತಂ
ಯದಪೂತತರಾ ಸಮರ್ಪಿತಾನ್ನಾ
ಧಮವೃಂತಾಕಪಲಾಂಡು ಪೂರ್ವಭಾಜಃ || ೮ ||
ಖಲಜಾರವಧೂಗೃಹಾಣಿ ನಿತ್ಯಂ
ಚರಣಾಭ್ಯಾಮನುಯಾಮ್ಯಹಂ ತ್ವರಾಭ್ಯಾಂ

ನತು ಮಾಧವತಾವ ಕಾಲಯಾಂಶ್ಚ
ಪ್ರತಿಯಾವಿನಾಶ ಮಹಾ ತಮೋಗ್ರಹೋಹಂ ॥ ೯ ॥
ಮನ ಏವಹರೇಖಿಲೇಂದ್ರಿಯಾಣಾಂ
ವರಮಿತ್ಥಂ ಪ್ರಮಿತಂ ಶೃತಿಸ್ಮೃತಿಭ್ಯಾಂ
ಸುಮನೋಜಯಿನೋಖಿಲೇಂದ್ರಿಯಾಣಾಂ
ಜಯಏವೇತಿ ಜನಾನು ಭೂತಿರಸ್ತಿ ॥ ೧೦ ॥
ಮನಸಾಚ್ಯುತ ತಾದೃಶೇನಾ
ಪ್ಯನು ಚಿಂತ್ಯೈವ ಭವನ್ತಮಾತ್ಮಭಕ್ತ್ಯಾ
ಭವವಾರಿನಿಧೇ ಸ್ಸ್ವತಾರಯಂತಂ
ಭವವಾರ್ಧಿಂ ನಹಿತರ್ತುಮಸ್ತಿಯತ್ನಃ ॥ ೧೧ ॥
ಮಮವಾಪಚಯಸ್ಯ ವಾಸುದೇವಾ
ನ್ತ್ರಕ ಲೋಕಸ್ಥಿತಿರೇವ ಚೇತ್ ಫಲಂಸ್ಯಾತ್
ನಸುಖೀ ಸದೃಶೋಸ್ತಿ ಮೇ ತ್ರಿಲೋಕ್ಯಾಂ
ಫಲಭಾವೇನ ಮಹಾತವೋಸ್ತಿ ನಿತ್ಯಂ ॥ ೧೨ ॥
ನ ಸುಖಾನುಭವಾಯ ಪಾವಕರ್ಮಾ
ಣ್ಯಹ ಮಾಶಾನುದಿನಂ ತನೋಮಿಕಿಂತು
ಅಘನಾಶಯಶಃ ಪರೀಕ್ಷಣಾರ್ಥಂ
ತವನಾಮ್ನಾಮನುತಾಪ ಸಿದ್ಧಏವ ॥ ೧೩ ॥
ನಿಜದಾಸರುಷಾ ಪ್ರದಾತುಮಾರ್ತಿಂ
ಹ್ಯಧಿಕಂಪಾಪ ನಿಯಾಮಕೇಽಸುರೇಭ್ಯಃ
ಅಶುಭಾನ್ಯಪಿಕಾರಯನ್ಮಯಾತ್ವಂ
ರಮಸೇ ಸರ್ವನಿಯಾಮಕೇತಿ ಭಾತಿ ॥ ೧೪ ॥
ಯದಿಕೃಷ್ಣ ಕದಾಚನಾಪಿಪುಣ್ಯಂ
ಘಟತೇ ಪಾಪತಮಸ್ಯ ಮೇಪಿತತ್ತು
ಪ್ರಬಲಾಘಚ ಯೈರ್ನಿಹನ್ಯತೇವಾ
ದುರಿತಧ್ವಂಸ ಕೃತಾರ್ಥಮಾಶವಾಸ್ಯಾತ್ ॥ ೧೫ ॥

ತದಿಹೋಭಯತಶ್ಚ ಪುಣ್ಯಕೀರ್ತೇ
ಸುಕೃತಂನೋಘಟತೇ ಮನಾಗಪೀಶ
ವದಮೇಪುರತಸ್ತ್ವತೀವ ಭೀರೋಃ
ಭಗವರ್ಕಾಲಭಯಾಪಹತ್ಯುಪಾಯಂ || ೧೬ ||
ಅತುಲಂ ವರವೈಷ್ಣವಂ ಸುಜನ್ಮಾ
ಽಚ್ಯುತದತ್ತಂ ಕೃಪಯಾತ್ವಯಾಪ್ಯವಾಪ್ಯ
ಕ್ಷಣಜೀವ್ಯಪಿ ಕಲ್ಪಕಾಲ ಬುದ್ಧ್ಯಾ
ಪಶುಚಂಡಾಲವದೇವ ಸಂಚರಾಮಿ || ೧೭||
ನತದಸ್ತಿ ಶರೀರಿಣಾಂ ಶತಾಬ್ದಾ
ಯುಷಿಶಾಸ್ತ್ರಪ್ರಭವೇಪಿಕಿಂಚಿದೇವ
ಭಗವನ್ಖಲುಸುಪ್ತಿ ರಾತ್ರಿಕಾಲೋ
ಜಲಹೋಮೋಪಮತಾ ಮುಪೈತಿನೋಲಂ || ೧೮ ||
ದ್ವಿದಶಾಬ್ದಯುಗಂ ದಿವಾಪಿಪೂರ್ವೋ
ತ್ತರವಿಾಶಸ್ಥವಿರತ್ವ ಶೈಶವಾಭ್ಯಾಂ
ಸಮಯಂ ಪ್ರಣಯಾಮಿ ಸರ್ವರೋಗೈ
ರ್ಬಹುಲೀಲಾಭಿರಪಿ ಪ್ರಮೂಢ ಬುಧ್ಯಾ || ೧೯ ||
ಪರಿಶೇಷಿತ ಈಶಮಧ್ಯಕಾಲಃ
ಸುಕೃತೇ ಭಾರತಭೂತಲೇ ವರಿಷ್ಠಃ
ಯದಿಹಾಪಿಸದೈವ ಪಾಪಚಿತ್ತೇ
ಮಯಿಪಶ್ಯಂತ್ಯ ಜಯೋಶ್ಚಕೋವಿಶೇಷಃ || ೨೦ ||
ಇಹಭಾರತ ಭೂತಲೇತಿ ಪುಣ್ಯೇ
ದ್ರವಿಣಸ್ತ್ರೀಸುತ ಪೂರ್ವಕೇಷುಮಾಯಾಂ ||
ಅಲಮೇಕದಿನಂ ವಿಮುಚ್ಯವಾಮೇ
ತವಪಾದಾಬ್ಜರತಿಂ ಪ್ರದೇಹಿದೇಹಿ || ೨೧ ||
ರಮಯಾಪ್ಯಗಣೇಯವಸ್ತುಜಾತಂ
ದ್ವಿವಿಧಂ ಪ್ರಾಹುರನಲ್ಪ ಪುಣ್ಯಭಾಜಃ

ತವಸದ್ಗುಣಜಾತ ಮನ್ಯನ್ಮ
ಮದುರ್ವಾರದುರಂತ ಪಾಪಜಾತಂ ॥ ೨೨ ॥
ಅತಿಸೌಖ್ಯಕರಾಣ್ಯಲಂ ಪರತ್ರೇ
ಹಚಕಿಂಚಿಚ್ಛ್ರಮಸಾಧ್ಯಸಾಧನಾನಿ
ಶ್ರಮಭೀರುರಹಂ ತ್ಯಜನ್ಸರತ್ರಾ
ಮಿತಶೋಕಾನುಭವೀಕಥಂಭವಾಮಿ ॥ ೨೩ ॥
ಭುವಿಯದ್ಯಪಿ ಪಾಪಿನೋ ವಸಂತಿ
ಶ್ರಮಭಾಜಃ ಪುರುಷಾತಥಾಪಿಕೋಪಿ
ಮಮಪಾಪಸಮಾನ ಪಾಪಕರ್ತಾ
ಪುರುಷೋನಾಸ್ತಿ ಹಿ ನಾಸ್ತಿ ನಾಸ್ತಿ ನಾಸ್ತಿ ॥ ೨೪ ॥
ನತಯೋನಕೃತಾಃ ಪ್ರದಕ್ಷಿಣಾಶ್ಚ
ಸ್ತುತಯೋಪಿಧ್ರುವಮಂತರೇಣ ದಂಭಂ
ನ ಗುರುಃ ಪರಿಸೇವಿತಸ್ಸುಭಕ್ತ್ಯಾ
ಶುಭಶಾಸ್ತ್ರಶ್ರವಣಂ ಕಥಂ ತತಃಸ್ಯಾತ್ ॥ ೨೫ ॥
ವಚನೈರ್ಬಹುಭಿರ್ಮುಕುಂದಕಿಂತೇ
ಶೃಣುಮೇಬೀಜ ವಚೋವದಾಮಿತುಭ್ಯಂ
ಭುವನತ್ರಯ ಸಂಸ್ಥಿತಾನಿಯಾನೀ
ಶ್ವರಪಾಪಾನಿ ವಸಂತಿಮಯ್ಯಯೋಗ್ಯೇ ॥ ೨೬ ॥
ಪ್ರಕೃತೇತದಘವ್ರಜಾತ್ಪ್ರಮುಕ್ತಿಃ
ನಭವೇತ್ಕೈರಪಿತೇದಯಾಂ ವಿನಾದ್ಯ
ಕರುಣಾಂ ಕುರುಮಯ್ಯತೋ ದಯಾಳೋ
ನತಯಸ್ತೇಕಮಲೇಶಸಂತ್ವನಂತಾಃ ॥ ೨೭ ॥
ವಿಜಯೀಂದ್ರಯತೀಶ್ವರೋವ್ಯತಾನೀತ್
ಸ್ತುತಿಮೇತಾಂ ದುರಿತಾಪಹಾಂ ಮುರಾರೇಃ
ಪಠನಾದರತಸ್ಸದಾಪಠೇದ್ಯೋ
ನಿಖಿಲೈಃ ಪಾಪಚಯೈರ್ಭವೇತ್ಸಮುಕ್ತಃ ॥ ೨೮ ॥

ಎಂಬಂತಿದೆ.

ಹೀಗೆ ವಿಜಯೀಂದ್ರತೀರ್ಥರ ಸಂಕ್ಷೇಪ ಚರಿತ್ರೆಯ ವಿವರಣೆಯಾಯಿತು. ಮುಖ್ಯ ಕಥಾನಾಯಕನ ವಿಚಾರವೇನೆಂಬುದನ್ನು ವಿಚಾರಿಸಬೇಕಾಯಿತು

ಮೊದಲನೇ ಜನ್ಮವೃತ್ತಾಂತ ಪ್ರಕರಣದಲ್ಲಿ ಬರೆದಿರುವಂತೆ ತಿಮ್ಮಣ್ಣ ಭಟ್ಟನು ತನ್ನ ಅಂತಿಮಕಾಲವನ್ನು ಭುವನಗಿರಿಯಲ್ಲೇ ಕಳೆಯಬೇಕೆಂದು ಬಂದನು. ವಯಸ್ಸಿಗಿಂತ ಮನಸ್ಸಿನಲ್ಲಿ ತುಂಬಿದ್ದ ದಾರಿದ್ರ್ಯದ ಸಂಕಟ ಅದರಿಂದಲೇ ವ್ಯಾಧಿ. ದೊಡ್ಡಸ್ತಿಕೆಯಿಂದ ಬಾಳಿದ ಗೋಳು! ಸುಧೀಂದ್ರರು ಎಷ್ಟೇ ಸಂಭಾವನೆ ಕೊಟ್ಟಿದ್ದರೂ ಆದರಿಂದ ಆಜನ್ಮ ಜೀವನವಾದೀತೆ ?

---

## ೩. ವೆಂಕಟಭಟ್ಟನ ಬಾಲ್ಯ ಮತ್ತು ವಿದ್ಯಾಭ್ಯಾಸ.

ಇತ್ತ ಚಿಕ್ಕಮಗನಿಗೆ ೫-೬ ವರ್ಷಗಳಾದವು ಕುಂಭಕೋಣೆಯಲ್ಲಿ ಸ್ವಾಮಿಗಳ ದರ್ಶನಮಾಡಿ ಬಂದಾಗಿನಿಂದ ತಾನೂ ಹಾಗೆಯೇ ದೇವರ ಪೂಜೆಮಾಡುವೆನೆಂದು, ತಲೆಗೊಂದು ವಸ್ತ್ರವನ್ನು ಯತಿಗಳಂತೆ ಕಟ್ಟಿಕೊಂಡು ತನ್ನ ಆಟದ ದೇವರಮುಂದೆ ಕೂಡುತ್ತಿದ್ದನು. ತಾಯಿತಂದೆಗಳಿವನ ವೈಚಿತ್ರ್ಯಕ್ಕೆ ಬೆರಗಾಗಿ ಕಣ್ಣೀರಿಡುತ್ತಿದ್ದರು. ಭಟ್ಟನು ತನ್ನ ದೇಹಾಲಸ್ಯ ಕಾರಣದಿಂದ ಗುರುರಾಜನಿಗೇ ಈ ಬಾಲಕನ ವಿದ್ಯಾಭ್ಯಾಸದ ಭಾರವನ್ನೊಪ್ಪಿ ಸಿದ್ದನು.

ತಿಮ್ಮಣ್ಣನ ವ್ಯಾಧಿ ಹೆಚ್ಚಿತು. ಗುಣವಾಗುವ ಭರವಸೆ ತಪ್ಪಿತು. ಹಿರಿಯನಾದುದರಿಂದ ಗುರುರಾಜನಿಗೆ ಹೇಳತಕ್ಕ ಬುದ್ಧಿವಾದಗಳನ್ನು ಹೇಳಿದನು. ವೆಂಕಟಭಟ್ಟನನ್ನೂ ಗೋಪಮ್ಮನನ್ನೂ ಅವನ ಕೈಹಿಡಿದೊಪ್ಪಿಸಿ ಮಾನದಿಂದ ಕಾಪಾಡೆಂದು ಗದ್ಗದ ಕಂಠನಾಗಿ ಎಚ್ಚರದಪ್ಪಿದನು. ಸ್ವಲ್ಪ ಹೊತ್ತಿನ ಮೇಲೆ ಸಂಜ್ಞೆ ತಿಳಿದು ಹರಿನಾಮಸ್ಮರಣೆಗಾರಂಭಿಸಿದನು. ಶ್ವಾಸ ಗತಿಯು ವ್ಯಸ್ತವಾಯಿತು. ಎಲ್ಲರೂ ನಿರಾಶರಾದರು. ಸ್ವಲ್ಪ ಕಾಲ ಕಳೆಯ್ಯುವುದರೊಳಗೆ ಕಳೇಬರವನ್ನು ತ್ಯಜಿಸಿದನು. ಮುಂದಿನ ಕಾರ್ಯಗಳು ಲೋಪ ವಿಲ್ಲದೆ ನಡೆದುವು. ಗುರುರಾಜನು ಕಷ್ಟದಿಂದ ಸಂಸಾರವನ್ನು ನಿರ್ವಹಿಸ ಬೇಕಾಯಿತು. ತಾನು ಕಲಿತಿದ್ದ ವೀಣಾವಿದ್ಯೆಯನ್ನೇ ಜೀವನೋಪಾಯ ವಾಗಿ ಮಾಡಿಕೊಂಡನು. ಒಂದೇ ಸ್ಥಳದಲ್ಲಿದ್ದು ಜೀವಿಸುವುದು ಕಷ್ಟವಾಗಿ

ದೇಶಾಟನೆಗೂ ಪ್ರಾರಂಭಿಸಿದನು. ಧರ್ಮಿಷ್ಠರಾದ ಜನರ ಸಹಾಯದಿಂದ ತಮ್ಮನಿಗೆ ಎಂಟನೇ ವಯಸ್ಸಿನಲ್ಲಿ ಉಪನಯನಮಾಡಿದನು. ತನ್ನ ತಾಪತ್ರಯಗಳಲ್ಲಿ ಅವನ ವಿದ್ಯಾವ್ಯಾಸಂಗವು ಸಾಂಗವಾಗದೆಂದು ಮಧುರೆಗೆ ಕರೆದುಕೊಂಡುಹೋಗಿ ಭಾವನ ಮನೆಯಲ್ಲಿ ಬಿಟ್ಟುಬಂದನು.

ಲಕ್ಷ್ಮೀನೃಸಿಂಹಾಚಾರ್ಯನು ವೆಂಕಟಭಟ್ಟನನ್ನು ಪ್ರೀತಿಯಿಂದ ಕಾಣುತ್ತಾ ಅವನಿಗೆ ಚನ್ನಾಗಿ ವಿದ್ಯೆಯನ್ನು ಕಲಿಸಿದನು ಅನೇಕ ವರ್ಷ ನಿರಾತಂಕವಾಗಿ ವ್ಯಾಸಂಗ ನಡೆದುದರಿಂದ ವೇದದಲ್ಲಿಯೂ ತರ್ಕ ವ್ಯಾಕರಣ ವೇದಾಂತ ಶಾಸ್ತ್ರಗಳಲ್ಲಿಯೂ ಭಟ್ಟನು ಮಹಾ ಪಂಡಿತನೆನಿಸಿದನು. "ಸುಧಾಪಠನೀಯಾ, ವಸುಧಾಪಾಲನೀಯಾ" ಎಂಬ ಗಾದೆಗೆ ಸರಿಯಾಗಿ ಭಟ್ಟನಿಗೆ ಸುಧಾಪಾರಗನಾಗುವದೊಂದು ಚಿಂತಿತ್ತು. ಅನಂತರ ಮಧುರೆಯನ್ನು ಬಿಟ್ಟು ಭುವನಗಿರಿಗೆ ಬಂದು ಅಣ್ಣನಿಂದ ವೀಣೆಯನ್ನು ಚನ್ನಾಗಿ ಕಲಿತು ಪ್ರವೀಣನೆನಿಸಿದನು ಸುಧಾವ್ಯಾಸಂಗದ ಚಿಂತೆ ಹೆಚ್ಚಲು, ಅಣ್ಣನನುಮತಿಯಿಂದ ಶ್ರೀಸುಧೀಂದ್ರರಲ್ಲಿ ವ್ಯಾಸಂಗ ಮಾಡಲು ಕುಂಭಕೋಣೆಗೆ ಬಂದನು.

ಸ್ವಾಮಿಗಳಿಗೆ ಭಟ್ಟನು ಮೂರು ವರ್ಷದ ಬಾಲಕನಾಗಿ ಮಹಾಸಮಾರಾಧನೆಗೆ ತಂದೆಯೊಡನೆ ಬಂದಾಗಿನಿಂದ ಇವನ ವಿಚಾರದಲ್ಲಿ ಪರಮಾದರವಿತ್ತು. ಭಟ್ಟನೂ ಆಗಾಗ ಸ್ವಾಮಿಗಳ ದರ್ಶನಕ್ಕೆ ಬರುತ್ತಿದ್ದನು. ಸ್ವಾಮಿಗಳು ಇವನ ವ್ಯಾಸಂಗ ಹೇಗೆ ನಡೆಯುತ್ತಿರುವುದೆಂದು ವಿಚಾರಿಸಿಕೊಳ್ಳುತ್ತಿದ್ದರು. ಭಟ್ಟನು ತಾನಾಗಿ ವ್ಯಾಸಂಗಕ್ಕೆ ಬಂದನೆಂದಮೇಲೆ ಹೇಳುವದೇನು ? ಸ್ವಾಮಿಗಳಿಗೆ ಪರಮಾನಂದವಾಯಿತು. ಇತರ ಶಿಷ್ಯರಿಗೆ ಈ ಅಭಿಪ್ರಾಯವನ್ನು ತಿಳಿಸದೆ ಎಲ್ಲರೊಡನೆ ಆತನಿಗೂ ಸುಧಾಪಾಠಕ್ಕಾರಂಭಿಸಿದರು.

ಭಟ್ಟನ ಸಹಾಧ್ಯಾಯಿಗಳೆಲ್ಲರೂ ಕುಂಭಕೋಣಾವಾಸಿಗಳಾಗಿದ್ದರು. ತಾವೇ ಪರಮ ಪ್ರವೀಣರೆಂದೂ, ಹೊಸಬನಾದ ಭಟ್ಟನು ಯಾತಕ್ಕೂ ತರವಲ್ಲದವನೆಂದೂ ಗರ್ವಿಷ್ಠರಾಗಿದ್ದರು ತಾವು ಉತ್ತಮ ತರಗತಿಯಲ್ಲಿ ವ್ಯಾಸಂಗಮಾಡುವವರಾದ್ದರಿಂದ, ಸಾಮಾನ್ಯರೊಡನೆ ಮಾತನಾಡುವುದು ತಮ್ಮ ಅಂತಸ್ತಿಗೆ ಅಗೌರವವೆಂದು ಭಾವಿಸಿದ್ದರು. ಅವರೆಲ್ಲರೂ ವ್ಯಾಸಂಗ

ಮಾಡುವುದಕ್ಕಿಂತ ಹೆಚ್ಚಾಗಿ ವಿನೋದಗಳಲ್ಲಿ ಕಾಲಹರಣಮಾಡುತ್ತಿದ್ದರು. ಭಟ್ಟನು ಮಿತಭಾಷಿಯಾಗಿದ್ದುದರಿಂದ ಮೊದ್ದುಮನುಷ್ಯನೆಂದರಿತು ಅವನನ್ನು ತಮ್ಮ ಜೊತೆಯಲ್ಲಿ ಸೇರಿಸಿಕೊಳ್ಳುತ್ತಿರಲಿಲ್ಲ. ಅವರ ಒಣಗರ್ವವೂ ಭಟ್ಟನಿಗೆ ಸರಿಬೀಳುತ್ತಿರಲಿಲ್ಲ ತನ್ನಿಷ್ಟಕ್ಕೆ ತಾನೇ ಸಾರವಾದ ಭಾಗಗಳನ್ನು ಚಿಂತನೆಮಾಡಿಕೊಳ್ಳುತ್ತಾ, ಅಪ್ರಕೃತವಾದ ಮಾತನ್ನು ಯಾವಾಗಲೂ ಯಾರೊಡನೆಯೂ ಆಡದೆ ಮೌನದಿಂದಿರುತ್ತಿದ್ದನು. ಸಹಾಧ್ಯಾಯಿಗಳಿಗದು ಸರಿಬೀಳಲಿಲ್ಲ. ಮೊದಮೊದಲು ಉದಾಸೀನವೂ ಕಡೆಗೆ ದ್ವೇಷವೂ ಉಂಟಾಯಿತು. ಏನಾದರೂ ಮಾಡಿ ಭಟ್ಟನನ್ನು ತಮ್ಮ ಜೊತೆಯಲ್ಲಿ ಪಾಠಕ್ಕೆ ಸೇರದಂತೆ ಮಾಡಬೇಕೆಂದೂ, ಕುಂಭಕೋಣೆಯಿಂದೋಡಿಸಿ ಬಿಡಬೇಕೆಂದೂ ದುರಾಲೋಚನೆಯಲ್ಲಿದ್ದರು ಈ ತಂತ್ರಗಳು ಭಟ್ಟನಿಗೆ ತಿಳಿಯಲಿಲ್ಲ ಚಿಕ್ಕ ತರಗತಿಯ ಬಾಲಕರು ತಮಗೆ ತಿಳಿಯದ ವಿಷಯದಲ್ಲಿ ಪ್ರಶ್ನೆಮಾಡಿದರೆ ಪ್ರೀತಿಯಿಂದ ಹೇಳಿಕೊಡುತ್ತಿದ್ದನು. ತಾನು ಸ್ವಾಮಿಗಳಲ್ಲಿ ವ್ಯಾಸಂಗ ಮಾಡಿದಂಶಗಳನ್ನು ಪುಷ್ಟೀಕರಿಸಿ "ಪರಿಮಳ" ವೆಂಬ ಹೆಸರಿನಿಂದ ಗ್ರಂಥವಾಗಿ ಬರೆದಿಡುತ್ತಿದ್ದನು. ಭಟ್ಟನು ವಾಸವಾಗಿದ್ದ ಮಂಟಪಕ್ಕೆ ಅಡ್ಡಗೋಡೆಯೊಂದು ವಿನಾ ಬಾಗಿಲು,ಸಹ ಇರಲಿಲ್ಲ. ರಾತ್ರಿಯವೇಳೆ ಬೆಳಕಿಗೂ ಗತಿಯಿರಲಿಲ್ಲ. ಮರಗಳ ಕೆಳಗೆ ಉದುರಿಬಿದ್ದ ಎಲೆಗಳನ್ನು ತಂದುರಿಸಿ ಆ ಬೆಳಕಿನಲ್ಲಿ ಗ್ರಂಥವನ್ನು ಬರೆದಿಡುತ್ತಿದ್ದನು. ಹಗಲು ಸ್ನಾನಾಹ್ನಿಕಗಳಲ್ಲೂ, ರಾತ್ರಿ ಹೆಚ್ಚುಕಾಲ ಗ್ರಂಥಲೇಖನದಲ್ಲೂ ಕಳೆದುಹೋಗುತ್ತಿತ್ತು. ಅನೇಕಸಲ ರಾತ್ರಿಯೂಟವೂ ಸಿಕ್ಕುತ್ತಿರಲಿಲ್ಲ ತಾನಿಷ್ಟು ಕಷ್ಟಪಡುತ್ತಿದ್ದರೂ ಗುರುಗಳ ಮುಂದೆ ಹೇಳಿಕೊಳ್ಳುತ್ತಿರಲಿಲ್ಲ.

ಹೀಗಿದ್ದರೂ ಸಹಾಧ್ಯಾಯಿಗಳ ಕನಿಕರಕ್ಕಿವನು ಪಾತ್ರನಾಗಲಿಲ್ಲ. ಅವರು ಸ್ವಾಮಿಗಳ ಮುಂದೇನಾದರೂ ಕ್ಷುದ್ರಹೇಳಿ ಭಟ್ಟನನ್ನೋಡಿಸಬೇಕೆಂದು ಹೊಂಚುಹಾಕುತ್ತಿದ್ದರು. ಮಾಡುವುದೇನು ? ದುರ್ಜನರ ಸ್ವಭಾವವೇ ಇಂಥಾದ್ದು. ಪರರಲ್ಲಿಲ್ಲದ ದೋಷಾರೋಪಣೆ ಮಾಡುವರು. ವಿದ್ಯೆಯನ್ನು ವಿವಾದಕ್ಕಾಗಿ ವಿನಿಯೋಗಿಸುವರು. ದೇಹಬಲವನ್ನು ಪರಪೀಡೆಗೆ ವಿನಾಸಲಿಡುವರು. ಧನವಿದ್ದರೆ ಮದೋನ್ಮತ್ತರಾಗಿ ಅವರ ಬಲದಿಂದ ಮಾಡಬಾರದುದನ್ನೇ ಮಾಡುವರು.

ಭಟ್ಟನಲ್ಲಿ ಹುಡುಕಿದರೂ ದೋಷಗಳು ಸಿಕ್ಕದಿರಲು ಮತ್ತೂ ಕೃದ್ಧ ರಾಗಿ ಸ್ವಾಮಿಗಳ ಬಳಿಗೆ ಬಂದು— "ಮಹಾಸ್ವಾಮಿ, ಭಟ್ಟನು ಶುದ್ಧ ದಡ್ಡನು. ಓದುವೆನೆಂದು ನಮ್ಮೊಡನೆ ಕೂತುಕೊಂಡಿರುವುದೇ ಪ್ರತಿಷ್ಠೆ ಯೆಂದು ತಿಳಿದಿರುವನು. ಸರಿಯಾಗಿ ಚಿಂತನೆ ಮಾಡುವುದಿಲ್ಲ. ಶಿಷ್ಟಾಚಾರಕ್ಕೆ ವಿರೋಧವಾಗಿ ಮಡಿಯ ಕಾಲದಲ್ಲೂ ನಟವಿಟ ಗಾಯಕರಂತೆ ಸಂಗೀತವನ್ನು ಗೊಣಗುಟ್ಟುತ್ತಾನೆ. ಚಿಕ್ಕ ತರಗತಿಯ ಬಾಲಕರೊಡನೆ ಯಾವಾಗಲೂ ಇವನಿಗೆ ಚಕ್ಕಂದ. ಇಂಥವನೊಡನೆ ವ್ಯಾಸಂಗಮಾಡುವುದು ನಮ್ಮಂಥ ಪ್ರತಿಷ್ಠಿತರಿಗೆ ವಿದ್ವನ್ಮರ್ಯಾದೆಯಲ್ಲ. ಒಂದು ವಾಕ್ಯವನ್ನಾದರೂ ಅರ್ಥಮಾಡಿ ಕೊಳ್ಳುವ ಯೋಗ್ಯತೆಯಿಲ್ಲದವನನ್ನು ನಮ್ಮ ತರಗತಿಯಿಂದ ತಪ್ಪಿಸಿ ಬಿಡ ಬೇಕು" ಎಂದು ಏಕಕಂಠದಿಂದ ಹೇಳಿದರು. ಭಟ್ಟನ ಯೋಗ್ಯತೆಯನ್ನರಿತ ಸ್ವಾಮಿಗಳು ಸ್ವಲ್ಪ ಯೋಚಿಸಿ, "ಒಳ್ಳೆಯದು, ಅವನನ್ನು ನಾವೇ ವಿಚಾರಿಸಿ ಕೊಳ್ಳುತ್ತೇವೆ. ಆ ಭಾರ ನಮಗಿರಲಿ" ಎಂದು ಹೇಳಿಕಳುಹಿಸಿದರು. ಕ್ಷುದ್ರ ಗಾರರು ತಮ್ಮ ಮಂತ್ರ ಫಲಿಸಿತೆಂದು ಒಳಗೊಳಗೇ ಹಿಗ್ಗಿದರು.

ಮರುದಿನ, ಪಾಠಕಾಲದಲ್ಲಿ ಯಾವುದೋ ಸಂದಿಗ್ಧ ವಿಷಯವನ್ನು ವಿಸ್ತರಿಸದೆ, ಪಾಠವನ್ನಲ್ಲಿಗೇ ನಿಲ್ಲಿಸಿ, ವಿದ್ಯಾರ್ಥಿಗಳೆಲ್ಲರೂ ಈ ವಾಕ್ಯವನ್ನು ಚನ್ನಾಗಿ ಯೋಚಿಸಿಕೊಂಡು ಬರಬೇಕೆಂದು ಕಳುಹಿಸಿಕೊಟ್ಟರು. ಭಟ್ಟ ನಾದರೋ ಆ ವಾಕ್ಯವನ್ನು ವಿಶದಪಡಿಸಿ ಹೇಳದಿದ್ದರೂ ಗುರ್ವನುಗ್ರಹ ವಿಶೇಷದಿಂದ "ಪರಿಮಳ"ದಲ್ಲಿ ಬರೆದಿಟ್ಟನು.

ಆ ರಾತ್ರಿ ಸ್ವಾಮಿಗಳು ದ್ವಾರಪಾಲಕನೊಬ್ಬನ ಕೈಯಲ್ಲಿ ದೀಪವನ್ನು ಹಿಡಿಸಿಕೊಂಡು, ಎಲ್ಲಾ ವಿದ್ಯಾರ್ಥಿಗಳೂ ಗಾಢನಿದ್ರೆಯಿಂದಿರುವುದನ್ನು ಕಂಡು, ಭಟ್ಟನ ಮುರುಕು ಮಂಟಪಕ್ಕೂ ದ್ವಾರಪಾಲಕನ ಸಹಾಯದಿಂದಲೇ ಬಂದು ನೋಡಿದರು. ಅದುವರೆಗೂ ಭಟ್ಟನು ಈ ಮುರುಕು ಮಂಟಪ ದಲ್ಲಿರುವ ಕಲ್ಪನೆಯು ಸ್ವಾಮಿಗಳಿಗಾಗಿರಲಿಲ್ಲ ಅವನು ಆಗತಾನೇ ವ್ಯಾಸಂಗ ವನ್ನು ಮುಗಿಸಿ ಮಲಗಿದ್ದನು. ನಿದ್ರೆ ಹತ್ತಿದ್ದರಿಂದ ಸ್ವಾಮಿಗಳು ಬಂದ ಸುಳಿವು ಅವನಿಗೆ ತಿಳಿಯಲಿಲ್ಲ. ತಲೆಯಮೇಲೆ ಮುರಿದು ಬೀಳುವಂತಿದ್ದ ಮಂಡಪವನ್ನೂ, ದೀಪಕ್ಕೆ ಗತಿಯಿಲ್ಲದೆ ತರಗೆಲೆಗಳನ್ನುರಿಸಿ ಬೆಳಕು ಮಾಡಿ ಕೊಂಡು ವ್ಯಾಸಂಗಮಾಡುವ ದರಿದ್ರುದೆಸೆಯನ್ನೂ ನೋಡಿ ಸ್ವಾಮಿಗಳ

ಮನಸ್ಸು ಮರುಗಿತು. ತಲೆಯ ಪಕ್ಕದಲ್ಲಿಟ್ಟುಕೊಂಡಿದ್ದ ಛಿದ್ರಛಿದ್ರ ಕಾಗದ ಗಳಲ್ಲಿ ಅದೇನು ಬರೆದಿರುವನೋ ಎಂದು ನೋಡಿದರು. ಕೊನೆಯಪುಟದಲ್ಲಿ ಆ ದಿನದ ವಾಕ್ಯಾರ್ಥವು ಸ್ಪಷ್ಟವಾಗಿರುವುದನ್ನು ನೋಡಿ ಸ್ವಾಮಿಗಳಿಗೆ ಪರಮಾ ನಂದವಾಯಿತು. ಪುಸ್ತಕವನ್ನು ಬಗಲಿಗಿಟ್ಟುಕೊಂಡು, ಭಟ್ಟನ ಹರುಕು ಚಿಂದಿಯ ಹೊದ್ದಿಕೆಯನ್ನು ನೋಡಿ ಮತ್ತೂ ಮನಮರುಗಿ, ತಾವು ಹೊದ್ದಿದ್ದ ಶಹಲನ್ನೇ ಹೊದ್ದಿಸಿ ಮಠಕ್ಕೆ ಬಂದರು.

ಬೆಳಗಾಗಲು ಭಟ್ಟನು ತನ್ನ ಪಕ್ಕದಲ್ಲಿಟ್ಟಿದ್ದ ಪುಸ್ತಕವನ್ನು ಕಾಣದೆ ಹುಡುಕಿದನು. ಅದು ಸಿಕ್ಕಲಿಲ್ಲ. ಮರೆತು ಮತ್ತೆಲ್ಲಾದರೂ ಇಟ್ಟಿರಬಹು ದೆಂದು ಮಂಟಪದಲ್ಲೆಲ್ಲಾ ತಡಕಿದನು. ಅದು ಅಲ್ಲಿರಲಿಲ್ಲ. ತಟ್ಟನೆ ತನ್ನ ಹೊದ್ದಿಕೆಯನ್ನು ನೋಡಿ ಗಾಬರಿಗೊಂಡನು. “ಸ್ವಾಮಿಗಳ ಶಹಲು ಇಲ್ಲಿ ಬಂದುದು ಹೇಗೆ ? ನಾನು ಮಲಗುವಾಗ ಹರಕು ಬಟ್ಟೆಯನ್ನೇ ಹೊದ್ದು ಕೊಂಡೆನು. ಪಕ್ಕದಲ್ಲಿದ್ದ ಪುಸ್ತಕವೇ ಮಾಯವಾಗಿದೆ. ಹೊಸದಾಗಿ ಶಹಲು ಬಂದಿದೆ. ಸಹಾಧ್ಯಾಯಿಗಳಾರಾದರೂ ಹೀಗೆ ಮಾಡಿರಬಹುದೇ ? ಅವರಿಗೆ ನಾನು ಮಾಡಿರುವ ಅನ್ಯಾಯವೇನು ? ಸ್ವಾಮಿಗಳ ಶಹಲು ಅವರಿಗೆ ಹೇಗೆ ಸಿಕ್ಕಬೇಕು ? ಸ್ವಾಮಿಗಳಿಗೀಸಂಗತಿ ತಿಳಿದರೆ ನನ್ನನ್ನು ಕಳ್ಳನೆಂದೇ ಭಾವಿಸು ವರಲ್ಲಾ ! ಏನು ಮಾಡಲಿ ? ಯಾರನ್ನು ಕೇಳಲಿ ? ನಡೆದಿರುವ ಸಂಗತಿ ಯನ್ನು ಸ್ವಾಮಿಗಳಿಗೆ ತಿಳಿಸಿಬಿಡುವುದು ನನ್ನ ಕೆಲಸ. ನಾನು ನಿರಪರಾಧಿ ಯೆಂಬುದನ್ನು ದೇವರೊಬ್ಬನೇ ಬಲ್ಲ. ಗುರುಗಳ ಮನಸ್ಸಿಗೆ ನನ್ನಮೇಲೆ ಸಂಶಯಬಂದರೆ ನನ್ನನ್ನು ಮಠದಿಂದ ಓಡಿಸಿಬಿಡುವರು. ಸರ್ವಜ್ಞ ಶಾಸ್ತ್ರಾಧ್ಯಯನಮಾಡಿ ಕೃತಾರ್ಥನಾಗುವ ಸುಕೃತವೇ ನನಗಿಲ್ಲದಹಾಗಾಯಿತು. ಸಚ್ಛಾಸ್ತ್ರವ್ಯಾಸಂಗವು ನಿರ್ವಿಘ್ನವಾಗಿ ನಡೆಯುವುದೇ ಈಶ್ವರಾನುಗ್ರಹವೆಂದು ಹಿರಿಯರು ಹೇಳುವರು. ಆ ಭಾಗ್ಯವೂ ನನ್ನ ಪಾಲಿಗಿಲ್ಲದೇಹೋಯಿತೇ ! ಸ್ವಾಮಿಗಳು ನನ್ನನ್ನು ಕಳ್ಳನೆಂದು ತಿಳಿದರೆ ನಾನೊಬ್ಬರಿಗೂ ಮುಖವನ್ನು ತೋರಿಸುವಹಾಗಿಲ್ಲ. ಈಗ ನಡೆದಿರುವುದರ ವಾಸ್ತವಾಂಶವಾದರೂ ಹೊರ ಬೀಳಬೇಕು. ಇಲ್ಲವೇ ನನ್ನ ಜೀವಿಕೆಯ ಪರಮಾವಧಿಯಾದರೂ ಮುಗಿಯ ಬೇಕು. ಆದದ್ದಾಗಲಿ, ಎಷ್ಟು ಯೋಚಿಸಿದರೂ ಒಂದೇ. ದೇವರೇಗತಿ” ಎಂದು ಪರಿಪರಿಯಾಗಿ ಗೋಳಾಡಿ ಮಠಕ್ಕೆ ಹೋದನು. ಸ್ವಾಮಿಗಳನ್ನು

ಕಂಡು ಸಾಷ್ಟಾಂಗ ಪ್ರಣಾಮಮಾಡಿ, ಶಹಲನ್ನು ಮುಂದಿಟ್ಟು "ಮಹಾಸ್ವಾಮೀ ನಾನು ಯಾವ ಮೋಸವನ್ನೂ ಅರಿತವನಲ್ಲ. ತಮ್ಮ ಶಹಲನ್ನು ಯಾರೋ ತಂದು ನನಗೆ ನಿದ್ರೆಬಂದಾಗ ಹೊದಿಸಿರುತ್ತಾರೆ. ನನ್ನ ಬಳಿ ಇದ್ದ ಪುಸ್ತಕವನ್ನೂ ತೆಗೆದುಕೊಂಡು ಹೋಗಿದ್ದಾರೆ. ಸಹಾಧ್ಯಾಯಿಗಳಾರಾದರೂ ಹೀಗೆ ಮಾಡಿರಬಹುದೆಂದು ಯೋಚಿಸಲು ನನಗಾರೂ ದ್ವೇಷಿಗಳಿಲ್ಲ. ಯಾರನ್ನೂ ದ್ವೇಷಿಸುವುದೂ ದೂಷಿಸುವುದೂ ನನ್ನ ಸ್ವಭಾವವಲ್ಲ. ಇದೆಲ್ಲಾ ಹೇಗೆ ನಡೆಯಿತೋ ನನಗೆ ಗೊತ್ತಿಲ್ಲ. ಸರ್ವಜ್ಞರಾದ ತಾವೇ ವಿಚಾರಿಸಬೇಕು. ಇದೋ—ಶಹಲನ್ನು ಸ್ವೀಕರಿಸಬೇಕು. ಪೂಜ್ಯಪಾದರ ದೇಹಸ್ಪರ್ಶದಿಂದ ಪರಿಶುದ್ಧವಾಗಿದ್ದು, ಈ ಪಾಪಾತ್ಮನ ಶರೀರಸೋಕಿ ಅಪವಿತ್ರವಾಯಿತೆಂದು ವಿಷಾದಿಸುತ್ತೇನೆ" ಎಂದು ಪ್ರಣಾಮಮಾಡಿ ಕಣ್ಣೀರುದುರಿಸಿದನು. ಈತನ ನಿಷ್ಕಪಟ ಸ್ವಭಾವದಿಂದ ಸ್ವಾಮಿಗಳ ಮನಸ್ಸು ಕರಗಿತು. "ವೆಂಕಣ್ಣಾ! ಇದೇನು? ನಿನ್ನ ಸ್ವಭಾವ ನಮಗೆ ತಿಳಿಯದೇ? ಏನೂ ಪ್ರಮಾದವಾಗಿಲ್ಲ. ಹೆದರದಿರು. ಪಾಠಕಾಲದಲ್ಲಿ ವಿಚಾರಿಸೋಣ. ನಿನ್ನಲ್ಲಿ ನಮಗೆ ಪೂರ್ಣ ಭರವಸೆ ಇರುವುದು. ಪುಸ್ತಕವು ತಾನಾಗಿಯೇ ಸಿಕ್ಕುವುದು. ಶಹಲನ್ನು ತೆಗೆದುಕೋ. ಅದು ನಿನ್ನದೇ" ಎಂದು ಜಪಕ್ಕೆ ಕುಳಿತರು.

ಉಳಿದ ಶಿಷ್ಯರೆಲ್ಲರೂ ಒಬ್ಬೊಬ್ಬರಾಗಿ ಪಾಠಶಾಲೆಗೆ ಬಂದು ಸ್ವಾಮಿಗಳನ್ನೆದುರು ನೋಡುತ್ತಿದ್ದರು. ಆ ದಿನ ಭಟ್ಟನು ಬರುವುದು ಸ್ವಲ್ಪ ತಡವಾಯಿತು. ಮೊದಲೇ ಸ್ವಾಮಿಗಳ ಬಳಿಗೆ ಬಂದು ಹೋದ ಸಂಗತಿ ವಿದ್ಯಾರ್ಥಿಗಳಿಗೆ ಗೊತ್ತಿರಲಿಲ್ಲ. ಅನಂತರ ಸ್ವಾಮಿಗಳು ಪಾಠಶಾಲೆಯಲ್ಲಿ ಬಂದು ಕುಳಿತು ಭಟ್ಟನನ್ನು ನಿರೀಕ್ಷಿಸುತ್ತಿದ್ದರು. ಅಲ್ಲಿದ್ದ ವಿದ್ಯಾರ್ಥಿಗಳಿಗದು ಸರಿಬರಲಿಲ್ಲ. ಪರಸ್ಥಳದವನೊಬ್ಬನಿಗಾಗಿ ಎಲ್ಲರಿಗೂ ಏಕೆ ತಡವಾಗಬೇಕೆಂದು ಸ್ವಾಮಿಗಳನ್ನು ಕೇಳಿದರು "ಬಡವನಮೇಲೇಕೆ ನಿಮ್ಮೆಲ್ಲರಿಗೂ ಇಷ್ಟುಕೋಪ? ಸ್ವಲ್ಪ ಹೆಚ್ಚುಕಡಿಮೆ ಬರುತ್ತಾನೆ. ಅವನ ತೊಂದರೆಯೇನಿರುವುದೋ?" ಎಂದು ಸ್ವಾಮಿಗಳು ಉತ್ತರಕೊಟ್ಟರು. ಶಿಷ್ಯರಲ್ಲೊಬ್ಬನು—"ಸ್ವಾಮಿಗಳೇ ಹೀಗೆ ಅಪ್ಪಣೆಕೊಡಿಸಿದಮೇಲೆ ನಾವೇನು ಹೇಳುವದು? ಅವನಿಗಿಷ್ಟವಕಾಶವೇ ಸಾಕು. ಮಲಗುವವನಿಗೆ ಹಾಸಿಗೆಯನ್ನು ಹಾಸಿಕೊಟ್ಟಹಾಗಾಯಿತು. ಸಂಸ್ಥಾನದ ಗೌರವದಿಂದ ಹೇಳಿದೆನು. ಇಷ್ಟರಮೇಲೆ ಚಿತ್ತ"ವೆಂದು ಸುಮ್ಮ

ನಾದನು ಎಲ್ಲರಿಗೂ ಭಟ್ಟನಮೇಲೆ ಸೂಯೆಯಿದ್ದುದರಿಂದ, ಅವನು ಹೊತ್ತಾಗಿ ಏಳುತ್ತಾನೆಂದೊಬ್ಬನೂ, ಸ್ನಾನಾಹ್ನಿಕಗಳನ್ನು ಸರಿಯಾಗಿ ಮಾಡುವುದಿಲ್ಲ ವೆಂದೊಬ್ಬನೂ, ನೇಮವಿಲ್ಲದಿದ್ದರೂ ನಾಮಬಹಳವೆಂದೊಬ್ಬನೂ ಮತ್ತೆಮತ್ತೆ ಕ್ಷುದ್ರವನ್ನೇ ಹೇಳಿದರು. ಏನಾದರೂ ಸ್ವಾಮಿಗಳು ಮೌನದಿಂದಿದ್ದುಬಿಟ್ಟರು.

ಭಟ್ಟನು ತನ್ನಿಂದ ಪಾಠಕ್ಕೆ ವೇಳೆಯಾಯಿತೆಂದು ಅವಸರವಾಗಿ ಬಂದು ಗುರುಗಳಿಗೆರಗಿ ಸಹಾಧ್ಯಾಯಿಗಳ ಪಙ್ಕ್ತಿಯಲ್ಲಿ ಕುಳಿತನು ಸ್ವಾಮಿಗಳೇ ಸುಮ್ಮನಿದ್ದರೂ ಶಿಷ್ಯನೊಬ್ಬನು—"ಏನು ವೆಂಕಣ್ಣಾಚಾರ್ಯರೇ ! ತಮಗಾಗಿ ಸ್ವಾಮಿಗಳೂ ಪಾಠಕ್ಕೆ ಕಾಯಬೇಕೋ ? ಇನ್ನುಮೇಲಾದರೂ ಜಾಗ್ರತೆ ಸುಪ್ರಭಾತವಾಗಲಿ. ನಿಮ್ಮಂತೆಯೇ ನಾವೂ ಇದ್ದರೆ ಊಟ ಪಾಠಗಳೆರಡೇ ಸಾಕೆನ್ನುತ್ತಿದ್ದೆವು. ಸ್ವಲ್ಪ ನಮ್ಮ ಮೇಲೆ ದಯಮಾಡಿರಿ" ಎಂದು ಕ್ರೋಧ ದಿಂದ ನುಡಿದನು. ಸ್ವಾಮಿಗಳು ಎಲ್ಲವನ್ನೂ ಪಾಠಾನಂತರ ವಿಚಾರಿಸೋಣ ವೆಂದು ಹಿಂದಿನ ದಿನದ ಪಾಠವನ್ನು ಪ್ರಶ್ನೆಮಾಡಿದರು. ಭಟ್ಟನು ಸಹಾಧ್ಯಾಯಿ ಗಳಾರೂ ಉತ್ತರಕೊಡದಿರುವ ವಿಷಯದಲ್ಲಿ ಎಲ್ಲರಂತೆ ತಾನೂ ಸುಮ್ಮನಿರುವ ದೊಳ್ಳೇದೆಂದು ಮೌನದಿಂದಿದ್ದನು. ಹಿಂದಿನ ಪಾಠಗಳ ವ್ಯಾಸಂಗವನ್ನೆಷ್ಟು ಮಟ್ಟಿಗೆ ಮಾಡಿರುವರೋ ನೋಡೋಣವೆಂದು ಪ್ರಶ್ನೆಮಾಡಲು ಎಲ್ಲಕ್ಕೂ ಭಟ್ಟನೇ ಉತ್ತರ ಕೊಡಬೇಕಾಯಿತು.

ಅನಂತರ ಸ್ವಾಮಿಗಳು, "ಪರಿಮಳ'ವನ್ನು ಶಿಷ್ಯರಿಗೆ ಓದಿಹೇಳಿ, ನೋಡಿದಿರೋ ! ಇವನೆಂಥಾ ಪಂಡಿತನು ? ಸುಮ್ಮನೆ ಇವನನ್ನು ತಿರಸ್ಕ ರಿಸುವಿರೆ"ಂದು ಪುಸ್ತಕವನ್ನು ಕಣ್ಣಿಗೊತ್ತಿಕೊಂಡು,—"ವೆಂಕಣ್ಣ ! ನಿನ್ನ ಮೇಲೆ ಸರ್ವಜ್ಞರೂ ಟೀಕಾಕೃತ್ಪಾದರೂ ಪರಮಾನುಗ್ರಹ ಮಾಡಿರುವರು. ಇದರಂತೆ ಇನ್ನೂ ಅನೇಕ ಗ್ರಂಥಗಳನ್ನು ರಚಿಸಿ, ಪರಿವ್ರಾಜಕರ ಅನು ಗ್ರಹಕ್ಕೆ ಪಾತ್ರನಾಗೆ"ಂದು ಹರಸಿ, ಪರಿಮಳ ಪುಸ್ತಕವನ್ನವನ ಕೈಯಲ್ಲಿ ಕೊಟ್ಟು, ಹಿಂದಿನ ದಿನ ತಾವು ಮಾಡಿದ ವ್ಯಾಪಾರವನ್ನೆಲ್ಲಾ ತಿಳಿಸಿದರು. ಕ್ಷುದ್ರಕಾರರ ಮುಖ ತಗ್ಗಿತು. ವೆಂಕಣ್ಣನ ಸಂಶಯ ಪರಿಹಾರವಾಯಿತು. ತಾನು ಅನ್ಯಥಾ ಭಾವಿಸಿದೆನೆಂದು ಕ್ಷಮೆ ಬೇಡಿದನು.

ಸುಧಾ ಮಂಗಳಕಾಲದಲ್ಲಿ ಸ್ವಾಮಿಗಳು ವಿದ್ವತ್ಸಭೆಮಾಡಿ ಪರಿಮಳ ಗ್ರಂಥವನ್ನೆಲ್ಲರಿಗೂ ತೋರಿಸಿ, ಸರ್ವಸಮ್ಮತಿಯಿಂದ ಭಟ್ಟನಿಗೆ ಪರಿಮಳಾಚಾರ್ಯ

ಎಂಬ ಬಿರುದನ್ನೂ ಉತ್ತಮವಾದ ವಸ್ತ್ರ ಬಹುಮಾನವನ್ನೂ ಅನುಗ್ರಹಿಸಿದರು.

ಇದಾದ ಕೆಲವು ದಿವಸಗಳಮೇಲೆ ಸ್ವಾಮಿಗಳು ದಿಗ್ವಿಜಯಾರ್ಥವಾಗಿ ಹೊರಟು ಮನ್ನಾರಗುಡಿಗೆ ಬಂದರು. ಅಲ್ಲಿನ ಜನರನೇಕರು ಗುರುಸೇವೆಯಿಂದ ಕೃತಾರ್ಥರಾಗಿ ಶಿಷ್ಯರಾದರು ಆ ಊರಲ್ಲಿ ಬಹುಕಾಲದಿಂದ ವಾಸಮಾಡಿಕೊಂಡಿದ್ದ ದ್ರಾವಿಡ ಸನ್ಯಾಸಿಗಳೊಬ್ಬರು ಸ್ವಾಮಿಗಳೊಡನೆ ವ್ಯಾಕರಣ ಮಹಾಭಾಷ್ಯದಲ್ಲಿ ವಾದಿಸಲು ಬಂದರು. ಪರಿಮಳಾಚಾರ್ಯನೇ ವಾಕ್ಯಾರ್ಥದಲ್ಲಿ ಪ್ರವೇಶಿಸಿ ವಾದಿಯನ್ನು ಗೆದ್ದುದರಿಂದ ಸ್ವಾಮಿಗಳು ಸುಪ್ರೀತರಾಗಿ ಭಟ್ಟನಿಗೆ **ಮಹಾಭಾಷ್ಯಾಚಾರ್ಯ**ನೆಂಬ ಬಿರುದನ್ನೂ ದಯಪಾಲಿಸಿ ತಂಜಾವೂರಿಗೆ ಬಂದರು.

---

## ೪. ರಾಜಕೀಯ

ಆ ಕಾಲದ ರಾಜ್ಯಭಾರ, ರಾಜರಸ್ಥಿತಿ, ವಿದ್ಯಾ ಪ್ರಚಾರ, ನೀತಿ ಮತಗಳು, ರಾಜರ ಶೌರ್ಯಾದಿ ಗುಣಗಳು, ಇವೆಲ್ಲಾ ಹೇಗಿದ್ದವೆಂಬುದನ್ನು ವಿಚಾರಿಸಲು ಇದು ಸಮಯವಾಗಿದೆ ಇಲ್ಲದಿದ್ದರೆ ನಮ್ಮ ಪ್ರಕೃತ ಚರಿತ್ರೆಯು ಮುಂದುವರಿಯುವಹಾಗಿಲ್ಲ. ನಮ್ಮ ಕಾಲದ ವಿದ್ಯಾವಂತರೆನಿಸಿದ ತರುಣರಿಗೆ ಭರತಖಂಡದ ಪೂರ್ವ ಚರಿತ್ರೆಯ ಪರಿಚಯವಿಲ್ಲ ತಮ್ಮ ಪೂರ್ವೀಕರೆಲ್ಲರೂ ಅನಾಗರಿಕರಾಗಿದ್ದರೆಂತಲೂ, ತಮ್ಮ ಕಾಲದಲ್ಲೇ ನಾಗರಿಕತೆಯು ದಿಗಂತವನ್ನು ಮುಟ್ಟಿರುವುದೆಂತಲೂ, ಹಿಂದಣ ದೇಶೀಯ ರಾಜರೆಲ್ಲಾ ಸ್ತ್ರೈಣರೂ ದಂಗೆಕೋರರೂ ಆಗಿದ್ದರೆಂತಲೂ ಗಿಣಿಪಾಠವಾಗಿಹೋಗಿದೆ. ದೇಶೀಯ ವಿದ್ಯಾಭ್ಯಾಸ ಕ್ರಮವೇ ಮುಳುಗಿಹೋಗಿ, ವಿಧರ್ಮಿಗಳ ಕೈಯಲ್ಲಿ ಸಿಕ್ಕಿ, ಅವರು ಹೇಳಿದುದನ್ನೇ ವೇದವಾಕ್ಯವೆಂದು ನಂಬಿ, ಅವರ ಗುಲಾಮಗಿರಿಯಿಂದ ಜೀವಿಕೆಯನ್ನು ಪಡೆದು ಪ್ರಾಣಾಧಾರಣೆ ಮಾಡಬೇಕೆನ್ನುವಷ್ಟು ದುರ್ದೆಶೆಗೆ ಬಂದಿರುವ ತರುಣರನ್ನು ಜರಿಯಬೇಕೆಂಬುದು ನನ್ನ ಅಭಿಪ್ರಾಯವಲ್ಲ. ಅವರು ನಮ್ಮ ಪೂರ್ವಿಕರ ಯಥಾರ್ಥ ಸ್ಥಿತಿಗಳೇನೆಂಬುದನ್ನು ತಿಳಿದರೆ ಅಷ್ಟೇಸಾಕು. ಪ್ರಕೃತ ಚರಿತ್ರೆಗೆ ಸಂಬಂಧಿಸಿದ ವಿಷಯಗಳಾದುದರಿಂದ ಇಲ್ಲಿ ಉಲ್ಲೇಖಿಸಬೇಕಾಗಿದೆ.

## ತಂಜಾವೂರು ಸಂಸ್ಥಾನ.

ವಿಜಯನಗರದ ಕರ್ಣಾಟಕ ಸಂಸ್ಥಾನವು ನಾಶವಾದಮೇಲೆ (೧೫೬೫) ತಂಜಾವೂರು ಸಂಸ್ಥಾನವು ತಲೆಯೆತ್ತಿತು. ನಾಯಕ ಮನೆತನದ ರಾಜರು ಸುಮಾರು ನೂರೈವತ್ತು ವರ್ಷಕಾಲ ತಂಜಾವೂರನ್ನಾಳಿದರು. ಇವರ ಕಾಲದಲ್ಲಿ ಕಾವೇರಿಯ ದಕ್ಷಿಣ ಪ್ರಾಂತವೆಲ್ಲಾ ತಂಜಾವೂರಿಗೆ ಸೇರಿತ್ತೆಂದು ಹೇಳಬೇಕು. ಅಚ್ಯುತರಾಜ, ರಘುನಾಥಭೂಪಾಲ, ವಿಜಯ ರಾಘವ ನಾಯಕರೆಂಬುವರು ನಾಯಕ ಮನೆತನದ ಪ್ರಸಿದ್ಧರಾಜರು. ಸಂಸ್ಕೃತಾಂಧ್ರ ಭಾಷೆಗಳಲ್ಲಿವರು ಮಹಾ ಪ್ರವೀಣರು. ರಘುನಾಥನು ಚಿಕ್ಕವನಾಗಿದ್ದಾಗ ಅಚ್ಯುತರಾಜನ ಮಗನ ಪಾಂಡಿತ್ಯವನ್ನು ಪರೀಕ್ಷಿಸಬೇಕೆಂದು ಶ್ರೀಕೃಷ್ಣನ ಮೇಲೆ ಕವಿತ್ವಮಾಡೆಂದು ಹೇಳಿದನು. ರಘುನಾಥನು ಎರಡು ಘಳಿಗೆಯೊಳಗೆ 'ಪಾರಿಜಾತಹರಣ'ವೆಂಬ ಗ್ರಂಥವನ್ನು ಬರೆದು ತಂದೆಗೊಪ್ಪಿಸಿದನು. ರಘುನಾಥಭೂಪಾಲನು ರಚಿಸಿದ ನೂರು ಗ್ರಂಥಗಳಲ್ಲಿ ಈಗ ಹನ್ನೆರಡು ಮಾತ್ರ ಸಿಕ್ಕಿವೆ. ಈತನ ಆಂಧ್ರ ಗ್ರಂಥಗಳಲ್ಲಿ ರಾಮಾಯಣವು ಅತ್ಯಂತ ಪ್ರಸಿದ್ಧವಾದದ್ದು. ಈ ಗ್ರಂಥದ ಸ್ವಾರಸ್ಯವನ್ನು ನೋಡಿ ಮಧುರವಾಣಿ ಎಂಬ ಕವಯಿತ್ರಿಯು ಅದನ್ನು ಸಂಸ್ಕೃತಕ್ಕೆ ಭಾಷಾಂತರ ಮಾಡಿರುತ್ತಾಳೆ. ರಾಮಭದ್ರಾಂಬೆಯೆಂಬ ಪ್ರಸಿದ್ಧ ಕವಯಿತ್ರಿಯು ಸಂಸ್ಕೃತದಲ್ಲಿ "ರಘುನಾಥಾಭ್ಯುದಯ"ವೆಂಬ ಹೆಸರಿನಿಂದ ಆ ಭೂಪಾಲನ ಗುಣಗಳನ್ನು ವರ್ಣಿಸಿರುತ್ತಾಳೆ.

ಇದೂ ಅಲ್ಲದೆ ರಘುನಾಥ ಭೂಪಾಲನು ದೊಡ್ಡ ಶತಾವಧಾನಿಯೂ ಆಗಿದ್ದನು.

ಸಂಗೀತವಿದ್ಯೆದಲ್ಲಿ ಆ ಕಾಲದಲ್ಲವನ ಸಮಾನರೇ ಇರಲಿಲ್ಲ. "ಸಂಗೀತ ಸುಧಾ" ಎಂಬ ಗ್ರಂಥವನ್ನು ರಚಿಸಿ, ಜಯಂತಸೇನ ಮೊದಲಾದ ರಾಗಗಳನ್ನೂ, ರಾಮಾನಂದ ಮೊದಲಾದ ಹೊಸ ತಾಳಗಳನ್ನೂ, ತನ್ನ ಹೆಸರಿನ ಒಂದು ಹೊಸ ಮೇಳವನ್ನೂ ಕಂಡುಹಿಡಿದು, ಅದರಲ್ಲಿ ಯಾವ ಪ್ರಸಿದ್ಧ ರಾಗವನ್ನಾದರೂ ಬಾರಿಸುವುದಕ್ಕನುಕೂಲವಾಗುವಂತೆ ಮಾಡಿರುತ್ತಾನೆ.

"ಸಾಹಿತ್ಯಸುಧಾ" ಗ್ರಂಥಕರ್ತನಾದ ಗೋವಿಂದ ದೀಕ್ಷಿತನೇ ಈ ಮಹಾರಾಜನ ಮುಖ್ಯ ಮಂತ್ರಿಯಾಗಿದ್ದನು.

ಪರಾಕ್ರಮದಲ್ಲಿ ನೋಡಿದರೆ ಈ ಮಹಾರಾಜನು ಪೋರ್ಚುಗೀಸರನ್ನು ಗೆದ್ದು ಸೇವಾಳದ ರಾಜನಿಗೆ ಜಾಫ್ನಾ ದ್ವೀಪವನ್ನು ಬಿಡಿಸಿಕೊಟ್ಟು ಆತನನ್ನು ತನಗೆ ಅಂಕಿತನನ್ನಾಗಿ ಮಾಡಿಕೊಂಡನು.

ರಘುನಾಥ ಭೂಪಾಲನು ಕಟ್ಟಿಸಿದ ಅನೇಕ ದೇವಾಲಯಗಳೂ, ತಟಾಕಗಳೂ, ವಿದ್ವಜ್ಜನರಿಗೆ ಕಟ್ಟಿಕೊಟ್ಟ ಅಗ್ರಹಾರಗಳೂ ಆತನ ಔದಾರ್ಯವನ್ನು ಈಗಲೂ ಪ್ರಕಟಪಡಿಸುತ್ತಲಿವೆ.

ಸುಧೀಂದ್ರತೀರ್ಥರು ಇಂಥಾ ಮಹಾರಾಜನ ಆಸ್ಥಾನದಲ್ಲಿದ್ದ ಪಂಡಿತರನ್ನು ಹಿಂದೆಯೇ ವಾದದಲ್ಲಿ ಗೆದ್ದುದರಿಂದ ಮಹಾರಾಜನು ಸ್ವಾಮಿಗಳಿಗೆ ಕನಕಾಭಿಷೇಕ ಮಾಡಿಸಿದ್ದನು. ಈ ಪೂರ್ವಪರಿಚಯವೇ ಸ್ವಾಮಿಗಳು ಮತ್ತೆ ತಂಜಾವೂರಿಗೆ ಬರಲು ಕಾರಣವಾಯಿತು

ಇತ್ತ ಅಚ್ಯುತರಾಜನ ಕಾಲದಲ್ಲೂ, ರಘುನಾಥಭೂಪಾಲನ ಕಾಲದಲ್ಲೂ ಕೆಲವುಕಾಲ ಮುಖ್ಯ ಮಂತ್ರಿಯಾಗಿದ್ದ ಗೋವಿಂದದೀಕ್ಷಿತನು ರಾಜನೀತಿಯಲ್ಲೂ ವಿದ್ಯಾ ಪಾಂಡಿತ್ಯದಲ್ಲೂ ಅರಸರಿಗೆ ತಕ್ಕ ಮಂತ್ರಿಯಾಗಿದ್ದು, ಲೋಕ ಪ್ರಖ್ಯಾತರಾದ ಅಪ್ಪಯ್ಯ ದೀಕ್ಷಿತರ ಅನೇಕ ಗ್ರಂಥರಚನೆಯಲ್ಲಿ ಸಹಾಯಮಾಡಿ, ತನ್ನ ಮಗ ಯಜ್ಞನಾರಾಯಣ ದೀಕ್ಷಿತನನ್ನು ಮಹಾಪಂಡಿತನನ್ನಾಗಿ ಮಾಡಿ ಸ್ವರ್ಗವಾಸಿಯಾಗಿದ್ದನು. ಯಜ್ಞನಾರಾಯಣ ದೀಕ್ಷಿತನಾದರೋ ತನ್ನ ಪಾಂಡಿತ್ಯವನ್ನತಿಶಯವಾಗಿ ಬೆಳೆಸಿ, ಅನೇಕ ಯಜ್ಞಗಳನ್ನಾಚರಿಸಿ, ಮಹಾ ಕರ್ಮಠನೆಂಬ ಖ್ಯಾತಿಯನ್ನು ಪಡೆದು ಪರಮಪೂಜ್ಯನಾಗಿದ್ದನು. ಈತನು ಸ್ವಾಮಿಗಳೊಡನೆ ವಾಕ್ಯಾರ್ಥಮಾಡಿ ತನ್ನ ಪಾಂಡಿತ್ಯವನ್ನು ತೋರಿಸಬೇಕೆಂದು ಮಠಕ್ಕೆ ಬಂದನು. ಪರಸ್ಪರ ಸಂಭಾಷಣೆಯಲ್ಲಿ "ಕಾಕತಾಳೀಯ" ವೆಂಬುದೇ ವಾಕ್ಯಾರ್ಥಕ್ಕೆ ವಿಷಯವಾಯಿತು. ಪರಿಮಳಾಚಾರ್ಯನು ವಾದಕ್ಕೆ ಪ್ರವೇಶಿಸಲು ದೀಕ್ಷಿತನು ಸಮ್ಮತಿಸದೆ, ಸ್ವಾಮಿಗಳೇ ಮಾತಾಡಬೇಕೆಂದು ಕೇಳಿಕೊಂಡನು. ಅವರು ಪರಿಮಳಾಚಾರ್ಯನಿಂದ ಸಾಧ್ಯವಾಗದೇ ಹೋದರೆ ತಾವು ವಾಕ್ಯಾರ್ಥ ಮಾಡುವೆವೆಂದೂ, ಜ್ಞಾನಕ್ಕೆ ವಯಸ್ಸೂ ಪದವಿಯೂ ಕಾರಣವಲ್ಲವೆಂದೂ ಅಪ್ಪಣೆ ಕೊಡಿಸಿದುದರಿಂದ ಯತ್ನವಿಲ್ಲದೆ ಆಚಾರ್ಯನೊಡನೆ ವಾದಮಾಡಿದನು ವಿಷಯಗಳು ಒಂದರ ಹಿಂದೊಂದು ಬೆಳೆಯುತ್ತಾ ಕ್ರಮೇಣ "ತತ್ವಮಸಿ" ಗಾರಂಭವಾಯಿತು.

ಪ್ರತಿಜ್ಞಾಪೂರ್ವಕ ವಾಕ್ಯಾರ್ಥವಾಗಬೇಕೆಂಬ ತೀರ್ಮಾನವಾದುದರಿಂದ ಉಭಯರೂ ತಮ್ಮ ಪ್ರತಿಜ್ಞೆಯನ್ನು ತಿಳಿಸಿದರು.

---

# ತತ್ತ್ವಮಸಿ

## ದೀಕ್ಷಿತ ಪ್ರತಿಜ್ಞಾ

೧. ತತ್ತ್ವಮಸ್ಯಾದಿ ಮಹಾವಾಕ್ಯಗಳು ಭೇದಪ್ರತಿಪಾದಕಗಳಲ್ಲ

೨. ವ್ಯವಹಾರದಲ್ಲಿ ಕಂಡುಬರುವ ಭೇದವನ್ನೇ ಸತ್ಯವೆಂದು ಸಾಧಿಸುವುದಕ್ಕೆ ವೇದಾಂತಗಳು ಬೇಕಾಗಿಲ್ಲ.

೩. ದ್ವೈತಮತವು ವೇದಮೂಲವಲ್ಲ.

ಈ ವಾಕ್ಯಾರ್ಥದಲ್ಲಿ ಸೋತರೆ ಮಹಾರಾಜ ಸಭೆಯಲ್ಲಿ ದೊರೆತ ಭಟ್ಟಾಚಾರ್ಯನೆಂಬ ಬಿರುದನ್ನೇ ಬಿಟ್ಟು ಚಕ್ರಾಂಕನಮಾಡಿಸಿಕೊಂಡು ಸ್ವಾಮಿಗಳ ಶಿಷ್ಯನಾಗುವೆನು.

## ಪರಿಮಳಾಚಾರ್ಯ ಪ್ರತಿಜ್ಞಾ

೧. "ತತ್ತ್ವಮಸಿ"ಯು ಆಪಾತತಃ ರಮಣೀಯವಾಗಿ ಅಭೇದವನ್ನು ಹೇಳುವಂತೆ ಕಂಡುಬಂದರೂ ಪೂರ್ವೋತ್ತರ ವಾಕ್ಯಗಳನ್ನು ನೋಡಿದರೆ ಏನೂ ಅಭೇದಬೋಧಕವೆಂದಿಗೂ ಅಲ್ಲ. ಶ್ವೇತಕೇತುವನ್ನು ಸನ್ಮಾರ್ಗಕ್ಕೆ ತರಲು ಉದ್ದಾಲಕನು ಬುದ್ಧಿಹೇಳುವ ವಾಕ್ಯದಲ್ಲಿ ನೀನೇ ಬ್ರಹ್ಮನೆಂದು ಹೇಳುವುದು ಅಸಂಭವ. ಹಾಗೆ ಹೇಳಿದ್ದರೆ ಶ್ವೇತಕೇತುವೆಂದಿಗೂ ಜ್ಞಾನಿಯಾಗುತ್ತಿರಲಿಲ್ಲ.

೨ ಜೀವಬ್ರಹ್ಮೈಕ್ಯವನ್ನು ಹೇಳುವುದಕ್ಕೆ ವಿಧಿನಿಷೇಧ ಬೋಧಕವಾದ ವೇದಶಾಸ್ತ್ರಗಳಿರಬೇಕಾಗಿಲ್ಲ.

೩. ಅದ್ವೈತವು ಸೌಗತ (ಬೌದ್ಧ) ಮತದ ರೂಪಾಂತರವಾದ್ದರಿಂದ ವೇದಮೂಲವಲ್ಲ.

ಈ ವಾಕ್ಯಾರ್ಥದಲ್ಲಿ ಸೋತರೆ ಇದುವರೆಗೆ ಪ್ರಾಪ್ತವಾಗಿರುವ ಬಿರುದುಗಳನ್ನು ಬಿಟ್ಟು ದೀಕ್ಷಿತನ ಶಿಷ್ಯನಾಗುವೆನು.

ತತ್ವಮಸಿಯು ದ್ವೈತಾದ್ವೈತ ಮತಗಳ ಮುಖ್ಯತಿರುಳಾದ ವಾಕ್ಯಾರ್ಥ. ಬರೀ ವಾಕ್ಯಾರ್ಥವಾಯಿತು, ಒಬ್ಬರ ಪಕ್ಷ ಜಯಿಸಿತು, ಮತ್ತೊಬ್ಬರ ಪಕ್ಷ ಅಪಜಯ ಹೊಂದಿತು, ಎಂದು ಬರೆದರೆ ವಾಚಕರಿಗೆ ತೃಪ್ತಿಯಾಗುವುದಿಲ್ಲ ಅದ್ವೈತಮತ ರೀತ್ಯಾ "ಪ್ರಜ್ಞಾನಂಬ್ರಹ್ಮ, ಅಯಮಾತ್ಮಾಬ್ರಹ್ಮ, ಅಹಂ ಬ್ರಹ್ಮಾಸ್ಮಿ, ತತ್ವಮಸಿ ;" ಎಂಬ ಈ ನಾಲ್ಕು ವಾಕ್ಯಗಳೂ ವೇದ ಶಿರಸ್ಸು ಗಳೆನಿಸಿದ ಉಪನಿಷತ್ತುಗಳ ಮಹಾ ವಾಕ್ಯಗಳು. ಶಂಕರಾಚಾರ್ಯರಂಥಾ ಪ್ರಬಲ ಮತಸ್ಥಾಪಕರಿಗೆ ಗುರುಗಳಾದ ಗೋವಿಂದ ಭಗವತ್ಪಾದರು ಉಪ ದೇಶಿಸಿದ ಮಹಾ ವಾಕ್ಯಗಳೇ ಇವು. ಈ ವಾಕ್ಯಗಳ ಬಲದಿಂದಲೇ ಶಂಕರಾ ಚಾರ್ಯರು ಸಪಾದಲಕ್ಷ ಗ್ರಂಥಗಳನ್ನು ಬರೆದು ಅದ್ವೈತ ಮತವನ್ನು ಸ್ಥಾಪಿಸಿ ದರು. ಆಧುನಿಕ ಆಂಗ್ಲ ವಿದ್ಯಾವಿಶಾರದರಾದ ವೇದಾಂತಿಗಳು ದ್ವೀಪಾಂತರ ಗಳಲ್ಲಿ ಸಹ ತತ್ವಮಸಿಯ ಪ್ರಚಾರವನ್ನು ಮಾಡಿಯೂ ಮಾಡುತ್ತಲೂ ಇರುವರು. ಇಷ್ಟು ಪ್ರಸಿದ್ಧವಾದದ್ದು ತತ್ವಮಸಿ.

ಆದ್ದರಿಂದ ತತ್ವಮಸಿಯ ಪೂರ್ವೋತ್ತರಗಳೇನು, ವಾಕ್ಯದ ಶಕ್ಯಾರ್ಥ ವೇನು, ಮಥಿತಾರ್ಥವೇನು, ವಾಕ್ಯಾರ್ಥದ ಸರಣಿ ಹೇಗೆ ಬೆಳೆಯಿತು, ಎಂಬಿಷ್ಟು ಸಂಗತಿಗಳನ್ನಾದರೂ ದಿಗ್ದರ್ಶನ ಮಾಡಿದಂತೆ ಇಲ್ಲಿ ತಿಳಿಸ ಬೇಕಾಗುವದು. ಹೆಚ್ಚು ವಿವರ ಬೇಕೆಂಬುವವರು ಆ ಉಪನಿಷತ್ತನ್ನೇ ಪಙ್ತಿಶಃ ಓದಬಹುದು ; ಅರ್ಥವನ್ನು ಭಿನ್ನ ಭಿನ್ನ ಮತಗಳ ವ್ಯಾಖ್ಯಾನ ಗಳಿಂದ ತಿಳಿಯಬಹುದು.

ತತ್ವಮಸಿಯ ಉಪದೇಶವು ಛಾಂದೋಗ್ಯ ಉಪನಿಷತ್ತಿನ ಷಷ್ಠಪ್ರಪಾಠ ಕದಲ್ಲಿ ವಿಸ್ತಾರವಾಗಿದೆ. ಆ ಷಷ್ಠಪ್ರಪಾಠಕವು ಹದಿನಾರು ಖಂಡಗಳಾಗಿ ವಿಭಾಗವಾಗಿದೆ. ಆ ಹದಿನಾರು ಖಂಡಗಳಲ್ಲಿ ಎಂಟರಿಂದ ಹದಿನಾರು ಪೂರ್ತಿ ಅಂದರೆ ಒಂಭತ್ತು ಖಂಡಗಳಲ್ಲೂ ಆಗಿರುವ ಅನುವಾದವು ತತ್ವಮಸಿಯದು. ಈ ಅನುವಾದವು ಒಂಭತ್ತು ದೃಷ್ಟಾಂತಗಳಿಂದ ಕೂಡಿ ನವಕೃತ್ವೋಭ್ಯಾಸ ವೆಂದು ಕರೆಸಿಕೊಂಡಿದೆ. ಪ್ರತಿ ದೃಷ್ಟಾಂತದ ಜೊತೆಯಲ್ಲಿ ತತ್ವಮಸಿಯಿರುವ ಪೂರ್ಣ ಉಪನಿಷನ್ಮಂತ್ರವು ಪಲ್ಲವಿಯಂತೆ ಹಾಡಲ್ಪಟ್ಟಿದೆ. ಆ ಹಾಡಿ ನಂತಿರುವ ಮಂತ್ರವೇ

**ಸಯ ಏಷೋಣಿಮೈತದಾತ್ಮ್ಯ ಮಿದಂ**

**ಸರ್ವಂತತ್ಸತ್ಯಂ, ಸ ಆತ್ಮಾತತ್ವಮಸಿ ಶ್ವೇತಕೇತೋ**

ಎಂಬುವುದು

ಈ ಮಂತ್ರದ ಕಥೆಯೇನೆಂದರೆ:—ಗೌತಮ ಗೋತ್ರೋದ್ಭವನಾದ ಉದ್ಧಾಲಕನೆಂಬ ಋಷಿಯೊಬ್ಬನಿದ್ದನು. ಇವನಿಗೆ ಆರುಣಿಯೆಂದೂ ಮತ್ತೊಂದು ಹೆಸರು. ಉದ್ಧಾಲಕನಿಗೆ ಶ್ವೇತಕೇತುವೆಂಬ ಮಗನಾದನು. ಮಗನು, ವಯಸ್ಸು ಹನ್ನೆರಡಾದರೂ ಕ್ರೀಡಾಸಕ್ತನಾಗಿರಲು ತಂದೆಯು—

**ನವೈಸೋಮ್ಯಾಸ್ಮತ್ಕುಲಿನೋಽನ**

**ನೂಚ್ಯಬ್ರಹ್ಮಬಂಧುರಿವಭವತಿ**

ತಾ॥ ಎಲೈಸೋಮಪಾನಾರ್ಹನಾದ ಶ್ವೇತಕೇತುವೆ, ನಮ್ಮ ಕುಲದಲ್ಲಿ ಹುಟ್ಟಿದ ಯಾರೂ ವೇದಾಧ್ಯಯನವಮಾಡದೆ ಬ್ರಹ್ಮಬಂಧುವಿನಂತೆ (ಕೇವಲ ಬ್ರಾಹ್ಮಣ ಪುತ್ರ) ಆಗಲಿಲ್ಲ. ಎಂಬುದಾಗಿ ನುಡಿದನು,

ಈ ಮಾತನ್ನು ಕೇಳಿ ಶ್ವೇತಕೇತುವು—

**ಸಹದ್ವಾದಶವರ್ಷ ಉಪೇತ್ಯ ಚತುರ್ವಿಂಶತಿವರ್ಷಃ ಸರ್ವಾನ್ ವೇದಾನಧೀತ್ಯಮಹಾಮನಾ ಅನೂಚಾನಮಾನೀಸ್ತಬ್ಧ ಏಯಾಯ ॥**

ತಾ॥ ಅವನು ಗುರುಕುಲಕ್ಕೆ ಹೋಗಿ ಹನ್ನೆರಡು ವರ್ಷ ಸಕಲ ವೇದಾಧ್ಯಯನಮಾಡಿ, ಇಪ್ಪತ್ತನಾಲ್ಕು ವಯಸ್ಸಿನವನಾಗಿ, ಅಹಂಕಾರಿಯಾಗಿ ಸಂಪ್ರದಾಯಜ್ಞನು ನಾನೇ ಎಂಬ ಅಭಿಮಾನದಿಂದ ಅವಿನೀತನಾಗಿ ತಂದೆಯ ಬಳಿಗೆ ಬಂದನು.

ವಿದ್ಯಾಮದದಿಂದ ನಮಸ್ಕಾರ ಸಹ ಮಾಡದಿರುವ ಮಗನನ್ನು ನೋಡಿ ಉದ್ಧಾಲಕನು—

**ಯೇನಾಶ್ರುತಂಶ್ರುತಂಭವತಿ, ಅಮತಂಮತಂ, ಅವಿಜ್ಞಾತಂ**

**ವಿಜ್ಞಾತಮಿತಿ ಕಥಂನುಭಗವಃ ಸ ಆದೇಶೋಭವತೀತಿ ॥**

ತಾ॥ ಯಾವದೊಂದನ್ನು ಶ್ರವಣಮಾಡಿದರೆ ಸರ್ವವೂ ಶ್ರುತಪ್ರಾಯವಾಗುವದೋ; ಮನನ ಮಾಡದಿರುವುದು ಮನನ ಮಾಡಿದಂತಾಗುವುದೋ, ಯಾವುದನ್ನು ತಿಳಿದರೆ ಸರ್ವವನ್ನೂ ತಿಳಿದಂತಾಗುವುದೋ, ಅಂಥಾ ವಿದ್ಯೆ ನಿನಗೆ ಉಪದೇಶವಾಗಿದೆಯೆ ? ಆಗಿದ್ದರೆ ನಿನಗೆ ಇಂಥಾ ಅಹಂಕಾರವೆಲ್ಲಿಂದ ಬರು

ತ್ತಿತ್ತು ? ಎಂಬದಾಗಿ ಕೇಳಿದನು. ಈ ಮಾತಿಗೆ ಉತ್ತರ ಕೊಡಲಾರದೆ ಶ್ವೇತಕೇತುವು ಗರ್ವವನ್ನು ಬಿಟ್ಟು ವಿನೀತನಾಗಿ ಅದನ್ನು ತಾವೇ ಉಪದೇಶ ಮಾಡಬೇಕೆಂದು ತಂದೆಯನ್ನು ಪ್ರಾರ್ಥಿಸಿದನು. ಪ್ರಸನ್ನನಾದ ಉದ್ದಾಲಕ ಮುನಿಯು ಸರ್ವಕ್ಕಿಂತಲೂ ಬ್ರಹ್ಮನನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವುದೆಂಬದಾಗಿ ಉಚ್ಚಸ್ವರದಿಂದ ಹಿಂದೆ ಹೇಳಿದ—

**ಸಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ**
**ತತ್ಸತ್ಯಂ ಸ ಆತ್ಮಾ ತತ್ವಮಸಿ ಶ್ವೇತಕೇತೋ ||**

ಎಂಬ ಮಂತ್ರವನ್ನುಚ್ಚರಿಸಿದನು. ಮತ್ತು ಈ ಅರ್ಥವತ್ತಾದ ವಾಕ್ಯವನ್ನು ಚೆನ್ನಾಗಿ ಮನಸ್ಸಿನಲ್ಲಿ ನೆಲೆಗೊಳ್ಳುವಂತೆ ಒಂಭತ್ತು ದೃಷ್ಟಾಂತಗಳನ್ನುದಹರಿಸಿ, ಪ್ರತಿಸಲವೂ ಆದೇ ಮಂತ್ರವನ್ನುದ್ಘೋಷಿಸಿದನು.

ಇದೇ ತತ್ವಮಸಿಯ ಪೂರ್ವೋತ್ತರ ಸಂದರ್ಭ. ಇದೇ ದ್ವೈತಾದ್ವೈತ ವಿವಾದಗಳ ಬೇರು. ಅಕ್ಷೋಭ್ಯ ಮುನಿಗಳಿಗೂ ವಿದ್ಯಾರಣ್ಯ ಸ್ವಾಮಿಗಳಿಗೂ ವಾಕ್ಯಾರ್ಥ ನಡೆದ ತತ್ವಮಸಿಯು ಇದೇ ! ವೇದಾಂತ ದೇಶಿಕರಂಥಾ ವಿದ್ಯಾರಣ್ಯರ ಮಿತ್ರರು—

**ಅಸಿನಾ ತತ್ವಮಸಿನಾ ಪರಜೀವಪ್ರಭೇದಿನಾ**
**ವಿದ್ಯಾರಣ್ಯ ಮಹಾರಣ್ಯ ಮಕ್ಷೋಭ್ಯಮುನಿರಚ್ಛಿನತ್ ||**

ಎಂಬದಾಗಿ ತೀರ್ಮಾನಿಸಿದ್ದು ಈ ವಾಕ್ಯಾರ್ಥದ ಮೇಲೆಯೇ !

ಆದರೂ ತತ್ವಮಸಿಯು ದಿನದಿನಕ್ಕೂ ಹೊಸವಾಕ್ಯಾರ್ಥ.

## ತತ್ವಮಸಿಯ ಅದ್ವೈತಾರ್ಥ

ತತ್, ತ್ವಂ, ಅಸಿ ; ಎಂಬ ಪದತ್ರಯ ಘಟಿತ ವಾಕ್ಯವು ಹಿಂದೆ ಬರೆದ ಮಂತ್ರಕ್ಕೆ ಸೇರಿದ ಒಂದು ವಾಕ್ಯವು. ಭಾಷ್ಯಕಾರರು ಈ ವಾಕ್ಯಕ್ಕೆ ಅರ್ಥಮಾಡುವಾಗ ಸಾಂಖ್ಯ, ಯೋಗ, ನ್ಯಾಯ, ಮೀಮಾಂಸಾ, ಮೊದಲಾದ ಈ ಮತಗಳೆಲ್ಲವೂ ಬಹು ಜೀವವಾದವನ್ನೊಪ್ಪಿದ ದ್ವೈತ ಮತಗಳೇ ಆಗಿರುವ ಕಾರಣ ಗುರೂಪದಿಷ್ಟ ಅದ್ವೈತಕ್ಕೆ ಬಾಧಕವಾಗುವವೆಂದು ನಿರಾಕರಿಸಿದರು. ಬೃಹದಾರಣ್ಯಕ ಭಾಷ್ಯದಲ್ಲೂ—

ನ ಕೇವಲ ಮುಪನಿಷದೋ ಬ್ರಹ್ಮೈಕತ್ವಂ ಪ್ರತಿಪಾದಯಂತ್ಯಃ
ಸ್ವಾರ್ಥವಿಘಾತಂ, ಕರ್ಮಕಾಂಡ ಪ್ರಾಮಾಣ್ಯ ವಿಘಾತಂಚಕುರ್ವಂತಿ
ಪ್ರತ್ಯಕ್ಷಾದಿ ನಿಶ್ಚಿತಭೇದ ಪ್ರತಿಪತ್ತ್ಯರ್ಥ ಪ್ರಮಾಣೈಸ್ಚ ವಿರುಧ್ಯಂತೇ
ತಸ್ಮಾತ್, ಅಪ್ರಾಮಾಣ್ಯಮೇವೋಪನಿಷದಾಂ, ಅನ್ಯಾರ್ಥತಾವಾಸ್ತು,
ನತ್ವೇವ ಬ್ರಹ್ಮೈಕತ್ವ ಪ್ರತಿಪತ್ತ್ಯರ್ಥತಾ.

ಅಂದರೆ—ಅಹಂಬ್ರಹ್ಮಾಸ್ಮಿತತ್ವಮಸ್ಯಾದಿ ಉಪನಿಷದ್ಭಾಗಗಳು ಜೀವೇಶ್ವರರಿಗೆ ಭೇದವನ್ನು ಪ್ರತಿಪಾದಿಸುತ್ತವೆಂದು ಹೇಳಿದರೆ ಸ್ವಾರ್ಥವಿಘಾತವಾಗುವದು. ಭೇದವನ್ನೇ ಪ್ರತಿಪಾದಿಸುವ ಕರ್ಮಕಾಂಡಕ್ಕೂ ಪ್ರತ್ಯಕ್ಷಾನುಮಾನ ಪ್ರಮಾಣಗಳಿಗೂ, ಅಭೇದ ಪ್ರತಿಪಾದನೆಯ ಬಾಧಕವಾಗುವುದು ಆದ್ದರಿಂದ ತತ್ವಮಸ್ಯಾದಿ ವಾಕ್ಯಗಳಿಗೆ ಅಪ್ರಮಾಣವನ್ನಾಗಲಿ, ಭೇದಪರವಾದ ಅರ್ಥವನ್ನೇ ಆಗಲಿ, ಹೇಳಬೇಕಾಗುವುದು. ಜೀವಬ್ರಹ್ಮರ ಐಕ್ಯವನ್ನಂತು ಹೇಳುವುದಕ್ಕಾಗುವುದಿಲ್ಲ.

ಇದಲ್ಲದೆ "ಸರ್ವವೇದಾಂತ ಸಿದ್ಧಾಂತ ಸಾರಸಂಗ್ರಹ"ದಲ್ಲಿ ತತ್ ಮತ್ತು ತ್ವಂ ಪದಗಳಿಗೆ ಅರ್ಥಮಾಡುತ್ತಾ—

"ಸರ್ವೇಶತ್ವ ಸ್ವತಂತ್ರತ್ವ ಸರ್ವಜ್ಞತ್ವಾದಿಭಿರ್ಗುಣೈಃ
ಸರ್ವೋತ್ತಮಃ ಸತ್ಯಕಾಮಃ ಸತ್ಯಸಂಕಲ್ಪ ಈಶ್ವರಃ ||೭೨೧||

ಎಂಬುವುದು 'ತತ್' ಶಬ್ದಾರ್ಥವೆಂತಲೂ—

ತತ್ಪದಾರ್ಥಃ :—"ತ್ವಮರ್ಥಸ್ತು ಕಿಂಚಿಜ್ಞೋ ದುಃಖ ಜೀವತಃ
ಸಂಸಾರ್ಯಯಂ ತದ್ಗತಿಕಃ ಜೀವಃ ಪ್ರಾಕೃತ ಲಕ್ಷಣಃ" ||೭೨೨||

ಎಂಬುವುದು 'ತ್ವಂ' ಶಬ್ದಾರ್ಥವೆಂತಲೂ ನಿರ್ವಚನಮಾಡಿ—

ಕಥಮೇಕತ್ವಮನಯೋರ್ಘಟತೇ ವಿಪರೀತಯೋಃ
ಪ್ರತ್ಯಕ್ಷೇಣ ವಿರೋಧೋಽಯ ಮುಭಯೋರುಪಲಭ್ಯತೇ ||೭೨೩||
ವಿರುದ್ಧಧರ್ಮಾಕ್ರಾಂತತ್ವಾತ್ ಪರಸ್ಪರ ವಿಲಕ್ಷಣೌ
ಜೀವೇಶೌವಹ್ನಿತುಹಿನಾವಿವ ಶಬ್ದಾರ್ಥತೋಽಪಿಚ
ಪ್ರತ್ಯಕ್ಷಾದಿ ವಿರೋಧಃ ಸ್ಯಾತ್ ||೭೨೪||

ತಾ|| ಹೇಗೆತಾನೆ ವಿಪರೀತ ಧರ್ಮವುಳ್ಳ ಈ ಎರಡು ಶಬ್ದವಾಚ್ಯ ಈಶ್ವರ ಜೀವರಿಗೆ ಏಕತ್ವವುಂಟಾಗುತ್ತದೆ ? ಜೀವೇಶ್ವರರು ಬೆಂಕಿ ಮಂಜುಗಳಂತೆ

ಪ್ರತ್ಯಕ್ಷಾದಿ ವಿರೋಧಗಳುಳ್ಳ ಭಿನ್ನ ಭಿನ್ನ ಧರ್ಮಗಳುಳ್ಳ ಕಾರಣ ! ಎಂಬುದಾಗಿ ಶಂಕೆಯನ್ನು ಮಾಡಿಕೊಂಡು ಅನಂತರ ಸಮಾಧಾನ ರೂಪವಾಗಿ ಈ ಭೇದ ಗಳೇನಿದ್ದರೂ ವ್ಯಾವಹಾರಿಕ ದೃಷ್ಟಿಯಿಂದ ಸತ್ಯವೆಂತಲೂ, ಪರಮಾರ್ಥ ದೃಷ್ಟಿಯಿಂದ ಅಸತ್ಯವೆಂತಲೂ ಪ್ರತಿಪಾದಿಸಿ, ಲಾಕ್ಷಣಿಕಾರ್ಥವನ್ನು ಸ್ವೀಕರಿಸಿ ಪರಂಪರೆಯಾಗಿ ಗೌಡಪಾದರಿಂದಲೂ ಗೋವಿಂದ ಭಗವತ್ಪಾದರಿಂದಲೂ ಉಪದಿಷ್ಟವಾದ ಅದ್ವೈತಾರ್ಥವನ್ನು ಸಿದ್ಧಾಂತ ಮಾಡಿರುತ್ತಾರೆ.

## ತತ್ವಮಸಿಯು ದ್ವೈತಾರ್ಥ

ದ್ವೈತ ಮತೀಯರು ಯಾವುದೊಂದು ಶೃತಿಗೆ ಅರ್ಥಮಾಡುವಾಗಲೂ ಆಪಾತತಃ ತೋರಿಬರುವ ಅರ್ಥದ ಕಡೆಗೇ ಲಕ್ಷ್ಯಕೊಡದೆ, ಪೂರ್ವೋತ್ತರ ವಾಕ್ಯಗಳನ್ನೂ ದೃಷ್ಟಾಂತಗಳನ್ನೂ ಪರಿಶೀಲಿಸಿ ಅರ್ಥಮಾಡುತ್ತಾರೆ. ಶೃತ್ಯರ್ಥ ನಿರ್ಣಯದಲ್ಲಿ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತೆ, ಫಲ, ಅರ್ಥವಾದ, ಉಪಪತ್ತಿ ; ಎಂಬ ಲಿಂಗಗಳನ್ನು ಅಂದರೆ ಉಪಾಯ ಗಳನ್ನು ಅನ್ಯ ಮತೀಯರಿಗಿಂತ ಹೆಚ್ಚಾಗಿ ಅಕ್ಷರಶಃ ಪಾಲಿಸುತ್ತಾರೆ. ವೇದ ದಲ್ಲಿ ಮಹಾವಾಕ್ಯ ಸಾಮಾನ್ಯ ವಾಕ್ಯವೆಂದು ಪ್ರತ್ಯೇಕಿಸುವುದಿಲ್ಲ. ತತ ಮಸಿಯ ಅರ್ಥಮಾಡುವಾಗಲೂ ಉದಾಹರಣೆಗಾಗಿ "ಶಬ್ದೋನಿತ್ಯಃ ಕೃತಕ ತ್ವಾತ್ ಘಟವತ್" ಎಂಬ ವಾಕ್ಯವನ್ನು ತೆಗೆದುಕೊಳ್ಳೋಣ ! ಈ ವಾಕ್ಯದಲ್ಲಿ ಶಬ್ದಃ, ನಿತ್ಯಃ, ಎಂತಲೂ ಈ ಎರಡು ಶಬ್ದಗಳ ನಡುವೆ ಒಂದು 'ಅಚ್' ಅಂದರೆ ಆಕಾರ ಹುಟ್ಟುವುದರಿಂದ ಶಬ್ದಃ ಅನಿತ್ಯಃ ಎಂತಲೂ ಪದವಿಭಾಗ ಮಾಡಲು ಅವಕಾಶವಿದೆ. ಆದರೆ ದೃಷ್ಟಾಂತದಲ್ಲಿ ಘಟವತ್ ಎಂದಿರೋಣದ

---

ಸೂಚನೆ : —

ಶಂಕರಾಚಾರ್ಯರವರು ತತ್ವಮಸಿಯನ್ನು ಅದ್ವೈತ ಪರವಾಗಿ ವ್ಯಾಖ್ಯಾನಮಾಡಲು ಶಂಕೆಗಳನ್ನು ದಹರಿಸುವಷ್ಟು ಸಮಾಧಾನಗಳನ್ನೂ ಈ ಸಂಕ್ಷೇಪ ಪ್ರತಿಪಾದನೆಯಲ್ಲಿ ವಿವರಿಸಿಲ್ಲವಾದರೂ, ಸಾರಾಂಶಭೂತವಾದ ಲಾಕ್ಷಣಿಕಾರ್ಥ ಸ್ವೀಕಾರಮಾಡಿ "ನೀನು ಬ್ರಹ್ಮ ನಾಗಿದ್ದೀ" ಎಂಬ ಅದ್ವೈತಾರ್ಥವನ್ನು ಕೊಟ್ಟಿರುವರೆಂಬುದನ್ನು ತಿಳಿಸಿರುವ ಕಾರಣ, ಹೆಚ್ಚು ವಿಚಾರ ಮಾಡಬೇಕೆಂಬುವವರು ಆಚಾರ್ಯರ ಭಾಷ್ಯವನ್ನು ಪಠಿಸಬೇಕೆಂಬದಾಗಿ ಸೂಚಿಸುತ್ತೇನೆ.

ರಿಂದ ಶಬ್ದಃ, ಅನಿತ್ಯಃ ಎಂತಲೇ ಹೇಗೆ ಪದವಿಭಾಗ ಮಾಡಬೇಕಾಗುವದೋ ಹಾಗೆ "ಸ ಆತ್ಮಾ ತತ್ವಮಸಿ" ಎಂಬ ವಾಕ್ಯದಲ್ಲಿ ಸಃ, ಆತ್ಮಾ, ಅತತ್, ತ್ವಂ, ಅಸಿ ; ಎಂದೇ ಪದವಿಭಾಗ ಮಾಡುತ್ತಾರೆ. ತತ್ವಮಸಿ ವಾಕ್ಯವನ್ನೊಳ ಕೊಂಡಿರುವ ಶೃತಿಯನ್ನು ಪೂರ್ತಿಯಾಗಿ ತೆಗೆದುಕೊಂಡು ಸಾಮಸಂಹಿತೆಯಲ್ಲಿ ಕೆಳಕಂಡ ಶ್ಲೋಕಗಳಲ್ಲಿ ನಿರೂಪಿಸಿರುವಂತೆ—

**ಸಾರತ್ವಾತ್ಸ ಇತಿಪ್ರೋಕ್ತೋ ಜ್ಞಾನತ್ವಾದ್ಯ ಇತೀರಿತಃ**
**ಸರ್ವೋತ್ತಮ ಇತಿಹ್ಯೇಷಃ ಮಾನಾನಾ ಮಾಪಕೋಣಿಮಾ**
**ತತ್ತಂತ್ರತ್ವಾದೈತದಾತ್ಮ್ಯಂ ಸ ಸತ್ಯಃ ಸಾಧುರೂಪತಃ**
**ತತ್ತತೇಃ ಪೂರ್ಣತಶ್ಚಾತ್ಮಾಸಾದನಾತ್ಸ ಇತೀರಿತಃ**
**ಅತತ್ವಮಸಿ ಪುತ್ರೇತಿಯ ಉಕ್ತೋ ಗೌತಮೇನತು**
**ನವಕೃತ್ವಃ ಸದೃಷ್ಟಾಂತಂ ಸರ್ವಭೇದೇನಕೇಶವಃ**
**ತಸ್ಮೈನಮೋ ಭಗವತೇಚಿದ ಚಿತ್ಪರಮಾಯತೇ**
**ಪುರುಷೋತ್ತಮಾಯ ದೇವಾಯ ಪೂರ್ಣಾನಂದೈಕರೂಪಿಣೇ**

ಎಂದು ಸ್ವಲ್ಪವೂ ವ್ಯತ್ಯಾಸವಿಲ್ಲದೆ ಬಲವತ್ತರ ಶಾಸ್ತ್ರಪ್ರಮಾಣಗಳನ್ನಿಟ್ಟು ಕೊಂಡು ಅರ್ಥಮಾಡುತ್ತಾರೆ.

ಶೃತಿಯಾದರೂ ಶ್ವೇತಕೇತುವಿನ ಅಹಂಕಾರವನ್ನು ಖಂಡಿಸುವುದಕ್ಕೆ ಹೊರಟಿರುವುದರಿಂದಲೂ, ಅಭೇದಜ್ಞಾನವಾದರೂ ಅದ್ವೈತ ಮತದಂತೆ ಕೇವಲ ಜೀವನ್ಮುಕ್ತರ ವ್ಯವಹಾರಕ್ಕೆ ಸಂಬಂಧಪಟ್ಟಿರುವುದರಿಂದಲೂ, ನೀನೇ ಬ್ರಹ್ಮನೆಂದು ಉಪದೇಶಿಸಲು ಸಂಬಂಧವೇ ಇರುವುದಿಲ್ಲ. ಹಾಗೆ ಉಪದೇಶಿ ಸಿದ್ದರೆ ಶ್ವೇತಕೇತುವಿಗೆ ಜ್ಞಾನೋದಯವಾಗುತ್ತಿರಲಿಲ್ಲ. ಅದ್ವೈತವೇ ಶೃತಿಗೆ ಸಮ್ಮತವಾದ ಅರ್ಥವಾಗಿದ್ದರೆ, ಪ್ರಾಪಂಚಿಕ ಮನುಷ್ಯನಂತೆ ಗರ್ವಿಷ್ಠ ನಾದ ಶ್ವೇತಕೇತುವಿಗೆ ಈಗಲ್ಲ ಮುಂದಾದರೂ ನೀನು ಬ್ರಹ್ಮನಾಗುವೆಯೆಂದು ತತ್ವಮಸಿಯೆನ್ನುವುದಕ್ಕೆ ಬದಲಾಗಿ 'ತತ್ತ್ವಂಭವಿಷ್ಯಸಿ' ಎಂದು ಉಪದೇಶಿಸ ಬೇಕಾಗಿತ್ತು. ಅದು ಹಾಗಾಗಿಲ್ಲ. ಆದ್ದರಿಂದ 'ಸ ಆತ್ಮಾಽತತ್ವಮಸಿ' ಎಂಬ ವಾಕ್ಯದಲ್ಲಿ ಸ ಆತ್ಮಾ= ಸರ್ವಜ್ಞನಾದ ಈಶ್ವರನು ಪೂರ್ಣನು ; ಅತತ್ ತ್ವಮಸಿ= ಅವನು ನೀನಲ್ಲ ; ಎಂದು ಅರ್ಥಮಾಡುವುದೇ ಸಾಧುವಾದ್ದು. ಮತ್ತು 'ಸುಪಾಂ ಸುಲುಕ್' ಎಂಬ ವ್ಯಾಕರಣ ಸೂತ್ರರೀತ್ಯಾ ಅತತ್ವಮಸಿ

ಎಂದು ಪದವಿಭಾಗಮಾಡದೆ ತತ್ವಮಸಿಯೆಂದೇ ನೋಡಿದರೂ, ನೀನು ಪರಮಾತ್ಮನಲ್ಲಿ ಸೇವಕನಾಗಿರುವೆಯೆಂದು, ಉಪಕ್ರಮೋಪ ಸಂಹಾರಗಳಿಗೆ ಅವಿರೋಧವಾಗಿ ಪ್ರಕರಣಕ್ಕೆ ತಕ್ಕ ಅರ್ಥವಾಗುತ್ತೆಂದು ನಿರೂಪಿಸಿದ್ದಾರೆ.

ಶಾಸ್ತ್ರದಲ್ಲಿ ಶಬ್ದಗಳಿಂದ ಏರ್ಪಡುವ ಮುಖ್ಯಾರ್ಥಕ್ಕೆ ಪ್ರಮಾಣಾಂತರಗಳಿಂದ ಬಾಧೆ ಬಂದರೆ ಮಾತ್ರ ಅಮುಖ್ಯಾರ್ಥ ಕಲ್ಪನೆಮಾಡುವ ಸಂಪ್ರದಾಯವುಂಟು. ಪ್ರಕೃತ ಮುಖ್ಯವೃತ್ತಿಯಿಂದ ಈ ಶ್ರುತಿಯು ಜೀವೇಶ್ವರ ಭೇದಪರವಾಗಿರುವುದರಿಂದಲೂ, ಪ್ರತ್ಯಕ್ಷಾದಿ ಪ್ರಮಾಣಗಳಿಗೂ ವ್ಯಾಕರಣಕ್ಕೂ ಅವಿರೋಧವಾಗಿರುವುದರಿಂದಲೂ, ಅ ಮು ಖ್ಯ ವೃ ತ್ತಿ ಯ ನ್ನಾ ಶ್ರ ಯಿ ಸಿ ಅದ್ವೈತಾರ್ಥಮಾಡಲು ಕಾರಣವಿರುವುದಿಲ್ಲ. ಮತ್ತು ಪಾಣಿನೀಯ ತಂತ್ರದಲ್ಲಿ "ಸಮರ್ಥಃ ಪದವಿಧಿಃ" ಎಂಬುವೊಂದು ಸೂತ್ರವಿದೆ ಪದವಿಧಿಃ= ಪದಕಾರ್ಯವಾದ ಕೃತ್ತದ್ಧಿತ ಸಮಾಸಗಳು, ಸಮರ್ಥಃ = ಸಮರ್ಥ ಪದಾಶ್ರಿತವು ಎಂದು ಸಮರ್ಥ ಪದಕ್ಕೆ ಸಮರ್ಥಪದಾಶ್ರಿತಪರ್ಯಂತ ಅರ್ಥ ಹೇಳುತ್ತಾರೆ. ಅದರಂತೆ ತ್ವಂತದಸಿ= ತ್ವಂತದಾಶ್ರಿತೋಸಿ (ನೀನು ಅವನ ಆಶ್ರಿತನಾಗಿದ್ದೀ) ಎಂದು ತಚ್ಛಬ್ದಕ್ಕೆ ತದಾಶ್ರಿತಪರ್ಯಂತ ಅರ್ಥ ಹೇಳುವುದು ಸಹ ಸಮಂಜಸವಾಗಿರುವುದು ಎಂದು ಅಭಿಪ್ರಾಯಪಡುತ್ತಾರೆ.

ಈ ಕ್ರಮವನುಸರಿಸಿ ದ್ವೈತ ಮತೀಯರು ಒಂಭತ್ತು ದೃಷ್ಟಾಂತಗಳಲ್ಲೂ ಇರುವ ಭೇದವನ್ನೇ ವಿವರಿಸಿ ತತ್ವಮಸಿಯು ಅದ್ವೈತಪರವಲ್ಲವೆಂಬುದನ್ನು ಸಿದ್ಧಾಂತ ಮಾಡುತ್ತಾರೆ ಇದು ಮಹಾ ವಾಕ್ಯಾರ್ಥ. ಛಾಂದೋಗ್ಯದಲ್ಲಿರುವ ಷಷ್ಠಪ್ರಪಾಠಕದ ಮಂತ್ರಗಳಷ್ಟನ್ನೇ ಮೂಲಸಹಿತವಾಗಿ ಕನ್ನಡದಲ್ಲಿ ಅನುವಾದ ಮಾಡಿಕೊಡಬೇಕೆಂದರೂ ತಕ್ಕ ಪ್ರಮಾಣಗಳನ್ನುದಹರಿಸಿ ವಿಸ್ತರಿಸುವಾಗ ದೊಡ್ಡದೊಂದು ಪುಸ್ತಕವೇ ಆಗಿಬಿಡುತ್ತದೆ. ದ್ವೈತಾದ್ವೈತವಾದಗಳ ಸರಣಿ ಹೇಗೆ ಬೆಳೆಯಿತೆಂಬುದರ ದಿಗ್ದರ್ಶನವನ್ನಿಲ್ಲಿ ಮಾಡುವುದೇ ಗುರಿಯಾದ್ದರಿಂದ ಹೆಚ್ಚಿನ ವಿವರ ತಿಳಿಯಬೇಕೆನ್ನುವವರು ಮೂಲ ಉಪನಿಷತ್ತನ್ನು ಪಠಿಸಬೇಕೆಂದು ಸೂಚಿಸುತ್ತೇನೆ.

ಈ ಸ್ವಾರಸ್ಯವಾದ ವಾಕ್ಯಾರ್ಥವನ್ನು ಕೇಳಲು ಬಹುಜನ ಪಂಡಿತರು ದಿನವೂ ಬಂದು ಸೇರುತ್ತಿದ್ದರು. ದೀಕ್ಷಿತನು ತನ್ನ ಪಾಂಡಿತ್ಯ ಪ್ರಕಾಶಕ್ಕೆ ಇದಕ್ಕಿಂತ ಉತ್ತಮ ಸಮಯ ಸಿಗದೆಂದು ಅನೇಕ ತರಹೆಯಿಂದ ಸ್ವಾಮಿಗಳೂ

ತಲೆದೂಗುವಂತೆ ಪರಿಮಳಾಚಾರ್ಯನ ಮೇಲೆ ಪೂರ್ವಪಕ್ಷಗಳನ್ನು ಹೇಳಿ ಇದರ ಮೇಲೆ ಸಮಾಧಾನವೇ ಹುಟ್ಟುವುದಿಲ್ಲವೆಂದು ವಿಜೃಂಭಿಸಿದನು.

ಪರಿಮಳಾಚಾರ್ಯನು ಲೀಲೆಯಿಂದಲೋ ಎಂಬಂತೆ ಸಮಾಧಾನ ಹೇಳುತ್ತಾ ದೀಕ್ಷಿತನ ಮೇಲೆ ಮತ್ತೆ ಪ್ರಶ್ನೆಗಳ ಹೊರೆಯನ್ನು ಹೊರಿಸಿದನು. ಕಡೆಕಡೆಗೆ ಪರಿಮಳಾಚಾರ್ಯನ ಪ್ರಶ್ನೆಗಳಿಗುತ್ತರ ಕೊಡುವುದು ದೀಕ್ಷಿತನಿಗೆ ದುಸ್ಸಾಧ್ಯವಾಯಿತು. ನಿರುತ್ತರನಾದರೂ ನಿರ್ಮತ್ಸರಿಯಾಗಿ ಸ್ವಾಮಿಗಳಿಗೆ ನಮಸ್ಕರಿಸಿ ಪರಿಮಳಾಚಾರ್ಯನ ಪಾಂಡಿತ್ಯವು ಪೀಠಪ್ರಭಾವವೆಂದೊಪ್ಪಿ, ಚಕ್ರಾಂಕನ ಮಾಡಿಸಿಕೊಂಡು ಶ್ರೀಮಠದ ಮುಖ್ಯ ಶಿಷ್ಯನಾದನು. ಸ್ವಾಮಿಗಳಿಗಿದು ಪರಮಲಾಭವೇ ಆಯಿತು.

ಪರಿಮಳಾಚಾರ್ಯನಿಗೆ ಪೂರ್ವ ಪ್ರತಿಜ್ಞೆಯಂತೆ ಸ್ವಾಮಿಗಳೇ ಭಟ್ಟಾಚಾರ್ಯನೆಂಬ ಬಿರುದನ್ನು ದಯಪಾಲಿಸಿದರು. ನಿರ್ಗತಿಕನಾಗಿದ್ದ ವೆಂಕಟಭಟ್ಟನು ಇಂದು 'ಮಹಾಭಾಷ್ಯ ಪರಿಮಳ ವೆಂಕಟಭಟ್ಟಾಚಾರ್ಯ'ನಾಗಿ ಹೋದನು.

ಮತ್ತೆ ಕೆಲವು ದಿವಸಗಳಲ್ಲಿ ಸ್ವಾಮಿಗಳು ಸಂಚಾರವನ್ನು ಮುಗಿಸಿ ಕುಂಭಕೋಣೆಗೆ ಬಂದರು. ಪರಿಮಳಾಚಾರ್ಯನು ಗೃಹಕೃತ್ಯ ನಿಮಿತ್ತ ಭುವನಗಿರಿಗೆ ಬರಬೇಕಾಯಿತು. ಇವನ ದಿಗ್ವಿಜಯ ಚರಿತ್ರೆಯನ್ನು ಕೇಳಿದ್ದ ಭುವನಗಿರಿಯ ವಿದ್ವಜ್ಜನರು ಭಟ್ಟನು ಭಟ್ಟಾಚಾರ್ಯನಾಗಿ ಬಂದುದನ್ನು ಕಂಡೊಡನೆಯೇ ಅನೇಕ ವಿಧವಾದ ವಿದ್ವನ್ಮರ್ಯಾದೆಗಳನ್ನೂ ಆದರಾತಿಥ್ಯಗಳನ್ನೂ ಮಾಡಿ ಅಭಿನಂದಿಸಿದರು

ಶ್ರೀನಿವಾಸನನುಗ್ರಹದಿಂದವತರಿಸಿದ ಅತ್ಯಂತ ಪ್ರತಿಭಾಶಾಲಿಯಾದ ಆಚಾರ್ಯನ ಯೋಗ್ಯತೆಯನ್ನೇನೆಂದು ವರ್ಣಿಸೋಣ !

ವೇದದಲ್ಲಿ ನೋಡಿದರೆ ಘನಾಂತ ಅಧ್ಯಯನಮಾಡಿದ ತ್ರಿವೇದಿ. ಶಾಸ್ತ್ರದಲ್ಲಿ ನೋಡಿದರೆ ಷಟ್ಛಾಸ್ತ್ರ ಸಂಪನ್ನ. ಗಾನವೋ ಮೃದುಮಧುರ. ಮೇಲಾದ ವೀಣಾವಾದನ, ಸರಸ ಕವಿತೆ. ಪ್ರತಿವಾದಿ ಭಯಂಕರವಾದ ವಾಚಾಳತ್ವ. ನಿಷ್ಠೆಯಲ್ಲಿ ಮೂವತ್ತು ವರ್ಷವಾಗಿದ್ದರೂ ಅಸ್ಖಲಿತ ಬ್ರಹ್ಮಚಾರಿ ; ಗುರುಕುಲವಾಸಿ ; ಅಗ್ನಿದೇವತಾರಾಧಕ ; ಆದುದರಿಂದಲೇ ವಜ್ರ

ಕಾಯ ; ತೇಜಸ್ಸಿನಲ್ಲಿ ಸೂರ್ಯಸದೃಶ, ವಂಶೋನ್ನತ್ಯ ನೋಡಿದರೆ ರಾಜಾಧಿರಾಜರೂ ತಲೆಬಾಗಿ ನಡೆವ ಗೌತಮರ ಶ್ರೋತ್ರಿಯಮನೆತನ.

ಇಂತಹ ವರನಿಗೆ ದಾರಿದ್ರ್ಯ ದೋಷವೊಂದಿದ್ದ ಮಾತ್ರಕ್ಕೇ ಕನ್ಯಾದಾನ ಮಾಡದವನಾರು ? ಭುವನಗಿರಿಯ ಜನರೇ ಸರಸ್ವತಿಯೆಂಬ ಸತ್ಕುಲ ಪ್ರಸೂತೆಯಾದ ಕನ್ಯೆಯನ್ನು ತಂದು ವಿವಾಹ ಮಾಡಿದರು. ಎರಡು ವರ್ಷದೊಳಗೇ ಸರಸ್ವತಿಯು ಪ್ರಾಪ್ತವಯಸ್ಕಳಾಗಲು ಪತಿದೇವನೊಡನೆ ಬಂದು ವಾಸಮಾಡುವ ಭಾಗ್ಯವುಂಟಾಯಿತು. ಈ ನೂತನ ದಂಪತಿಗಳ ಪ್ರೇಮವು ಅನ್ಯಾದೃಶವಾಗಿತ್ತು. ಸಕಲ ಸದ್ಗುಣಗಳೂ ಮೂರ್ತೀಭವಿಸಿ ವ್ಯಕ್ತಿದ್ವಯಗಳಾಗಿರುವಂತೆ ಭಾಸವಾಗುತಿತ್ತು. ಕೆಲವು ವರ್ಷಗಳಲ್ಲಿ ಸಂತತಿಯ ಯೋಚನೆ ಹುಟ್ಟುವ ಹೊತ್ತಿಗೆ ಸರಿಯಾಗಿ ಈ ದಂಪತಿಗಳಿಗೆ ಪುತ್ರೋತ್ಸವವಾಯಿತು. ಪರಿಮಳಾಚಾರ್ಯನು ಮಗನಿಗೆ ಲಕ್ಷ್ಮೀನಾರಾಯಣನೆಂದು ನಾಮಕರಣ ಮಾಡಿದನು.



## ೫ ಪ್ರವಚನ ಮತ್ತು ಸನ್ಯಾಸದ ಕರೆ

ಮಹಾಭಾಷ್ಯ ಪರಿಮಳ ವೆಂಕಟಭಟ್ಟಾಚಾರ್ಯನೆಷ್ಟು ದೊಡ್ಡ ವಿದ್ವಾಂಸನಾಗಿದ್ದರೂ, ದಾರಿದ್ರ್ಯವು ಮಾತ್ರ ಆತನನ್ನು ಬಿಡದೆ ಹಿಂಬಾಲಿಸಿತ್ತು. ತ್ರಾಸಿನಲ್ಲಿಟ್ಟು ತೂಗುವ ಹಾಗಿದ್ದರೆ ಸ್ವಲ್ಪವೂ ಏರುಪೇರಿರದೆ ಸರಿಯಾಗಿರುತ್ತೆಂದು ಹೇಳಬಹುದು. ಇವನು ಬಡತನದ ಕ್ಲೇಶಗಳಿಷ್ಟಿದ್ದರೂ ಶಾಂತನಾಗಿರುವದಕ್ಕೇ ಯತ್ನಿಸುತ್ತಿದ್ದನು. ದೂರ ದೇಶಗಳಿಂದ ಅನೇಕರು ವಿದ್ಯಾಭಿಲಾಷಿಗಳಾಗಿ ಬಂದು, ಈತನಲ್ಲಿ ಕಲಿಯುತ್ತಿದ್ದರು. ಶಿಷ್ಯರಿಗೆ ಮುಕ್ತಿಮಾರ್ಗವನ್ನು ತೋರಿಸುವುದರ ಜೊತೆಗೆ ಭುಕ್ತಿಯನ್ನೊದಗಿಸುವುದೂ ಈತನ ತಲೆಯಮೇಲೆ ಬಿದ್ದಿತು. ಸರ್ವದಾ ವಾರ ಪ್ರವಚನ ಮಾಡಿಕೊಂಡಿರುವ ಗೌರವದಿಂದ ಗೃಹಸ್ಥರನೇಕರು ದ್ರವ್ಯಸಹಾಯ ಮಾಡುತ್ತಿದ್ದರು ಆದರೆ ಅದು ಸಾಲುತ್ತಿರಲಿಲ್ಲ. ದ್ರವ್ಯಾರ್ಜನೆಗಾಗಿ ದೇಶಾಟನ ಮಾಡಬೇಕಾಯಿತು. ಶಿಷ್ಯರನ್ನು ಕರೆದುಕೊಳ್ಳದೆ ಒಂದು ದೊಡ್ಡ ಗ್ರಾಮಕ್ಕೆ ಬಂದನು. ಆ ಊರ ನ್ಯಾಯಾಧಿಪತಿಯ ಮನೆಯಲ್ಲೀತನ ಬಿಡಾರವಾಯಿತು. ಗೃಹಸ್ಥನು ದೇವ ಬ್ರಾಹ್ಮಣ ಭಕ್ತನಾಗಿದ್ದುದರಿಂದ ಈತನನ್ನು ಮರ್ಯಾದೆಯಿಂದ ಕಂಡನು. ಆ ಊರಲ್ಲಿರುವವರೆಗೂ ತನ್ನಲ್ಲೇ ಇರಬೇಕೆಂದು ಕೇಳಿಕೊಂಡನು.

ಮರುದಿನ ಗೃಹಸ್ಥನ ಮನೆಯಲ್ಲಿ ಕುಲದೇವತಾ ಸಮಾರಾಧನೆಯಾಗಿತ್ತು. ಅನೇಕ ಬ್ರಾಹ್ಮಣರು ಆಮಂತ್ರಿತರಾಗಿ ಬಂದು ತಮ್ಮ ಮಾನಾನುಗುಣವಾದ ಪೀಠಗಳಲ್ಲಿ ಕುಳಿತಿದ್ದರು. ಪರಿಮಳಾಚಾರ್ಯನು ತನ್ನ ಆಹ್ನಿಕವನ್ನು ಮುಗಿಸಿ, ದೂರದಲ್ಲೊಂದು ಕಡೆ ಸುಧಾ ಪಾರಾಯಣ ಮಾಡುತ್ತಿದ್ದನು ಗೃಹಸ್ಥನ ಪುರೋಹಿತನ ಓಡಾಟಕ್ಕೆ ಕೊನೆಮೊದಲಿರಲಿಲ್ಲ. ಅವನ ಧ್ವನಿಯೇ ಎಲ್ಲೆಲ್ಲೂ ಹೊಳಲು ಕೊಡುತ್ತಿತ್ತು. ಪರಿಮಳಾಚಾರ್ಯನನ್ನು ಯಾರೋ ಅಶನಾರ್ಥಿಯೆಂದು ತಿಳಿದನು. ನೂರಾರು ಜನರಿಗೆ ಹಚ್ಚಿಕೊಳ್ಳಲಾಗುವಷ್ಟು ಗಂಧವನ್ನು ತೆಗೆಯಲು ತಕ್ಕವನೊಬ್ಬನ ಸಹಾಯ ಬೇಕಾಗಿತ್ತು. ಪುರೋಹಿತನು ಹುಡುಕುತ್ತಾ, ನಮ್ಮ ಆಚಾರ್ಯನ ಬಳಿಗೆ ಬಂದನು. ಸಾಣೇಕಲ್ಲನ್ನೂ ಗಂಧದ ಕೊರಡನ್ನೂ ಮುಂದಿಟ್ಟು ಕೆಲಸವನ್ನೊಪ್ಪಿಸಿದನು. ಪರಿಮಳಾಚಾರ್ಯನಿಗೆ ಹಿಂದಿನ ದಿನದ ಪ್ರಯಾಣದಿಂದಲೂ, ದಾರಿದ್ರ್ಯ ದುಃಖವು

ಮನಸ್ಸಿಗೆ ತಟ್ಟಿದುದರಿಂದಲೂ ಬಹಳ ಬೇಸರವಾಗಿತ್ತು. ನೂರಾರು ಜನರಿಗಾಗುವಷ್ಟು ಗಂಧವನ್ನು ತೇಯುವುದು ಶ್ರಮಸಾಧ್ಯವಾದರೂ ಯತ್ನವಿಲ್ಲದೆ ಆರಂಭಿಸಿದನು. ಕೈಯಲ್ಲಾಗುವವರೆಗೆ ಕೆಲಸಮಾಡಿ ಒಂದು ಬಟ್ಟಲಿನಲ್ಲಿ ಗಂಧವನ್ನು ತೆಗೆದಿಟ್ಟನು. ಪುರೋಹಿತನು, "ಗಂಧವಾಯಿತೇ? ಎಷ್ಟು ಹೊತ್ತು?" ಎಂದುಕೊಳ್ಳುತ್ತಾ, ಬಟ್ಟಲನ್ನು ನೋಡಿ—'ಇದು ಸಾಲದು, ಮತ್ತಷ್ಟಾಗಬೇಕು; ಹೊತ್ತಾದರೆ ರಾಯರು ಕೋಪಮಾಡುತ್ತಾರೆ; ಹೂಂ, ಎಂದು ಅವಸರಿಸಿದನು. ಪರಿಮಳಾಚಾರ್ಯನು, ಸಾಮರ್ಥ್ಯವಿಲ್ಲದೆ, 'ಶ್ರೀಹರೇ! ಒಂದು ತುತ್ತನ್ನಕ್ಕಾಗಿ ಇಂಥಾ ಕಷ್ಟವೇ? ಈ ಪುರೋಹಿತನಿಗೆ ನಾನೇನು ಮಾಡಿದೆ? ಎಲ್ಲೋ ದೂರದಲ್ಲಿ ಕೂತದ್ದೇ ತಪ್ಪಾಯಿತೇ? ಆಗಲಿ, ಯಾರುಯಾರೆಷ್ಟು ಗಂಧವನ್ನು ಬಳಿದುಕೊಳ್ಳುವರೋ ನೋಡುವೆ'ನೆಂದು ಅಗ್ನಿಸೂಕ್ತ ಪಾರಾಯಣ ಮಾಡುತ್ತಾ ಗಂಧವನ್ನು ತೆಗೆದಿಟ್ಟನು. ಪುರೋಹಿತನು, ಅತಿಥಿಗಳಿಗೆ ತೀರ್ಥಕೊಟ್ಟು ಗಂಧವಿನಿಯೋಗ ಮಾಡಿದನು. ಗಂಧವನ್ನು ಲೇಪಿಸಿಕೊಂಡೊಡನೆಯೇ ಎಲ್ಲರಿಗೂ ತಾಪವುಂಟಾಗಿ ಬೊಬ್ಬೆಗಳೆದ್ದವು. ಉರಿಯನ್ನು ತಡೆಯಲಾರದೆ ಜನರು ಹಾಹಾಕಾರಕ್ಕಾರಂಭಿಸಿದರು. ಕಾರಣವೇನೆಂಬುದು ಯಾರಿಗೂ ತಿಳಿಯಲಿಲ್ಲ. ಗೃಹಸ್ಥನು ತನಗೇನು ದ್ರೋಹ ಘಟಿಸಿತೋ ಎಂದು ದುಃಖಿತನಾಗಿ, ಪುರೋಹಿತನನ್ನು ಕರೆದು ಈ ದಿನ ಮೊದಲಿಂದ ನಡೆದ ವೃತ್ತಾಂತವೇನೆಂದು ಕೇಳಿದನು. ಪುರೋಹಿತನು, ಗಾಬರಿಗೊಂಡು—'ಸ್ವಾಮಿ, ನನಗೆ ಕೆಲಸ ಹೆಚ್ಚಾಗಿತ್ತು. ಈ ಬ್ರಾಹ್ಮಣನಿಗೆ ಗಂಧ ತೆಗೆಯಲು ಹೇಳಿದೆ. ಈತನು ತೆಗೆದದ್ದು ಸಾಲುವಂತಿರಲಿಲ್ಲ. ಮತ್ತಷ್ಟು ಮಾಡೆಂದು ಸ್ವಾಭಾವಿಕವಾಗಿ ಗಟ್ಟಿಯಾಗಿ ಹೇಳಿದೆನು. ಅದಕ್ಕಿವನು ಏನೇನೋ ಅಂದುಕೊಂಡನು ಅಗ್ನಿಸೂತ್ರ ಪಾರಾಯಣ ಮಾಡುತ್ತಾ ಗಂಧವನ್ನು ತೆಗೆದನು. ಈತನು ಮಂತ್ರಸಿದ್ಧನೋ ಏನೋ ತಿಳಿಯದು. ಹಾಗೇನಾದರಿದ್ದರೆ ಅದರಿಂದಲೇ ತಾಪವಾಗಿರಬಹುದು. ಮತ್ತೆ ಬೇರೆ ತಪ್ಪು ಏನೂ ನಡೆದಿಲ್ಲ'ವೆಂದನು.

ಬ್ರಾಹ್ಮಣರು—"ಅಹುದು. ಅದೇ ಕಾರಣವಿರಬಹುದು; ಆ ಬ್ರಾಹ್ಮಣನು ಮಂತ್ರಸಿದ್ಧನಿರಬಹುದು; ಆತನೇ ಈಗ ನಮ್ಮ ತಾಪವನ್ನು ಶಮನ ಮಾಡಬೇಕು." ಎಂದೆಲ್ಲರೂ ಪರಿಮಳಾಚಾರ್ಯನಿಗೆ ನಮಸ್ಕರಿಸಿದರು. ಗೃಹ

ಸ್ಥನು,—ಪುರೋಹಿತನನ್ನು ತಪ್ಪುಮಾಡಿದೆಯೆಂದು ಗದರಿಸಿ, ತಾನೂ ಆಚಾರ್ಯನ ಪಾದಕ್ಕೆ ನಮಸ್ಕರಿಸಿ, ತನ್ನ ಅವಜ್ಞತೆಯನ್ನು ಕ್ಷಮಿಸಿ ಕಾಪಾಡಬೇಕೆಂದು ಕೇಳಿಕೊಂಡನು.

ಪರಿಮಳಾಚಾರ್ಯನು, ತನ್ನ ಕೆಲಸ ಸ್ವಲ್ಪ ಕೈಮೀರಿತೆಂದು ಒಡನೆಯೇ ವರುಣ ಸೂಕ್ತದಿಂದ ಗಂಧವನ್ನಭಿಮಂತ್ರಿಸಿ ಎಲ್ಲರಿಗೂ ತನ್ನ ಕೈಯಿಂದಲೇ ಕೊಟ್ಟು ತಾಪವನ್ನು ಪರಿಹರಿಸಿದನು.

ಬ್ರಾಹ್ಮಣರೆಲ್ಲರಿಗೂ ಈತನಲ್ಲಿ ಮಂತ್ರಸಿದ್ಧನೆಂಬ ಗೌರವವುಂಟಾಯಿತು. ಗೃಹಸ್ಥನು ಆಚಾರ್ಯನನ್ನು ಬಹಳವಾಗಿ ವಂದಿಸಿ ನೂರು ರೂಪಾಯಿಗಳನ್ನು ಪಾದಪೂಜೆ ಮಾಡಿದನು. ದೊರೆತಷ್ಟು ದ್ರವ್ಯವೇ ಸಾಕೆಂದು ಆಚಾರ್ಯನು ಭುವನಗಿರಿಗೆ ಹಿಂತಿರುಗಿದನು. ದ್ರವ್ಯ ಮುಗಿದರೂ ಮತ್ತೆಲ್ಲೂ ಹೋಗಲಿಲ್ಲ. ಕಷ್ಟದಿಂದಲೇ ದಿನಗಳನ್ನು ತಳ್ಳಿದನು. ಮಂತ್ರಸಿದ್ಧಿಯನ್ನು ತೋರಿಸಿದುದರಿಂದ ಬ್ರಾಹ್ಮಣರಿಗೆ ಸಂತಾಪವುಂಟಾಗಿ ಗೃಹಸ್ಥನು ನೂರು ರೂಪಾಯಿ ಕೊಟ್ಟನೆಂದು ಗೊತ್ತಾಯಿತು. ತಪಶ್ಶಕ್ತಿಯನ್ನು ಹೀಗೆ ದುರುಪಯೋಗ ಪಡಿಸುವುದು ಈತನಿಗೆ ರುಚಿಸಲಿಲ್ಲ. ಧರ್ಮಸ್ಥಾಪನೆಗೆ ಹೊರಡುವವರು ಇಂಥಾ ಮಹಿಮೆಗಳನ್ನು ತೋರಿಸಬೇಕಲ್ಲದೆ, ತನ್ನ ಚರಿತಾರ್ಥಕ್ಕಾಗಿ ಉಪಯೋಗ ಮಾಡುವುದು ಸಮಂಜಸವಲ್ಲವೆಂದು ಖಂಡಿತವಾಗಿ ತಿಳಿದನು. ಬರುಬರುತ್ತಾ ಈತನ ಜ್ಞಾನಶಕ್ತಿ ಹೆಚ್ಚಿತು. ಸಾಂಸಾರಿಕ ದುಃಖಗಳನ್ನು ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಧರ್ಮದೃಷ್ಟಿಯುಳ್ಳವರ ಸಹಾಯದಿಂದ ಹಾಗೂ ಹೀಗೂ ಸಂಸಾರ ಯಾತ್ರೆಯನ್ನು ಸಾಗಿಸಿದನು. ಸರಸ್ವತಿಯು ಗಂಡನಿಗೆ ತಕ್ಕ ಹೆಂಡತಿಯೇ ಆಗಿದ್ದಳು.

ಹೀಗಿರಲು ಒಂದು ರಾತ್ರಿ ಇವನ ಮನೆಗೆ ಕಳ್ಳರು ನುಗ್ಗಿ ಇದ್ದಬದ್ದ ಒಡಕು ಪಾತ್ರೆಗಳನ್ನೂ ಹೊತ್ತುಕೊಂಡು ಹೋದರು. ಮರುದಿನ ಅಡಿಗೆಗೆ ಪದಾರ್ಥಗಳೂ ಇರಲಿಲ್ಲ. ಸರಸ್ವತಿಯು ಖಿನ್ನಳಾಗಿ ಪತಿಯ ಮುಂದೆ ತಲೆ ತಗ್ಗಿಸಿ ನಿಂತು,—"ನಾಥ ! ಮುಂದೇನು ಗತಿ ! ಮನೆಯಲ್ಲೇನೂ ಉಳಿಯಲಿಲ್ಲ ; ಮಧ್ಯಾಹ್ನ ಕೃತ್ಯ ಹೇಗೆ ನಡೆಯಬೇಕು ? ನನಗೊಂದೂ ತೋಚುವುದಿಲ್ಲ"ವೆಂದು ಕಂಬನಿದುಂಬಿದವಳಾಗಿ ಕೇಳಿದಳು. ಪರಿಮಳಾಚಾರ್ಯನ ಮನಸ್ಸು ಈ ಮಾತಿನಿಂದ ಅಲ್ಲಕಲ್ಲೋಲವಾಯಿತು. ಮುಂದೇನು ಮಾಡು

ವುದಕ್ಕೂ ದಿಕ್ಕು ತೋರಲಿಲ್ಲ. ಎದ್ದು ನಿಂತು,—"ಸಾಕು ಈ ಊರ ವಾಸ ; ಕಳ್ಳರೇ ನಮ್ಮ ಪ್ರಯಾಣವನ್ನು ಸುಲಭಮಾಡಿಕೊಟ್ಟರು ; ನಡೆಯಿರಿ ; ಕುಂಭಕೋಣೆಗೆ ಹೋಗಿ ಗುರುಗಳು ಹೇಳಿದಂತೆ ಕೇಳಿಕೊಂಡು ಕಾಲ ಕಳೆಯೋಣ," ಎಂದು ಪ್ರಯಾಣ ಸನ್ನದ್ಧನಾದನು. ಸರಸ್ವತಿಯು ಲಕ್ಷ್ಮೀನಾರಾಯಣನನ್ನೆತ್ತಿಕೊಂಡೇ ನಡೆದಳು. ಶಿಷ್ಯರೂ ಹಿಂಬಾಲಿಸಿದರು. ಮಾರ್ಗಮಧ್ಯದಲ್ಲಿದ್ದ ಸಜ್ಜನರು ಇವರ ಆತಿಥ್ಯ ನಡೆಸಿದರು. ಪರಿಮಳಾಚಾರ್ಯನು ಕುಂಭಕೋಣೆಯನ್ನು ಸೇರಿ, ಸ್ವಾಮಿಗಳ ಪಾದಗಳಿಗೆರಗಿ, ತನ್ನ ವೃತ್ತಾಂತವನ್ನೆಲ್ಲಾ ಹೇಳಿಕೊಂಡನು.—"ಸಂಸ್ಥಾನವನ್ನು ಬಿಟ್ಟು ಬೇರೆ ವಾಸಮಾಡುವುದು ಮೂಲರಾಮನ ಚಿತ್ತದಲ್ಲಿರಲಿಲ್ಲವಾದುದರಿಂದ ಆಗಬೇಕಾದುದೇ ಆಯಿತು. ಇನ್ನೇಕೆ ತಾಪತ್ರಯ. ನೀನಿಲ್ಲೇ ಮಠದಲ್ಲಿದ್ದು ಪಾರ ಪ್ರವಚನಮಾಡೆ"ಂದರು. ಪರಿಮಳಾಚಾರ್ಯನಿಗಿದು ಮಹದುಪಕಾರವಾಯಿತು. ನಿತ್ಯವೂ ಕಾವೇರಿಯಲ್ಲಿ ಸ್ನಾನಾಹ್ನಿಕಗಳನ್ನು ಮಾಡಿಕೊಂಡು, ವಿಜಯೀಂದ್ರರ ದಿವ್ಯ ಬೃಂದಾವನ ಸನ್ನಿಧಿಯಲ್ಲಿ ಶಿಷ್ಯರಿಗೆ ಪ್ರವಚನಮಾಡಿಸಿ, ಮಠದಲ್ಲಿ ದೊರೆತ ತೀರ್ಥ ಪ್ರಸಾದಗಳಿಂದ ತೃಪ್ತನಾಗಿರುತ್ತಿದ್ದನು.

ಕೆಲವು ದಿನಗಳಮೇಲೆ ಸುಧೀಂದ್ರರಿಗೆ ದೇಹಾಲಸ್ಯವಾಯಿತು. ಅವರು ಪರಿಮಳಾಚಾರ್ಯರನ್ನು ಕರೆದು ಆಶ್ರಮ ಸ್ವೀಕಾರಮಾಡೆಂದರು. ಆಚಾರ್ಯನು ನಡುಗಿ,—"ಮಹಾಸ್ವಾಮಿ, ನನಗಷ್ಟರ ಯೋಗ್ಯತೆಯಿಲ್ಲ ; ಸಂಸಾರ ಕೂಪದಲ್ಲಿ ಮುಳುಗಿ ತೇಲುತ್ತಿರುತ್ತೇನೆ ; ವಿಷಯವಾಸನೆಗಳಿನ್ನೂ ನನ್ನನ್ನು ಬಿಟ್ಟಿಲ್ಲ ; ಹೆಂಡತಿಯು ಏನೂ ತಿಳಿಯದ ಬಾಲೆ ; ಮಗನು ಚಿಕ್ಕವನು ; ಉಪನಯನವೇ ಆಗಿಲ್ಲ ; ಯೋಗ್ಯರಾದವರನ್ನು ತಂದು ಈ ಮಹಾ ಪೀಠದಲ್ಲಿ ಕೂಡಿಸಬೇಕು ; ನನ್ನ ಸಾಹಸದ ಮಾತನ್ನು ಕ್ಷಮಿಸಬೇಕು" ಎಂದು ನಮಸ್ಕಾರಮಾಡಿದನು. ಸ್ವಾಮಿಗಳು ಮತ್ತೆ ಮತ್ತೆ 'ನೀನೇ ಈ ಪೀಠಕ್ಕೆ ತಕ್ಕವನು ; ನಿನ್ನಲ್ಲಾವ ನ್ಯೂನತೆಯೂ ಇಲ್ಲ'ವೆಂದು ಹೇಳಿದರು. ಆಚಾರ್ಯನು ಧೈರ್ಯವಿಲ್ಲದೆ ಕ್ಷಮೆಯನ್ನೇ ಬೇಡಿದನು.

ತಕ್ಕಷ್ಟು ಅವಕಾಶಕೊಟ್ಟು ಮುಂದಿವನನ್ನೇ ಪೀಠದಲ್ಲಿ ಕೂಡಿಸಬೇಕೆಂದು ಸ್ವಾಮಿಗಳು ನಿಶ್ಚೈಸಿದರು. ಸ್ವಾಮಿಗಳ ಪೂರ್ವಾಶ್ರಮದ ಸೋದರಳಿಯನೊಬ್ಬನು ತನಗೆ ಪ್ರಾಪ್ತವಾಗಿದ್ದ ಸಾಂಸಾರಿಕ ಕ್ಲೇಶಗಳಿಂದ

ಮನನೊಂದವನಾಗಿದ್ದನು ಮಠಕ್ಕೆ ಬಂದಾಗಲೆಲ್ಲಾ ತನಗೆ ಸನ್ಯಾಸಕೊಡಿ ರೆಂದು ಕೇಳುತ್ತಿದ್ದನು. 'ಆಗಲಿ, ಕಾಲಬರಲಿ, ನೋಡೋಣ'ವೆಂದು ಸ್ವಾಮಿಗಳೂ ಹೇಳುತ್ತಿದ್ದರು. ಪರಿಮಳಾಚಾರ್ಯನು ಸನ್ಯಾಸಕ್ಕೊಡಂಬಡ ದಿರಲು, ಸ್ವಾಮಿಗಳಿಗಾತನ ನೆನಪಾಯಿತು. ಒಡನೆಯೇ ಆತನನ್ನು ಕರೆಸಿ, ನಿನಗೆ "ಸನ್ಯಾಸಬೇಕೋ ಮಠಾಧಿಪತ್ಯಬೇಕೋ" ಎಂದು ಕೇಳಿದರು. ಇದ್ದ ಕ್ಕಿದ್ದ ಹಾಗೆ ಆಲಸ್ಯಕಾಲದಲ್ಲಿ ಸ್ವಾಮಿಗಳು ಪ್ರಶ್ನೆಮಾಡಿದುದಕ್ಕೆ ಭೀತನಾಗಿ, ಏನು ಮಾತನಾಡಿದರೇನಾಗುವುದೋ ಎಂಬ ಭಯದಿಂದ ತನಗೆ ಸನ್ಯಾಸ ಮಾತ್ರ ಸಾಕೆಂದನು. ಗುಣವಾಗುವವರೆಗೂ ಪೂಜಾದಿಗಳು ನಿರ್ವಿಘ್ನವಾಗಿ ನಡೆಯಲನುಕೂಲವಾಯಿತೆಂದು ಆತನಿಗೆ ಆಶ್ರಮ ಕೊಟ್ಟು, ಯಾದವೇಂದ್ರ ರೆಂಬ ನಾಮದಿಂದ ಕರೆದರು. ಮೂಲರಾಮನನ್ನು ಬಿಟ್ಟು ಮಿಕ್ಕ ಪ್ರತಿಮೆ ಗಳನ್ನು ಯಾದವೇಂದ್ರರಿಗೊಪ್ಪಿಸಿದರು. ಕೆಲವು ದಿವಸಗಳಮೇಲೆ ಸ್ವಾಮಿ ಗಳಿಗೆ ಚೆನ್ನಾಗಿ ಗುಣವಾಯಿತು. ಯಾದವೇಂದ್ರರನ್ನು ತಮ್ಮ ಪ್ರತಿನಿಧಿ ಗಳನ್ನಾಗಿ ದೇಶಸಂಚಾರಕ್ಕೆ ಕಳುಹಿಸಿದರು. ಅವರು ಉತ್ತರದೇಶ ಯಾತ್ರೆಗೆ ಹೋದವರು ಬಹುದಿನಗಳಾದರೂ ಹಿಂತಿರುಗಲಿಲ್ಲ.

ಇತ್ತ ಸ್ವಾಮಿಗಳಿಗೆ ವೃದ್ಧಾಪ್ಯವಾಗಿದ್ದುದರಿಂದ ಏನಾದರೊಂದು ವಿಧ ವಾದ ಆಲಸ್ಯವಾಗುತ್ತಲೇ ಇತ್ತು. ಈ ಕಾರಣದಿಂದ ತಮ್ಮ ದೇಹವು ಹೆಚ್ಚು ಕಾಲ ಉಳಿಯಲಾರದೆಂದು ತಿಳಿದರು. ಸಂಸ್ಥಾನಪಾಲಕರ್‍ಯಾರಾಗಬೇಕೆಂಬುದೇ ಸ್ವಾಮಿಗಳ ದೊಡ್ಡಯೋಚನೆಯಾಯಿತು. ಒಂದು ರಾತ್ರಿ ಸ್ವಪ್ನದಲ್ಲಿ, ಮೂಲರಾಮನು ಗುರುರೂಪದಿಂದ ದರ್ಶನವಿತ್ತು, ಪರಿಮಳಾಚಾರ್ಯನಿಗೆ ಆಶ್ರಮ ಕೊಡೆಂದು ಹೇಳಿದಹಾಗಾಯಿತು. ಮರುದಿನ ಸ್ವಾಮಿಗಳು ಆಚಾರ್ಯನನ್ನು ಕರೆದು, ಮತ್ತೆ ಕೆಲವು ಆಪ್ತಜನರ ಸಮುದಾಯದಲ್ಲಿ ಸ್ವಪ್ನ ವೃತ್ತಾಂತವನ್ನು ತಿಳಿಸಿದರು. ಎಲ್ಲರೂ ಆಚಾರ್ಯನೇನೆನ್ನುವನೋ ಎಂದು ಆತನ ಕಡೆಗೇ ನೋಡುತ್ತಿದ್ದರು. ಸ್ವಾಮಿಗಳು—"ವೆಂಕಣ್ಣಾ, ನೀನಿದಕ್ಕೆ ಪ್ರತ್ಯುತ್ತರ ಕೊಡಬೇಡ; ನಿನ್ನ ಮಗನ ಉಪನಯನವನ್ನು ಈ ಮಾಘದಲ್ಲೇ ಮಾಡು; ಧನವನ್ನು ತೆಗೆದುಕೋ" ಎಂದು ವಿಶೇಷವಾಗಿ ಕೊಟ್ಟು ಕಳುಹಿಸಿದರು. ಪರಿಮಳಾಚಾರ್ಯನು ಪಿಟ್ಟೆನ್ನದೆ ಎತ್ತಲಾರದಷ್ಟು ಹಣವನ್ನು ಹೊತ್ತುಕೊಂಡು, ಲಕ್ಷ್ಮೀನಾರಾಯಣನ ಉಪನಯನಕ್ಕಾಗಿ

ಸ್ವಾಮಿಗಳು ಅನುಗ್ರಹಿಸಿದರೆಂದು ಸರಸ್ವತಿಯ ವಶಕ್ಕೆ ಕೊಟ್ಟನು ಮಿಕ್ಕ ಸಂಗತಿಯನ್ನು ಆಗ ತಿಳಿಸಲಿಲ್ಲ.

ಆಚಾರ್ಯನು ಜ್ಯೋತಿಷ್ಕರಿಂದ ಉತ್ತಮವಾದ ಮೂಹೂರ್ತವಿಡಿಸಿ, ಅಣ್ಣನೇ ಮೊದಲಾದ ಬಂಧುಜನರನ್ನು ಕರೆಸಿದನು. ಗುರುರಾಜಾಚಾರ್ಯನೂ ಲಕ್ಷ್ಮೀನೃಸಿಂಹಾಚಾರ್ಯನೂ ಮುಂದಾಳುಗಳಾಗಿ ನಿಂತು, ಶಾಸ್ತ್ರನಿಯಮಕ್ಕೂ ಸಂಪ್ರದಾಯಕ್ಕೂ ಲೋಪಬರದಂತೆ ನಡೆಯಬೇಕಾದುದೆಲ್ಲವನ್ನೂ ನಡೆಸಿದರು. ಶ್ರೀಸುಧೀಂದ್ರತೀರ್ಥ ಶ್ರೀಪಾದಂಗಳವರಿಂದ ಲಕ್ಷ್ಮೀನಾರಾಯಣನಿಗೆ ಬ್ರಹ್ಮೋಪದೇಶವಾಯಿತು.

ಆ ರಾತ್ರಿ ಸ್ವಪ್ನದಲ್ಲಿ ಆಚಾರ್ಯನಿಗೆ ವಾಗ್ದೇವಿಯ ದರ್ಶನವಾಯಿತು. ಸರ್ವಾಭರಣ ಭೂಷಿತೆಯಾಗಿ, ಮಂದಹಾಸದಿಂದ ನಿಂತಿರುವ ದೇವಿಯು ಭಾರತಿಯೋ ಪಾರ್ವತಿಯೋ ಕಮಲವಾಸಿನಿಯೋ ಎಂಬ ಸಂಶಯವಾಯಿತು. ಪ್ರಶ್ನೆಮಾಡುವಷ್ಟು ಧೈರ್ಯವಿಲ್ಲದೆ ವಿಸ್ಮಿತನಾಗಿ ಆಕೆಯ ಪಾದಾಂಗುಟವನ್ನೇ ನೋಡುತ್ತಿದ್ದನು. ಇವನ ಸಂಶಯವನ್ನು ಪರಿಹರಿಸಬೇಕೆಂದು ದೇವಿಯು ಹೀಗೆ ನುಡಿದಳು.—"ಆಚಾರ್ಯ, ನಾನು ಜ್ಞಾನಸಾಗರ ಮಥನಕಾಲದಲ್ಲುದಿಸಿದ ವಿದ್ಯಾಲಕ್ಷ್ಮಿಯು. ನನ್ನನ್ನು ವಾಗ್ದೇವಿಯೆಂದು ಕರೆಯುವರು. ಜನ್ಮವೆತ್ತಿ ಬಹುಕಾಲವಾದರೂ ಪಾಲಕರಿಲ್ಲದೆ ಕೃಶಳಾಗುತ್ತಿರಲು ಆನಂದತೀರ್ಥ ಮುನಿಗಳ ಕರುಣವಾಯಿತು. ಅವರು ವ್ಯಾಸೋಕ್ತಿ ಕಾಮಧೇನುವಿನಿಂದ ಭಾಷ್ಯವೆಂಬ ಕ್ಷೀರವನ್ನು ಕರೆದು ನನ್ನನ್ನು ಶೈಶವದಲ್ಲಿ ಸಲಹಿದರು. ಅಕ್ಷೋಭ್ಯತೀರ್ಥ ಜಯತೀರ್ಥರಿಂದ ನನಗೆ ಯೌವನವುಂಟಾಯಿತು. ಕಲ್ಪಾಂತ ಪರ್ಯಂತರ ಜೀವಿಸಿರಬೇಕೆಂಬ ನನ್ನಿಂದ ವ್ಯಾಸತೀರ್ಥರು ನ್ಯಾಯಾಮೃತ ಪಾನಮಾಡಿಸಿ, ಜ್ಞಾನಚಂದ್ರನ ಚಂದ್ರಿಕೆಯಲ್ಲಿ ತರ್ಕತಾಂಡವ ನರ್ತನ ಮಾಡಿಸಿದರು. ವಿಜಯೀಂದ್ರರೇ ಮೊದಲಾದ ಮುನಿಗಳು ದಿವ್ಯವಸ್ತ್ರಾಭರಣಗಳಿಂದ ನನ್ನನ್ನು ಶೃಂಗರಿಸಿದರು. ಆದರೇನು ? ಅಜ್ಞಾನವು ಮತ್ತೆ ಮುಸುಗಿ ಕಗ್ಗತ್ತಲೆಯಾಯಿತು. ಇಚ್ಛೆ ಬಂದಂತೆ ಸಂಚರಿಸಿ ಪರಿಮಳಯುಕ್ತವಾದ ಸುಧಾಪಾನಮಾಡಬೇಕೆಂದರೂ ಕಾರ್ಮುಗಿಲಿನಿಂದ ಚಂದ್ರಿಕೆಯು ಮಬ್ಬಾಗಿ ಪ್ರಕಾಶ ಶೂನ್ಯವಾಗಿದೆ. ಸುಧೀಂದ್ರರು ರಾಜಸಭೆಗಳಲ್ಲಿ ನನ್ನನ್ನು ಮೆರೆಸಿದರೂ ಅಜ್ಞಾನಾಂಧಕಾರ

ವ್ಯಾಪಿಸಿರುವಲ್ಲಿ ನಿರ್ಭಯಳಾಗಿ ಸಂಚರಿಸುವಂತಿಲ್ಲ ನಿನಗೆ ಪ್ರಸನ್ನಳಾಗಿರುವೆನು. ನಿನ್ನ ವಾಕ್ಕಿನಲ್ಲಿ ನಾನೇ ಜಯಪ್ರದಳಾಗಿ ನೆಲೆಸಿರುವೆನು. ಮೂಲ ರಾಮನು ನಿನ್ನ ಸೇವೆಯನ್ನು ಕೈಗೊಳ್ಳಲು ಸಿದ್ಧನಾಗಿರುವನು. ಕ್ಷಿಪ್ರದಲ್ಲಿ ಸನ್ಯಾಸಿಯಾಗು''

ದೇವಿಯು ಅದೃಶ್ಯಳಾದಳು. ಆಚಾರ್ಯನಿಗೆ ಎಚ್ಚರವಾಯಿತು. ತನ್ನ ಚರಿತ್ರೆಯೊಂದೊಂದನ್ನೂ ಜ್ಞಾಪಿಸಿಕೊಂಡನು ಎಲ್ಲಕ್ಕಿಂತ ಗುರುಗಳಾಜ್ಞೆಯೂ ವಾಗ್ದೇವಿಯ ವರವೂ ಸ್ಮರಣೆಗೆ ಬಂದವು. ಆನಂದಬಾಷ್ಪಗಳಿಂದ ಪುಳಕಿತನಾದನು ತನ್ನ ಪ್ರಿಯಪತ್ನಿಗೀವಿವರವನ್ನು ತಿಳಿಸದೆ ಮುಂದುವರಿಯುವುದು ದ್ರೋಹವೆಂದು ಭಾವಿಸಿದನು. ಸನ್ಯಾಸ ವಿಷಯವನ್ನು ಕೇಳಿದೊಡನೆ ಸರಸ್ವತಿ ಏನನ್ನುವಳೋ ಎಂಬ ಭಯವಾಯಿತು.

ಸರಸ್ವತಿಗಾದರೋ ಉಪನಯನದ ಗಡಿಬಿಡಿಯಲ್ಲಿ ಕಲಸವನ್ನು ಮುಗಿಸಿ ಮಲಗುವುದೇ ಹೊತ್ತಾಗಿಬಿಟ್ಟಿತ್ತು ವಿಶ್ರಾಂತಿಯಿಲ್ಲದುದರಿಂದಲೂ ದೇಹಾಯಾಸದಿಂದಲೂ ಗಾಢನಿದ್ರೆ ಬಂದಿತ್ತು. ಆಚಾರ್ಯನಿಗೆ ಆಕೆಯನ್ನು ಎಚ್ಚರಗೊಳಿಸುವಷ್ಟು ಮನಸ್ಸು ಕಠಿಣವಾಗಲಿಲ್ಲ ಹಾಗೆಯೇ ಆಕೆಯ ಸುಂದರವಾದ ಮುಖವನ್ನು ನೋಡುತ್ತಾ ಕುಳಿತನು ಅವಳ ಒಂದೊಂದು ಸುಗುಣವೂ ನೆನಪಿಗೆ ಬರಲು ಕಣ್ಣುಗಳು ತುಂಬಿ ತುಳುಕಿದವು. ಬೆಳಗಿನ ಝಾಮವಾಗುತ್ತಾ ಬಂದುದರಿಂದ ಯತ್ನವಿಲ್ಲದೆ ತನ್ನ ರೂಢಿಯನ್ನನುಸರಿಸಿ ಸಂಬೋಧಿಸಿದನು. ಸರಸ್ವತಿಯು ಪತಿಯ ಧ್ವನಿಯನ್ನು ಕೇಳಿದೊಡನೆಯೇ ಹಾಸಿಗೆಯಿಂದೆದ್ದು, ಎಂದೂ ಇಲ್ಲದ ನಿದ್ರೆಬಂದಿತೆಂದುಕೊಂಡು ಲಜ್ಜಿತಳಾದಳು. ಆಚಾರ್ಯನಿಗೆ ಒಡನೆಯೇ ತನ್ನ ಪ್ರಸ್ತಾವನೆಯನ್ನಾರಂಭಿಸುವಷ್ಟು ಧೈರ್ಯವಾಗಲಿಲ್ಲ.

ಲಕ್ಷ್ಮೀನಾರಾಯಣನ ಉಪನಯನವು ಸಂಭ್ರಮವಾಗಿ ನಡೆಯಿತೆಂದು ಆಕೆಯ ಮನಸ್ಸು ಪ್ರಸನ್ನವಾಗಿತ್ತು. ಆಕೆಯೇ ತನಗೆ ಈ ಮಹತ್ಕಾರ್ಯವು ನಡೆವ ಬಗೆ ಹೇಗೆಂಬ ವ್ಯಸನವಿತ್ತೆಂತಲೂ, ಗುರುಗಳನುಗ್ರಹದಿಂದ ಅದು ಪರಿಹಾರವಾಯಿತೆಂತಲೂ ಹೇಳಿದಳು. ಈ ಮಾತಿನಿಂದ ಆಚಾರ್ಯನಿಗೆ ಮಾತಿನ ಪೀಠಿಕೆ ಸಿಕ್ಕಿದಂತಾಯಿತು. ಗುರುಗಳ ಮಹದುಪಕಾರವೊಂದೊಂದನ್ನೂ ಹೆಂಡತಿಯ ಮುಂದೆ ವಿವರವಾಗಿ ಹೇಳುತ್ತಾ ಬಂದನು. ಆದರೆ ಅವರು

ಅಪ್ಪಣೆಕೊಡಿಸಿದ ಒಂದು ಮಾತನ್ನಾದರೂ ನಡೆಸಿ ಕೃತಾರ್ಥನಾಗುವ ಪುಣ್ಯ ಮಾತ್ರ ತನಗಿರುವುದೋ ಅಥವ ಇಲ್ಲವೋ ಎಂದು ಗದ್ಗದ ಕಂಠದಿಂದ ಮಾತನ್ನು ನಿಲ್ಲಿಸಿದನು.

ಸರಸ್ವತಿ:—ನಾಥ! ಅಂಥಾದ್ದೇನು? ಇದೇಕೆ ಹೀಗೆ ನುಡಿಯುವಿರಿ? ಗುರುಗಳ ಅಪ್ಪಣೆಯಂತೆ ನಡೆಯುವುದೇ ನಮ್ಮ ಜನ್ಮದ ಮೊದಲ ಕರ್ತವ್ಯ. ಅವರಾಜ್ಞೆಯನ್ನು ಮೀರುವುದೆಂದರೇನು? ಏನಾದರೂ, ನಮ್ಮ ಪ್ರಾಣಗಳನ್ನೇ ಅವರ ಪಾದಕ್ಕೊಪ್ಪಿಸಿಯಾದರೂ ನಾವು ಕೃತಾರ್ಥರಾಗಬೇಕು.

ಆಚಾರ್ಯ:—ನೀನು ಹೇಳುವುದೆಲ್ಲಾ ಸರಿ. ಅದು ನನ್ನೊಬ್ಬನಿಂದಲೇ ಹೇಗೆ ಸಾಧ್ಯ? ನೀನೂ ಸಹಾಯ ಮಾಡಬೇಕು. ಇಲ್ಲದಿದ್ದರ ಗುರುದ್ರೋಹವೇ ಘಟಿಸುವುದು.

ಸರಸ್ವತಿ:—ರಾಮರಾಮ! ತಮ್ಮ ಕಾರ್ಯವಾವುದಕ್ಕೆ ನನ್ನ ಸಹಾಯವಿಲ್ಲದೇಹೋಗಿದೆ?

ಆಚಾರ್ಯ:—ಅಹುದು ಆದ್ದರಿಂದಲೇ ನಿನ್ನನ್ನು ಕೇಳುವುದು.

ಸರಸ್ವತಿ:—ನನ್ನನ್ನು ಕೇಳಬೇಕಾದುದೇನೂ ಇಲ್ಲ. ಖಂಡಿತ ತಾವಾಡಿದ್ದೇ ನನ್ನ ಮಾತು. ಮಾಡಿದ್ದೇ ನನ್ನ ಕೆಲಸ. ತಮ್ಮ ಸಂತೋಷವೇ ನನಗೆ ಸುಖ ತಮ್ಮ ದೇಹದ ನೆರಳೇ ನಾನು. ತಾವೆತ್ತತಿರುಗಿದರೆ ಅತ್ತಕಡೆ ಹಿಂದಾಗಲಿ, ಮುಂದಾಗಲಿ ನಡೆಯುವವಳು. ತಾವು ಸರ್ವಥಾ ಸಂದೇಹಿಸಬಾರದು. ಗುರುಗಳಾಜ್ಞೆ ಏನೆಂಬುದನ್ನು ಇನ್ನೂ ತಿಳಿಸಬಾರದೇ?

ಆಚಾರ್ಯ:—ಮತ್ತೇನೂ ಇಲ್ಲ. ಗುರುಗಳು ನನಗೊಂದು ದೊಡ್ಡ ಮರ್ಯಾದೆ ಮಾಡಬೇಕೆಂದಿರುವರು ಅದನ್ನು ತೆಗೆದುಕೊಳ್ಳುವ ವಿಷಯದಲ್ಲಿಷ್ಟು ಮಾತನಾಡಿದುದು.

ಸರಸ್ವತಿ:—ನನ್ನ ಮೇಲೆ ಸುಮ್ಮನೆ ಭಾರ ಹಾಕಬೇಡಿ. ನಿಮಗೆ ಇದುವರೆಗೂ ಆಗದಿರುವ ಮರ್ಯಾದೆಯಾವದು? ಬಾರದಿರುವ ದೊಡ್ಡಸ್ತಿಕೆ ಯಾವದು? ನಿಮ್ಮ ಮೇಲಿರುವಷ್ಟು ಗುರುಗಳನುಗ್ರಹವು ಭೂಮಂಡಲದಲ್ಲೇ ಮತ್ತಾರಮೇಲೂ ಇಲ್ಲವೆಂದು ತಿಳಿದಿರುವೆನು. ಅವರೇ ನಿಮಗೆ ವಿದ್ಯಾದಾನ ಮಾಡಿದರು. ವಿದ್ವತ್ಸಭೆಗಳಲ್ಲಿ ಯಾರಿಗೂ ಲಭ್ಯವಾಗದ ಬಿರುದುಗಳನ್ನು ಕೊಟ್ಟರು. ಮುಖ್ಯವೇನು? ನಮ್ಮ ಜೀವನವೇ ಅವರಿಂದಾಯಿತು.

ಲಕ್ಷ್ಮೀನಾರಾಯಣನ ಉಪನಯನವನ್ನೂ ಮಾಡಿಸಿದರು. ಇನ್ನೂ ಏನು ಬೇಕಾದರೂ ಮರ್ಯಾದೆಮಾಡಲಿ. ನಾನೂ ಅದರ ಸುಖವನ್ನು ತಮ್ಮ ಜೊತೆಯಲ್ಲೇ ಅನುಭವಿಸುವೆನು.

ಆಚಾರ್ಯ:—ಅದೋ ಅನುಭವದಲ್ಲಿ ಅಭಿಪ್ರಾಯಭೇದ. ನನ್ನ ಜೊತೆಯಲ್ಲಿ ನೀನಿದ್ದು ಅನುಭವಿಸುವುದಲ್ಲ!

ಸರಸ್ವತಿ:—ನನಗಿಲ್ಲದಿದ್ದರೆ ಚಿಂತೆಯಿಲ್ಲ ನಿಮಗೇ ಇರಲಿ. ಮೇನೆ ಪಲ್ಲಕ್ಕಿಗಳನ್ನು ಕೊಡಬಹುದು. ಅದರ ಮೇಲೆ ಕೂತುಕೊಂಡು ತಾನೇ ಮೆರೆಯಿರಿ. ನಾನು ಕಣ್ಣಾರೆ ನೋಡಿ ಸಂತೋಷಪಡುತ್ತೇನೆ.

ಆಚಾರ್ಯ :—ಅದೊಂದೂ ಅಲ್ಲ.

ಸರಸ್ವತಿ :—ಹಾಗಿದ್ದರೆ ಅದೇನು ಸ್ಪಷ್ಟವಾಗಿ ಹೇಳಿಬಿಡಿ. ನಾನು ಸಮ್ಮತಿಸಲಾರನೆಂಬ ಭಯಬೇಡ. ಮೂರುಮೂರು ಬಾರಿಗೂ ಸಮ್ಮತಿಸಿದ್ದೇನೆ*

ಆಚಾರ್ಯ :—ಸಮ್ಮತಿಸಿರುವೆಯಾದ್ದರಿಂದ ಹೇಳುವೆನು

ಸರಸ್ವತಿ :—ತಡಮಾಡದೆ ಹೇಳಿ.

ಆಚಾರ್ಯ :—ಹೇಳುವುದೇನು ? ಸ ನ್ಯಾ ಸ .

ಸರಸ್ವತಿ :—ಆ ! ಏನು ! ಸ-ನ್ಯಾ-ಸ — ಸ-ನ್ಯಾ-ಸ ! ಅದೇ ನನಗೆ ಸರ್ವನಾಶ. ಶ್ರೀಹರೇ ! !

ಆಚಾರ್ಯ :—ನೀನು ಹೀಗೆನ್ನುವಿಯೆಂದೇ ಮಾತನ್ನು ತಡೆದೆನು.

ಸರಸ್ವತಿ :—ಈ ಮೋಸ ನನಗೆ ತಿಳಿಯಲಿಲ್ಲ.

ಸರಸ್ವತಿಯು ನಿರುತ್ತರಳಾಗಿ ಪ್ರಜ್ಞೆತಪ್ಪಿದವಳಂತೆ ಕುಳಿತುಬಿಟ್ಟಳು. ಪ್ರತಿಮಾತನಾಡಿ ಗಂಡನನ್ನು ನೋಯಿಸುವುದು ಮಹಾ ಪಾತಕವೆಂದು ತಿಳಿದಳು. ಹರಿಗುರುಗಳ ಚಿತ್ತಕ್ಕೇ ಹೀಗೆ ಬಂದಿರುವಾಗ ನನ್ನೊಬ್ಬಳ ಸೌಖ್ಯಕ್ಕಾಗಿ ಬೇಡವೆಂದರೆ ಜನರು ನನ್ನನ್ನು ಸ್ವಾರ್ಥಪರಳೆಂದು ನಿಂದಿಸು

*ಸರಸ್ವತಿಗೆ ಸನ್ಯಾಸದ ಕಲ್ಪನೆ ಬರಲು ಕಾರಣವಿಲ್ಲ. ಯಾದವೇಂದ್ರರಿಗೆ ಆಶ್ರಮವಾಗಿದ್ದುದರಿಂದ ಮುಂದಿನ ಮತ ರಾಜ್ಯಭಾರವು ಅವರದೆಂದೇ ಭಾವಿಸಿದ್ದಳು. ಮೊದಲೇ ಆಚಾರ್ಯನು ಸನ್ಯಾಸ ವಿಷಯದಲ್ಲಿ ಅಭಿಪ್ರಾಯಪಟ್ಟಿರಲಿಲ್ಲವೆಂಬುದು ಆಕೆಗೆ ಚೆನ್ನಾಗಿ ಜ್ಞಾಪಕವಿತ್ತು.

ವರೆಂದೆಂದುಕೊಂಡಳು ಬೇಡವೆಂದರೂ ನನ್ನ ಮಾತು ನಡೆಯಲಾರದೆಂದು ಭಯಪಟ್ಟಳು. ಒಂದುವೇಳೆ,—ಪತಿಯು ನನ್ನ ಮಾತನ್ನೇ ಮನ್ನಿಸಿದರೂ ಮೊದಲಿನಂತೆ ಶಾಂತನಾಗಿರನೆಂದು ತಿಳಿದಳು. ಮತ್ತೆ ತನ್ನಲ್ಲಿ ತಾನೇ—ಪತಿಯು ಸನ್ಯಾಸಿಯಾದರೆ ನನಗಾಗುವ ನಷ್ಟವೇನು? ಆತನನ್ನು ಕಣ್ಣಿಂದ ನೋಡಿ, ಆತನ ಸೇವೆಯನ್ನು ಮಾಡಿ ಧನ್ಯಳಾಗುವ ಭಾಗ್ಯವೊಂದಿರುವುದಿಲ್ಲ. ಲೋಕವೆಲ್ಲವೂ ಪೂಜಿಸುವ ಆ ಮಹಾನುಭಾವನ ಅರ್ಧಾಂಗಲಕ್ಷ್ಮಿಯಾಗಿದ್ದೆನೆಂಬ ಗರ್ವವಾದರೂ ನನ್ನ ಪಾಲಿಗಿದ್ದೇ ಇರುವುದು. ಓಹೋ! ಸನ್ಯಾಸಿಯ ಹೆಂಡತಿಯೆಂಬ ಗಾದೆಗೆ ಸರಿಯಾಗಿ ನೋಡುವವರ ಕಣ್ಣಿಗೆ ನನ್ನ ಬಾಳಿಕೆಯು ಅಮಂಗಳವಾಗಿ ಕಾಣಬಹುದಲ್ಲವೆ? ನೋಡುವರ ಕಣ್ಣಿಗೆ ಗುಣ್ಣಾಗಿ ನಾನೇಕೆ ಬದುಕಿರಬೇಕು. ಜೀವಿತಕಾಲದಲ್ಲಿ ನನಗೇನೂ ಕೊರತೆಯಾಗಲಿಲ್ಲ. ಸದ್ವಂಶದಲ್ಲಿ ಜನಿಸಿ ಮಾತಾಪಿತೃಗಳ ಪ್ರೇಮದಿಂದ ಬಾಲ್ಯದಲ್ಲಿ ಬೆಳೆದೆನು. ಮಹಾ ಪಂಡಿತನೂ ಸಕಲ ಗುಣಸಂಪನ್ನನೂ ಆದ ಪತಿಯ ಕೈಯನ್ನೇ ಹಿಡಿದೆನು. ನನ್ನನ್ನು ಕೇಳದೆ ಯಾವಕೆಲಸವನ್ನೂ ಮಾಡಲಿಲ್ಲ. ಅವಕಾಶವಾದಾಗಲೆಲ್ಲಾ ನನಗೆ ಧರ್ಮಮಾರ್ಗವನ್ನು ಬೋಧಿಸಿ, ನನ್ನಿಂದ ಅನೇಕ ದೇವತಾಸೇವೆಗಳನ್ನು ಮಾಡಿಸಿದನು. ನನ್ನ ಸುಕೃತ ವಿಶೇಷದಿಂದ ಪುತ್ರಸಂತಾನವಾಯಿತು. ಅವನ ಉಪನಯನವನ್ನೂ ಕಣ್ಣಿಂದ ನೋಡಿದೆನು. ನನಗಾಗಬೇಕಾದುದೆಲ್ಲವೂ ಆಯಿತು. ಇಹಜನ್ಮದ ವ್ಯಾಪಾರ ಮುಗಿಯಿತು. ಪತಿಯು ಸನ್ಯಾಸಿಯಾದ ಮೇಲೆ ನನ್ನ ದೇಹದ ಮೇಲಣ ಪೂರ್ಣಾಧಿಕಾರವು ನನಗೇ ಬರುವುದು. ಅನಂತರ ಮನಸ್ಸಿಗೆ ಬಂದಂತೆ ಮಾಡಿಕೊಂಡು ಬಿಡಬಹುದು; ಎಂದು ಮೊದಲಾಗಿ ಯೋಚಿಸಿದಳು.

ಆಚಾರ್ಯನು ಹೆಂಡತಿಯೇನೆನ್ನುವಳೋ ನೋಡೋಣವೆಂದು ಸುಮ್ಮನೆ ಕುಳಿತಿದ್ದನು. ಸರಸ್ವತಿಯು ತನ್ನ ಅಭಿಪ್ರಾಯವನ್ನು ಮತ್ತೆ ತಿಳಿಸಲಿಲ್ಲ. ವ್ಯಸನವನ್ನೂ ತೋರ್ಪಡಿಸಲಿಲ್ಲ. ತಮ್ಮ ಚಿತ್ತವೆಂದು ಮಾತ್ರ ಹೇಳಿ ಬಿಟ್ಟಳು.

ಬೆಳಗಾಗುತ್ತಲ್ಲೂ ಆಚಾರ್ಯನು ಸ್ನಾನ ಪೂಜೆಗಳನ್ನು ಮುಗಿಸಿ ಸ್ವಾಮಿಗಳ ಬಳಿಗೆ ಬಂದನು. ರಾತ್ರಿಯಾದ ಸ್ವಪ್ನವನ್ನೂ ಸರಸ್ವತಿಯು ಮನನೊಂದು ಕೊಟ್ಟ ಒಪ್ಪಿಗೆಯನ್ನೂ ವಿಜ್ಞಾಪಿಸಿದನು.

ಅಲ್ಲಿದ್ದವರು ಈ ಸರಸ್ವತಿಯ ಮನಸ್ಸು ನೋಯುದಿದ್ದರೆ ಆ ಸರಸ್ವತಿಯು ಹೇಗೆ ಪ್ರಸನ್ನಳಾಗಬೇಕು? ಈ ಸರಸ್ವತಿಯು ಅಶನ ವಸನಗಳಿಗೆ ವ್ಯಸನ ಬರದಂತೆ ಮಾಡಿದರಾಯಿತೆಂದು ಸಮಯೋಚಿತವಾಗಿ ಹೇಳಿಬಿಟ್ಟರು.

ಸ್ವಾಮಿಗಳಿಗೇನೋ ಪರಮಾನಂದವಾಯಿತು. ಮಠದಲ್ಲಿ ಪ್ರಯಾಣ ಸಿದ್ಧತೆಯ ಗಡಿಬಿಡಿಗಳಾದವು. ತಂಜಾವೂರಿಗೆ ಸಂಸ್ಥಾನ ದಿಗ್ವಿಜಯವಾಗುವುದೆಂದು ವರ್ತಮಾನವಾಯಿತು. ಆಚಾರ್ಯನ ಆಶ್ರಮ ವಿಚಾರ ಎಲ್ಲರಿಗೂ ತಿಳಿಯಲಿಲ್ಲ. ಸ್ವಾಮಿಗಳು ಆಚಾರ್ಯನನ್ನು ಕರೆದು ಮುಂದಿನ ಕಾರ್ಯಗಳು ತಂಜಾವೂರಿನಲ್ಲಿ ನಡೆಯುವುವೆಂದು ಹೇಳಿದರು.

ಆಚಾರ್ಯನು ಅಣ್ಣನೊಡನೆ ತನಗೆ ಸ್ವಾಮಿಗಳು ಆಶ್ರಮಕೊಡಬೇಕೆಂದಿರುವ ಸಂಗತಿಯನ್ನು ತಿಳಿಸಿದನು ಸರಸ್ವತಿಯನ್ನೂ ಲಕ್ಷ್ಮೀನಾರಾಯಣನನ್ನೂ ಭುವನಗಿರಿಗೆ ಕರೆದುಕೊಂಡು ಹೋಗುವಂತೆ ಒಪ್ಪಿಸಿದನು. ನಾಲ್ಕಾರು ದಿನಗಳಲ್ಲಿ ಗುರುರಾಜಾಚಾರ್ಯನ ಪ್ರಯಾಣ ಸಿದ್ಧವಾಯಿತು. ಆಚಾರ್ಯನು ಎಲ್ಲರನ್ನೂ ಕೆಲವು ದೂರ ಸಾಗಕಳುಹಿಸ ಬಂದನು ಸರಸ್ವತಿಯು ಪತಿದೇವನಿಗೆ ಕಡೆಯ ನಮಸ್ಕಾರ ಮಾಡಿ, ಕಂಬನಿದುಂಬಿದವಳಾಗಿ,—"ನಾಥಾ! ನನ್ನ ಇಹಲೋಕದ ಭಾರವಹಿಸಿ ಕಾಪಾಡಿದಂತೆ ಪರಗತಿಯನ್ನೂ ತಾವೇ ಸಾಧಿಸಿಕೊಡಬೇಕೆ"ಂದು ಗಟ್ಟಿಯಾಗಿ ಪಾದಗಳನ್ನು ಹಿಡಿದು ಅತ್ತುಬಿಟ್ಟಳು.

ಆಚಾರ್ಯನೂ ಆಕೆಯ ತಲೆಯ ಮೇಲೆ ಕೈಯಿಟ್ಟು—ಗದ್ಗದ ಕಂಠದಿಂದ—ಆಗಲಿ—ಎಂದು, ಎಷ್ಟು ತಡೆದರೂ ಮಿತಿಮೀರಿ ಬರಲು ತಾನೂ ಅತ್ತುಬಿಟ್ಟನು.

ಇತ್ತ ಈ ದಂಪತಿಗಳ, ಈ ದುಸ್ಥಿತಿಯಲ್ಲಿ, ಹಿರಿಯತನದ ಪಟ್ಟಕಟ್ಟಿಕೊಂಡು ಸಮಾಧಾನ ಹೇಳುವುದಕ್ಕೆ ಬಂದ ಹೆಂಗರುಳಿನ ಗುರುರಾಜಾಚಾರ್ಯನಿಗಾದರೋ—ಒಂದು ಕಡೆ, ತನ್ನ ವೆಂಕಣ್ಣನಿಗೆ ಜಗದ್ಗುರು ಪದವಿಯನ್ನು ಸ್ವಾಮಿಗಳವರು ಪರಮಾನುಗ್ರಹ ಮಾಡುವರೆಂಬ ಅತಿಶಯಾನಂದದಿಂದ ಅವನ ಮುಖ ನೋಡಿದಾಗೆಲ್ಲಾ ಉಬ್ಬಿ ಉಬ್ಬಿ ಬರುತ್ತಿರುವ ಪ್ರೇಮಾಶ್ರುಗಳು; ಮತ್ತೊಂದು ಕಡೆ, ಹೆತ್ತ ಮಗಳಿಗಿಂತ ಹೆಚ್ಚಿನ ಪ್ರೇಮಕ್ಕೆ ಪಾತ್ರಳಾದ ಸರಸ್ವತಿಯ ಹೃದಯ ವಿದಾರಕವಾದ ಪ್ರಲಾಪವನ್ನು ನೋಡಿ, ನೇತ್ರಗಳನ್ನು

ಭೇದಿಸಿಕೊಂಡು ಮೇರೆದಪ್ಪಿ ಧಾರೆಯಾಗಿ ಹರಿವ ದುಃಖಾಶ್ರುಗಳು; ಈ ಎರಡರ ಹೊಡೆತದಲ್ಲಿ, ತನ್ನ ದೇಹದಲ್ಲಿನ ತನ್ನ ಇಂದ್ರಿಯಗಳೂ ತನ್ನ ಪ್ರಾಣಗಳೂ ತನ್ನ ದೇಹದಲ್ಲೇ ಅಂಟಿರುವುವೋ ಇಲ್ಲವೆ ಅಂತರಾಳದಲ್ಲಿದ್ದು, ತನ್ನ ನಾದಿನಿಯ ಪ್ರೇಮರೂಪದಿಂದ ತನ್ನನ್ನು ಮೋಹಗೊಳಿಸುತ್ತಿರುವವೋ ಎಂಬಂತೆ ಭಾಸವಾಗುತ್ತಿತ್ತು.

ಅಷ್ಟಾದರೂ ಗುರುರಾಜನು ಎಷ್ಟೋ ಹೊತ್ತಿನಮೇಲೆ ಪುರುಷ ಸ್ವಭಾವದ ಪೌರುಷ್ಯದ ಸೋಗಿನಿಂದ ತತ್ಕಾಲದಲ್ಲಾಡಬೇಕಾದ ಒಣ ಸಮಾಧಾನ ವಾಕ್ಯಗಳನ್ನಾಡಿ, ಬಹು ಪ್ರಯತ್ನದಿಂದ ಸರಸ್ವತಿಯನ್ನು ಬಂಡಿಯಮೇಲೆ ಕೂಡಿಸಿದನು.

ಅಷ್ಟೇಸಾಕೆಂದು ಕಾದಿದ್ದ ಬಂಡಿಯವನು ಎತ್ತುಗಳನ್ನು ಚಮಕಾಯಿಸಲು, ದಾರಿಸಾಗಿತು.

ಆಚಾರ್ಯನು ಅಣ್ಣ ಅತ್ತಿಗೆಯರಿಗೆ ದೂರದಿಂದಲೇ ಮತ್ತೆ ನಮಸ್ಕರಿಸಿ ಹಿಂತಿರುಗಿ ಮಠಕ್ಕೆ ಬಂದನು.





ಅಘಂದ್ರಾವಯತೇಯಸ್ಮಾತ್
ವೇಂಕಾರೋವಾಂಛಿತಪ್ರದಃ
ರಾಘವೇಂದ್ರಯತಿಸ್ತಸ್ಮಾತ್
ಲೋಕೇಖ್ಯಾತಿರ್ಭವಿಷ್ಯತಿ

# ೬. ಸನ್ಯಾಸ.



ತಂಜಾವೂರಲ್ಲಿ ಮಹಾರಾಜನು ಸ್ವಾಮಿಗಳ ಸ್ವಾಗತ ಸಲಕರಣೆಯನ್ನು ಎಂದಿಗಿಂತ ಅಟ್ಟಹಾಸದಿಂದ ಮಾಡಿಸಿದ್ದನು. ಸಕಲ ಮರ್ಯಾದೆಗಳೊಡನೆ ರಾಜ ಪ್ರತಿನಿಧಿಗಳೂ ಆಸ್ಥಾನದ ಮಹಾ ವಿದ್ವಾಂಸರುಗಳೂ ಅಶೇಷ ವೈದಿಕ ಲೌಕಿಕ ಮಹಾಜನಗಳೂ ಸ್ವಾಮಿಗಳು ಬರುವ ಮಾರ್ಗದಲ್ಲಿ ಕಾದಿದ್ದು ಉತ್ಸವದಿಂದ ಕರೆತಂದು ಮೊದಲೇ ಸಿದ್ಧವಾಗಿದ್ದ ಬಿಡಾರದಲ್ಲಿಳಿಸಿದರು. ಮಹಾರಾಜನು ಗುರುದರ್ಶನದಿಂದ ಧನ್ಯನಾಗಿ ಸೇವೆಗಳನ್ನೊಪ್ಪಿಸಿದನು. ಒಂದೆರಡು ದಿವಸ ಕಳೆಯಲು ಸಮಯವರಿತು ಸ್ವಾಮಿಗಳು ಮಹಾರಾಜನೊಡನೆ ತಮ್ಮ ಕಾಲ ಸಮೀಪಿಸಿತೆಂತಲೂ, ತಮ್ಮ ಸ್ಥಾನದಲ್ಲಿ ಮಹಾಭಾಷ್ಯ ಪರಿಮಳ ವೆಂಕಟಭಟ್ಟಾಚಾರ್ಯರಿಗೆ , ಆಶ್ರಮಕೊಟ್ಟು ಪಟ್ಟಾಭಿಷೇಕ ಮಾಡುವೆವೆಂತಲೂ, ಸಂಸ್ಥಾನದಭಿಮಾನವು ಮಹಾರಾಜನಿಗೆ ಸೇರಿದ್ದೆಂತಲೂ ತಿಳಿಸಿದರು. ಕಾಲ ಸಾಮೀಪ್ಯದ ವಿಷಯದಲ್ಲಿ ಸ್ವಾಮಿಗಳಾಡಿದ ಮಾತಿನಿಂದ ಮಹಾರಾಜನಿಗೆ ಖೇದವಾಯಿತು. ಕೇವಲ ಗಾಂಭೀರ್ಯದಿಂದ ಮನೋಭಾವವನ್ನು ತೋರ್ಪಡಿಸದೆ ತನ್ನಿಂದಾಗಬೇಕಾದುದೆಲ್ಲವೂ ಸಿದ್ಧವಾಗಿದೆಯೆಂದು ನಮಸ್ಕರಿಸಿ ಅರಮನೆಗೆ ಬಂದನು.

ಪರಿಮಳಾಚಾರ್ಯರಿಗೆ ಆಶ್ರಮವಾಗುವುದೆಂಬ ವರ್ತಮಾನವು ದೇಶದಲ್ಲೆಲ್ಲಾ ಪ್ರಚಾರವಾಯಿತು. ಮಹಾಪೀಠಕ್ಕೆ ತಕ್ಕವರನ್ನೇ ಆರಿಸಿರುವರೆಂಬ ಸಂತೋಷದಿಂದ ವಿದ್ವಜ್ಜನಗಳು ಬಂದು ನೇರಿದರು. ಮಧ್ಯಾಹ್ನ ಕಾಲದಲ್ಲಿ ನಿತ್ಯವೂ ಪದ್ಧತಿಯಂತೆ ವಾಕ್ಯಾರ್ಥಗಳು ನಡೆದವು.

ಇತ್ತ ಪರಿಮಳಾಚಾರ್ಯರಿಂದ ನಡೆಯಬೇಕಾದ ಆತ್ಮಶ್ರಾದ್ಧಾದಿ ಕರ್ಮಗಳು ಪೂರೈಸಿದವು. ಶಾಲಿವಾಹನ ಶಕ ೧೫೪೩ನೇ ರುಧಿರೋದ್ಗಾರಿ ಸಂ|| ದ ಫಾಲ್ಗುಣ ಶು|| ೨ ಕ್ರಮಸನ್ಯಾಸವೂ, **ಶ್ರೀ ರಾಘವೇಂದ್ರತೀರ್ಥ**ರೆಂಬ ನಾಮಕರಣವೂ, ಸಕಲ ರಾಜಚಿನ್ಹೆಗಳಸಹಿತ ಮಹಾ ಪಟ್ಟಾಭಿಷೇಕವೂ ಆಯಿತು. ಮಹಾರಾಜನೇ ಮೊದಲಾಗಿ ಸಕಲರೂ ಕಾಣಿಕೆಗಳನ್ನೊಪ್ಪಿಸಿದರು. ಸುಧೀಂದ್ರರು ನೂತನ ಗುರುಗಳ ಕೈಯಿಂದ ಮಹಾರಾಜನಿಗೆ

ಯೋಗ್ಯವಾದ ರಾಜಮರ್ಯಾದೆಯನ್ನು ಮಾಡಿಸಿದರು. ಸಭೆಯನ್ನಲಂಕರಿಸಿದ್ದ ವಿದ್ವಾಂಸರು ಉಭಯ ಗುರುಗಳಮೇಲೂ ಕವಿತಾವೃಷ್ಟಿಯನ್ನೇ ಕರೆದರು. ಹರಿದಾಸರು ಸುಸ್ವರದಿಂದ ಗಾನಮಾಡಿದರು ಅನ್ನದಾನ, ವಿದ್ವತ್ಸಂಭಾವನೆ ಭೂರಿದಕ್ಷಿಣೆಗಳು ಸೂರೆಯಾದವು. ಈ ಮಹೋತ್ಸವವನ್ನು ಮುಗಿಸಿಕೊಂಡು ಸ್ವಾಮಿಗಳು ಕುಂಭಕೋಣೆಗೆ ಬಿಜಯಂಗೈದರು.

ಪರಿಮಳಾಚಾರ್ಯರು ಪಟ್ಟಕ್ಕೆ ಬಂದ ವಿಷಯದಲ್ಲಿ ಕುಂಭಕೋಣೆಯ ಪ್ರಜೆಗಳಿಲ್ಲರಿಗೂ ಅತ್ಯಂತ ಸಂತೋಷವಾಗಿತ್ತು. ಆದ್ದರಿಂದವರು ಮತ್ತಷ್ಟು ವಿಭವದಿಂದ ಸ್ವಾಮಿಗಳನ್ನು ಇದಿರ್ಗೊಂಡರು. ಒಬ್ಬೊಬ್ಬರೂ ಚಿಕ್ಕ ಸ್ವಾಮಿಗಳ ಗುಣಕಥನಮಾಡುತ್ತಿದ್ದರು. ಮತ್ತೆ ಕೆಲವರು, ಏನಾಶ್ಚರ್ಯ! "ಈತನು ನಿನ್ನೆ ಮೊನ್ನೆಯವರೆಗೂ ಮಾಡಿಕೊಂಡ ಹೆಂಡತಿಯೊಬ್ಬಳಿಗೆ ಸಂಪಾದಿಸಿ ತಂದುಹಾಕಲಾರದಷ್ಟು ಹುಟ್ಟುದರಿದ್ರನಾಗಿದ್ದನು. ಅನ್ನಕ್ಕೂ ಗತಿಯಿಲ್ಲದೆ ಮಠದೂಟಕ್ಕೆ ಸೇರಿಕೊಂಡಿದ್ದನು. ಒಂದಾದರೂ ಗಟ್ಟಿ ಬಟ್ಟೆಯಿಲ್ಲದೆ ಹರಕು ಚಿಂದಿಗಳನ್ನು ಕಟ್ಟಿಕೊಂಡು ಅಂಡಲೆದನು. ಈ ವೆಂಕಟಭಟ್ಟನಿಗೆ ಲಕ್ಷಾವಧಿ ಶಿಷ್ಯರಮೇಲೂ ರಾಜಾಧಿರಾಜರಮೇಲೂ ಧರ್ಮಾಧಿಕಾರ ಮಾಡುವ ಸಂಸ್ಥಾನಾಧಿಪತ್ಯವೇ? ಸಕಲ ಬಿರುದಾವಳಿಗಳನ್ನು ಹಿಡಿದುಕೊಂಡು, ರಾಹುಕೇತುಗಳನ್ನು ಬಂಧಿಸಿ ಐರಾವತವನ್ನೇರಿ ಬರುತ್ತಿರುವ ಮಹೇಂದ್ರನಂತೆ, ಸುಧೀಂದ್ರರ ಜೊತೆಯಲ್ಲಿ ಕೂತು ಬರುವ ಈತನಿಗೆ ರಾಘವೇಂದ್ರ ಪದವಿಯೇ? ಮೊಹರಿ ಮೃದಂಗಾದಿವಾದ್ಯ ವೈಭವಗಳೇನು! ಭೋರ್ಗರೆವ ರಾಹುಕೇತು ವಾದ್ಯಗಳೇನು! ಹೊಗಳುಬಂಟರ ಪರಾಕೇನು! ಇದಲ್ಲವೇ ದೈವಾನುಗ್ರಹ! ಇದಲ್ಲವೇ ಸದ್ಗುರು ಕಟಾಕ್ಷ! ಇದಲ್ಲವೇ ಜನ್ಮಿಸಿದುದಕ್ಕೆ ಸಾರ್ಥಕ!" ಎಂದು ಆಡಿಕೊಳ್ಳುತ್ತಿದ್ದರು.

ದೇಶದೇಶದಲ್ಲೂ ವೀಣಾವೆಂಕಟಭಟ್ಟರಿಗಾಶ್ರಮವಾಯಿತೆಂದು ಪ್ರಸಿದ್ಧವಾಯಿತು. ಅವರೇ ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳೆಂಬಭಿದಾನದಿಂದ ಧರ್ಮಸಾಮ್ರಾಜ್ಯವನ್ನು ಪರಿಪಾಲಿಸುವರೆಂದೂ ಪ್ರಸಿದ್ಧವಾಯಿತು.

ಸುಧೀಂದ್ರತೀರ್ಥರು ಶಿಷ್ಯರಲ್ಲಿ ಪ್ರಸನ್ನರಾಗಿ ತಮಗೆ ವಿಜಯೀಂದ್ರರಿಂದುಪದಿಷ್ಟವಾಗಿದ್ದ ಚತುಷ್ಷಷ್ಟಿ ಕಲೆಗಳನ್ನುಪದೇಶಮಾಡಿದರು.

## ಚತುಷ್ಷಷ್ಟಿ ಕಲೆಗಳು.

೧. ಗೀತ
೨. ವಾದ್ಯ
೩. ನೃತ್ಯ
೪. ಅಭಿನಯ
೫. ಆಲೇಖವಿಶೇಷಕಛೇದ್ಯ
೬. ತಂಡುಲ
೭. ಕುಸುಮಬಲಿಪ್ರಕಾರ
೮. ಪುಷ್ಪಾಸ್ತರ
೯. ದಶನವಸನಾಂಗರಾಗ
೧೦. ಮಣಿಭೂಮಿಕಾಕರ್ಮ
೧೧. ಶಯನರಚನಾ
೧೨. ಉದಕವಾದ್ಯ
೧೩. ನೇಪಥ್ಯಯೋಗ
೧೪. ಉದಕಘಾತ
೧೫. ಚಿತ್ರಯೋಗ
೧೬. ಮಾಲ್ಯಗ್ರಥನವಿಕಲ್ಪ
೧೭. ಕರ್ಣಪತ್ರಭಂಗ
೧೮. ಪಾನಕರಸರಾಗಾಸವ ಯೋಜನ
೧೯. ಸೂಚೀವಾನಕರ್ಮ
೨೦. ಸೂತ್ರಕ್ರೀಡಾ
೨೧. ಸುಗಂಧಯುಕ್ತಿ
೨೨. ವೀಣಾಡಮರುಕವಾದ್ಯ
೨೩. ಪ್ರಹೇಲಿಕಾಕೂಟವಾಣಿಜ್ಞಾನ
೨೪ ಪ್ರತಿಮಾಲಾ
೨೫. ದುರ್ವಚಕಯೋಗ
೨೬. ಪುಸ್ತಕವಾಚನ
೨೭. ನಾಟಕಾಖ್ಯಾಯಿಕಾ
೨೮. ಕಾವ್ಯಸಮಸ್ಯಾಪೂರಣ
೨೯. ಪಟಿಕಾವೇತ್ರಬಾಣವಿಕಲ್ಪ
೩೦ ಪುಷ್ಪವಾಟಿಕಾನಿಮಿತ್ತಜ್ಞಾನ
೩೧. ಯಂತ್ರಮಾತೃಕಾಧಾರಣ, ಮಾತೃಕಾಸಂಪಾಠ್ಯ
೩೨. ಮಾನಸೀಕಾಯಕ್ರಿಯಾ
೩೩. ಛಲಿತಯೋಗ
೩೪. ತರ್ಕಕರ್ಮ
೩೫. ತಕ್ಷಣ
೩೬. ವಾಸ್ತು
೩೭. ರೌಪ್ಯರತ್ನಪರೀಕ್ಷಾ
೩೮. ಧಾತುವಾದ
೩೯. ಮಣಿರಾಗಜ್ಞಾನ
೪೦. ಬಾಲಕ್ರೀಡನ
೪೧. ವೃಕ್ಷಾಯುರ್ವೇದಯೋಗ
೪೨. ಮೇಷಕುಕ್ಕುಟಲಾವಕ ಯುದ್ಧವಿಧಿ
೪೩. ಶುಕಸಾರಿಕಾಪ್ರಲಾಪ
೪೪. ಉತ್ಸಾಹನ
೪೫. ಕೇಶಮಾರ್ಜನಕೌಶಲ
೪೬. ಅಭಿದಾನಕೋಶ
೪೭. ಶೇಖರಾಪೀಡಯೋಜನ
೪೮. ಭೂಷಣಯೋಜನ
೪೯. ಐಂದ್ರಜಾಲ

೫೦. ಕ್ರೌಂಚವಾರಣಯೋಗ
೫೧. ಹಸ್ತಲಾಘವ
೫೨. ಚಿತ್ರಶಾಖಾಪೂರ್ಣ ಭಕ್ತ ವಿಕಾರಕ್ರಿಯಾ
೫೩. ಅಕ್ಷರಮುಷ್ಟಿಕಾಕಥನ
೫೪. ದೇಶಭಾಷಾಜ್ಞಾನ
೫೫. ಛಂದೋಜ್ಞಾನ
೫೬. ಕ್ರಿಯಾವಿಕಲ್ಪ
೫೭. ವಸ್ತ್ರಗೋಪನ
೫೮. ದ್ಯೂತವಿಶೇಷ
೫೯. ಆಕರ್ಷಕಕ್ರೀಡಾ
೬೦. ಮ್ಲೇಂಛಿತವಿಕಲ್ಪ
೬೧. ವೈನಾಯಿಕವಿದ್ಯಾಜ್ಞಾನ
೬೨. ವೈಜಯಿಕವಿದ್ಯಾಜ್ಞಾನ
೬೩. ವೈತಾಲಿಕವಿದ್ಯಾಜ್ಞಾನ
೬೪. ಆಕರಜ್ಞಾನ

ಈ ರೀತಿ ಚತುಷ್ಷಷ್ಟಿಕಲೆಗಳಿದ್ದವೆಂದು ಕೇಳುತ್ತೇವೆ. ಈಗ ಅವುಗಳ ಮುಕ್ಕಾಲುಪಾಲು ವಿದ್ಯೆಗಳ ಗುರುತು ಸಹ ಇಲ್ಲ. ವಿದ್ಯೆಗಳ ಹೆಸರಾದರೂ ಸರಿಯಾಗಿದೆಯೋ ಇಲ್ಲವೋ ಎಂಬ ಸಂಶಯ ನಮಗಿದೆ. ನಮ್ಮಲ್ಲಿದ್ದ ವಿದ್ಯೆಗಳು ಖಿಲವಾಗಲು ಮೊದಲಾಗಿ ಐದು ಸಾವಿರ ವರ್ಷಗಳಾದುವು. ಎಲ್ಲಕ್ಕಿಂತ ಈಗಿನ ದೃಷ್ಟಿಯಿಂದ ನೋಡಿದರೆ ಮುಖ್ಯವಾದುದು ಯುದ್ಧವಿದ್ಯೆ. ಇದು ಕುರುಕ್ಷೇತ್ರದಲ್ಲಿ ನಡೆದ ಮಹಾಭಾರತ ಯುದ್ಧದಿಂದ ಕೋಟ್ಯವಧಿ ಜನರು ಮೃತರಾಗಲು ಅವರೊಡನೆಯೇ ಹೊರಟುಹೋಯಿತು. ಆ ಕಾಲದಲ್ಲಿ ಯುದ್ಧದಿಂದ ಕಳೆದುಳಿದವರೆಂದರೆ–ಹೆಂಗಸರು, ಹುಡುಗರು, ಮುದುಕರು. ರಣವಿದ್ಯದ ಜೊತೆಯಲ್ಲಿ ಶಸ್ತ್ರಚಿಕಿತ್ಸೆಯೂ ಹೋಯಿತು. ಭಾರತಯುದ್ಧಕ್ಕಿಂತ ಹಿಂದಿನಿಂದಲೂ ಅನೇಕ ಕಲಾವಿದರು ಹಿಂದುಸ್ಥಾನವನ್ನು ಬಿಟ್ಟು ಬೇರೆಬೇರೆ ದೇಶಗಳಲ್ಲಿ ನೆಲೆಸುತ್ತಬಂದರು. ಸ್ಕಂಧನಾಭಿಗಳೆಂಬ ಕ್ಷತ್ರಿಯ ವಂಶದವರು ನೆಲೆಸಿದ ಪ್ರದೇಶವು ಈಗ ಸ್ಕಾಂಡಿನೇವಿಯವಾಯಿತು. ಬಂಗಾಳದ ಶರ್ಮ ಬಿರುದಾಂಕಿತ ಬ್ರಾಹ್ಮಣರು ವಸತಿಮಾಡಿ 'ಜರ್ಮ'ರಾದರು, ಮತ್ತೆ ಕೆಲವರು ಮಕ್ಷಿಕ, ಸುರೂಪ, ಯವ, ಕಾಂಭೋಜ ದೇಶಗಳಲ್ಲಿ ನೆಲೆಸಿದರು. ಪ್ರಪಂಚದ ಎಲ್ಲಾ ಭಾಗಗಳಿಗೂ ಭರತಖಂಡದವರೇ ಹೋಗಿ ವಸತಿ ಮಾಡಿದರು. ಹೊರಗಿನಿಂದ ಭರತಖಂಡಕ್ಕೆ ಬಂದು ಜನರು ವಸತಿಮಾಡಿದರೆಂಬುವದು ತಪ್ಪಭಿಪ್ರಾಯ. ಈ ವಿಷಯದಲ್ಲಿ ಕರ್ನಲ" ಟಾಡ್ ಸಾಹೇಬನು ತನ್ನ 'ರಾಜಸ್ಥಾನ" ಗ್ರಂಥದಲ್ಲಿ ಶರ್ಮ ಎಂಬುದು ಜರ್ಮ ಎಂಬ ರೂಪಾಂತರವಾಯಿತೆಂದು ಹೇಳಿದ್ದಾನೆ. ಜರ್ಮನಿಯ ಪೂರ್ವೀಕರು ಮೊನ್ನೆ ಮೊನ್ನಿನವರೆಗೆ

ಬೆಳಗಾಗುತ್ತಲೇ ಎದ್ದು ಆಚಮನ ಮಾಡುತ್ತಿದ್ದುದೂ, ತಲೆಯಲ್ಲಿ ಸ್ವಲ್ಪ ಶಿಖೆಯನ್ನಿಟ್ಟುಕೊಳ್ಳುತ್ತಿದ್ದುದೂ ಬ್ರಾಹ್ಮಣ ಸಂಪ್ರದಾಯದ ಗುರುತೆಂದು ಹೇಳಿದ್ದಾನೆ. ಟಾಡನಮಾತು ಸತ್ಯವೆಂದು ವಿಲ್ಸನ್ ಮೊದಲಾದ ಇತಿಹಾಸ ಸಂಶೋಧಕರು ಅನುಮೋದಿಸಿದ್ದಾರೆ. ಇದೆಲ್ಲಾ ಹೇಗಾದರಿರಲಿ. ಹಾಡಿನ ತಟ್ಟೆಗಳಂಥಾ ತಲೆಗಳವರು ಹೇಗೆ ಬೇಕಾದರೂ ಟೀಕಿಸಲಿ. ಅಂಥವರ ಅಭಿಪ್ರಾಯಗಳಲ್ಲಿ ತಥ್ಯಾಂಶವಿದ್ದರೆ ಒಪ್ಪುವುದಕ್ಕೆ ನಮಗೇನೂ ಮತ್ಸರವಿಲ್ಲ.

ಪ್ರಕೃತ, ಭಾರತಾದಿ ಗ್ರಂಥಗಳಲ್ಲಿ ಹೇಳಿರುವಂತೆ ಅನೇಕ ವೀರ ಪುರುಷರು ತಮ್ಮ ರಣವಿದ್ಯಾ ಪಾಂಡಿತ್ಯದಿಂದ ಲಕ್ಷಾವಧಿ ಸೈನಿಕರೊಡನೆ ಒಬ್ಬೊಬ್ಬರೇ ಯುದ್ಧ ಮಾಡಿ ಗೆದ್ದರೆಂಬುದು ಈ ಕಾಲದ ನಮ್ಮವರಿಗೆ ಉತ್ಪ್ರೇಕ್ಷೆಯೆನ್ನುವಷ್ಟು ಬುದ್ಧಿ ದೌರ್ಬಲ್ಯವುಂಟಾಗಿರುವುದಕ್ಕೆ ವಿಷಾದವಾಗುತ್ತದೆ. ಅತ್ಯಂತ ನವನಾಗರಿಕ ಪ್ರಪಂಚವೆನ್ನುವ ಇವತ್ತಿನ ದಿವಸದಲ್ಲಿ ನಡೆದ ಯೂರೋಪು ಮಹಾಯುದ್ಧದಲ್ಲಿ ಪ್ರಚಾರಕ್ಕೆ ಬಂದ ಅಕ್ಷಯ ಬಾಣ, ವಾಯವ್ಯಾಸ್ತ್ರ, ವಾರುಣಾಸ್ತ್ರಗಳು ಭಾರತಕಾಲದಷ್ಟು ಸುಸ್ಥಿತಿಗೆ ಬಂದಿಲ್ಲ. ಎದುರಿಗೆ ನಿಂತಿದ್ದರೂ ಕಾಣಿಸಿಕೊಳ್ಳದಂತೆ ಮಾಯಾ ಯುದ್ಧಮಾಡುವುದೂ, ಶಬ್ದವೇದಿಯೂ ಈಗಿನವರಿಗೆ ಇನ್ನೂ ಗೊತ್ತಾಗಿಲ್ಲ ಇಂತಹ ರಣವಿದ್ಯೆಗಳು ಮುಳುಗಿಹೋದುದೇ ಭರತಖಂಡದ ಸರ್ವನಾಶಕ್ಕೆ ಕಾರಣವಾಯಿತು ಸಂಖ್ಯೆಯಲ್ಲಿ ಕೋಟ್ಯವಧಿಯಿದ್ದರೂ ಶಸ್ತ್ರಪಾಣಿಗಳಾದ ಅಲ್ಪ ಸಂಖ್ಯಾಕ ಪರಕೀಯರಿಗೆ ಸೋತು ದಾಸರಾಗಬೇಕಾಯಿತು.

ಬೌದ್ಧರ ಕಾಲದಲ್ಲಿ ಅನೇಕ ಮಂತ್ರತಂತ್ರ ವಿದ್ಯೆಗಳೂ ಪರಕಾಯ ಪ್ರವೇಶಾದಿ ಯೋಗಸಾಮರ್ಥ್ಯಗಳೂ ಕ್ಷೀಣದೆಶೆಗೆ ಬಂದವು.

ಮಹಮ್ಮದೀಯರು ಕಾಲಿಟ್ಟಮೇಲೆ ಮತದ್ವೇಷದಿಂದವರು ನಮ್ಮಲ್ಲಿದ್ದ ಪುಸ್ತಕ ಭಂಡಾರಗಳನ್ನು ನಾಶಮಾಡಿದರು. ದೇವಾಲಯಗಳನ್ನು ಚೂರು ಚೂರು ಮಾಡಿದರು. ಅವರ ಕಾಲದಲ್ಲಿ ಜನರು ಮಾನಪ್ರಾಣಗಳಿಂದುಳಿಯುವುದೇ ಕಷ್ಟವಾಯಿತು. ಅನೇಕ ವಿದ್ಯೆಗಳು ಮರೆತುಹೋದವು

ಮಹಮ್ಮದೀಯರ ಕಾಲದಲ್ಲವತರಿಸಿದ ಆಚಾರ್ಯ ಪುರುಷರಿಗೆ ಭಾರತೀಯರನ್ನು ಅನ್ಯ ಧರ್ಮಗಳನ್ನವಲಂಬಿಸಿ ಕೆಟ್ಟುಹೋಗದಂತೆ ತಡೆದಿಟ್ಟುಕೊಳ್ಳುವುದರಲ್ಲೇ ಸಾಕುಸಾಕಾಯಿತು. ಅವರು ವೇದಾಂತ ತತ್ವಗಳು ಮರೆತು

ಹೋಗದಂತೆ ದೊಡ್ಡ ಸಹಾಯಮಾಡಿದರು. ಆ ಮಹನೀಯರು ಬರೆದಿಟ್ಟಷ್ಟು ಗ್ರಂಥಗಳನ್ನು ವಿಚಾರಮಾಡುವವರೂ ಆಂಗ್ಲೇಯರ ಈ ಬಹದ್ದೂರೀ ದವಲತ್ತಿನಲ್ಲಿಲ್ಲದ ಹಾಗಾಯಿತು.

ಮಹಮ್ಮದೀಯರ ಕಾಲದಲ್ಲಿ ವಿದ್ಯೆಗಳೆಲ್ಲಾ ಖಿಲವಾಗುತ್ತಾ ಬಂದಿದ್ದರೂ ಅವುಗಳ ಕಡೆಯ ಗುರುತು ಬೀಜರೂಪವಾಗಿ ಉಳಿದಿತ್ತು. ಆಂಗ್ಲೇಯರು ಅವುಗಳನ್ನುದ್ಧರಿಸಿ ಕೀರ್ತಿವಂತರಾಗುವ ದೊಡ್ಡ ಮನಸ್ಸು ಮಾಡಲಿಲ್ಲ. ಸತ್ತ ಮಗುವಿಗೆ ಜಾತಕ ಬರೆದಂತೆ ಈಗ ಮಿಡುಕಿ ಫಲವಿಲ್ಲ ಉಳಿದಿರುವ ಕಲೆಗಳನ್ನಾದರೂ ನಮ್ಮವರು ಕಾಪಾಡಿಟ್ಟುಕೊಂಡರೆ ಸಾಕು. ಈ ಕಾಲದ ವಿದ್ಯೆಯು ಪ್ರಭುತ್ವದವರ ಕಾರ್ಯವನ್ನು ಸುಲಭವಾಗಿ ನಡೆಸುವ ಕಾರುಕೂನರನ್ನೊದಗಿಸುವುದಕ್ಕೆ ಮಾತ್ರ ಅನುಕೂಲವಾಗಿದೆ. ಆ ಕಾರುಕೂನಿಗೂ ಬಡಿದಾಟವಾಗುತ್ತಿರುವುದನ್ನು ನೋಡಿದರೆ ಭರತಖಂಡದ ಅವನತಿಯ ಪರಮಾವಧಿಯಾಯಿತೆಂದು ಕಣ್ಣೀರಿನಿಂದ ಉಲ್ಲೇಖಿಸಲು ಲಜ್ಜೆ ಬರುತ್ತದೆ. ಈಗಿನ ವಿದ್ಯೆದಿಂದ ನಮ್ಮ ಪೂರ್ವಿಕರ ಚರಿತ್ರೆಯಾಗಲಿ, ಅವರ ಅನ್ಯಾದೃಶ ಶಕ್ತಿಯಾಗಲಿ ತಿಳಿದುಬರುವುದಿಲ್ಲ. ನಮ್ಮವರೆಲ್ಲರೂ ಅಪ್ರಯೋಜಕರಾಗಿದ್ದರೆಂತಲೂ ಅನ್ಯರು ಬಂದು ನಮ್ಮನ್ನುದ್ಧರಿಸಿದರೆಂತಲೂ ಹೇಳಿಕೊಂಡಲ್ಲದೆ ಬಾಳಿಕೆಯಿಲ್ಲವೆನ್ನುವಷ್ಟು ದೈನ್ಯವನ್ನುಂಟುಮಾಡಿದೆ. ಅಂದಮೇಲೆ ಚತುಷ್ಷಷ್ಟಿ ಕಲೆಗಳೆಂದರೇನೋ ಯಾರಿಗೆ ಗೊತ್ತು ?

ವಿಜಯೀಂದ್ರರ ಸಮಕಾಲಿಕರಾಗಿದ್ದ ಅಪ್ಪಯ ದೀಕ್ಷಿತರು ದ್ವಿಷಷ್ಟಿ ಕಲೆಗಳನ್ನರಿತಿದ್ದರೆಂದು ಪ್ರಸಿದ್ಧಿಯಿದೆ. ವಿಜಯೀಂದ್ರರಿಂದೀಚತುಷ್ಷಷ್ಟಿ ಕಲೆಗಳು ಸುಧೀಂದ್ರರಿಗೂ, ಸುಧೀಂದ್ರರಿಂದ ರಾಘವೇಂದ್ರರಿಗೂ ಪರಂಪರೆಯಾಗಿ ಬಂದು ಯಾರಲ್ಲಿ ನಿಂತುಹೋದುವೋ ತಿಳಿದುಬರುವುದಿಲ್ಲ. ಆದರೆ ಕ್ರಿ॥ ೧೮೭೫ರ ಸುಮಾರಿನಲ್ಲಿ ಮುಕ್ತರಾದ ಸುರಪುರದ ಆನಂದದಾಸರು ರಾಘವೇಂದ್ರಸ್ವಾಮಿಗಳ ಭಕ್ತರಲ್ಲಿ ಪ್ರಸಿದ್ಧರಾಗಿದ್ದ ಎಂಟು ಮಂದಿ ಆಚಾರ್ಯರನ್ನು ಸ್ತೋತ್ರ ಮಾಡಿರುವ ಉದಯರಾಗದಲ್ಲಿ—"ಇಳೆಯೊಳು ಚೌಷಷ್ಟಿ ಕಳದಿನಿಪುಣರಾದ ಯಳಮೇಲಿ ಹಯಗ್ರೀವಾಚಾರ್ಯರ" ಎಂದು ಹೊಗಳಿರುವರು. ಈ ಪದದಲ್ಲಿ ಹೇಳಿರುವಂತೆ ಹಯಗ್ರೀವಾಚಾರ್ಯರು ಚತುಷ್ಷಷ್ಟಿ

ಕಲಾಕೋವಿದರಾಗಿದ್ದರೆ ರಾಘವೇಂದ್ರರಿಂದಲೇ ಪರಂಪರೆಯಾಗಿ ಬಂದಿರಬಹುದೆಂದು ತೋರುತ್ತದೆ.

ಆಂಗ್ಲೇಯರು ನಿಖಿಲಭಾರತ ಸಾಮ್ರಾಜರಾಗಿ ಎಂಭತ್ತು ವರ್ಷಗಳ ಮೇಲಾದವು. ಆಗಲೇ ಇವರು ಭರತಖಂಡದಲ್ಲಿರುವ ಕಲಾಕೌಶಲ್ಯಗಳನ್ನು ಪರೀಕ್ಷಿಸಿ ಸಂರಕ್ಷಿಸಿದ್ದರೆ ಆಚಂದ್ರಾರ್ಕವಾದ ಕೀರ್ತಿಯಿರುತ್ತಿತ್ತು.

ಈ ಲೌಕಿಕ ಪ್ರಸ್ತಾವನೆಯ ಬಿಸಿಬಿಸಿ ಮಾತುಗಳನ್ನಿಲ್ಲಿಗೇ ಬಿಟ್ಟು ನಮ್ಮ ಚರಿತ್ರ ಪುರುಷರ ಮಹಿಮೆಯೇನೆಂಬುದನ್ನು ವಿಚಾರಿಸೋಣ.



# ೭. ದುಃಖ ಪ್ರಸಂಗ

ರಾಘವೇಂದ್ರರು ಪೀಠಾರೋಹಣಮಾಡಿದಮೇಲೆ ಸುಧೀಂದ್ರರು ಕೆಲವು ತಿಂಗಳು ಮಾತ್ರ ಕುಂಭಕೋಣೆಯಲ್ಲಿದ್ದರು. ಇವರಿಗೆ ಆಶ್ರಮವಾದದ್ದು ಅತಿ ಬಾಲ್ಯದಲ್ಲಿ. ಇವರ ಪೂರ್ವಾಶ್ರಮದ ಹೆಸರು ನಾರಾಯಣಾಚಾರ್ಯರೆಂದು ಸುರೇಂದ್ರರೇ ಆಶ್ರಮ ಕೊಟ್ಟರೂ, ಅವರ ಆಜ್ಞೆಯಂತೆ ವಿಜಯೀಂದ್ರರು ತಮ್ಮನಂತರ ಇವರಿಗೆ ಸಂಸ್ಥಾನವನ್ನೊಪ್ಪಿಸಿದರು. ಆಶ್ರಮ ಸ್ವೀಕಾರ ಮಾಡಿ ೫೭ ವರ್ಷಗಳಷ್ಟು ಕಾಲವೂ ಸುಧೀಂದ್ರರು ವಿಜಯೀಂದ್ರರ ಶಿಷ್ಯರಾಗಿ ಚತುಷ್ಷಷ್ಟ್ಯಾದಿ ಸಕಲ ಕಲೆಗಳಲ್ಲೂ ಪ್ರವೀಣರೆನಿಸಿದರು ಸಂಸ್ಕೃತಕಾವ್ಯ ನಾಟಕಾಲಂಕಾರ ಗ್ರಂಥಗಳನ್ನು ರಚಿಸುವುದರಲ್ಲೂ, ಮಾತುಮಾತಿಗೆ ಛಂದೋಬದ್ಧವಾದ ಶ್ಲೋಕಗಳನ್ನು ರಚಿಸುವುದರಲ್ಲೂ, ಇವರಿಗೆ ಪರಮಾದರವಿತ್ತು. ವಿಜಯೀಂದ್ರರ ಬಳಿಗೆ ಸಾಹಿತ್ಯ ಪ್ರೇಮಿಗಳು ಬಂದರೆ ಅವರು ತಮ್ಮ ಶಿಷ್ಯ ಸುಧೀಂದ್ರರನ್ನು ತೋರಿಸುತ್ತಿದ್ದರು. ಇವರು ರಚಿಸಿರಬಹುದಾದ ಗ್ರಂಥಗಳಲ್ಲಿ ಅಲಂಕಾರ ಮಂಜರಿಯೂ ಸುಭದ್ರಾಪರಿಣಯ ನಾಟಕವೂ ಉಪಲಬ್ಧವಾಗಿವೆ. ಈ ಗ್ರಂಥಗಳು ಇನ್ನೂ ಶಿಥಿಲ ಹಸ್ತಪತ್ರಿಕೆಯಲ್ಲೇ ಇದ್ದು ಮುದ್ರಣವಾಗದಿರುವುದು ಮಾತ್ರ ದುರ್ದೈವವೆನಿಸಿದೆ. ಸಂಸ್ಥಾನಾಧಿಪತ್ಯ ದೊರೆತಾಗ ಇವರಿಗೆ ೬೭ಕ್ಕೆ ಮೇಲ್ಪಟ್ಟ ವಯಸ್ಸಾಗಿತ್ತು. ಈ ಮಹನೀಯರ ವಿದ್ಯಾಪಾಂಡಿತ್ಯಕ್ಕೆ ಮೆಚ್ಚಿ ತಂಜಾವೂರಿನ ರಘುನಾಥ ಭೂಪಾಲನು ಇವರಿಗೆ ಕನಕಾಭಿಷೇಕಮಾಡಿದನು. ಪಾಠಪ್ರವಚನಗಳಲ್ಲಿದ್ದ ಆದರ ಇವರಿಗೆ ದೇಶ ಪರ್ಯಟನದಲ್ಲಿರಲಿಲ್ಲ ಶ್ರೀ ರಾಘವೇಂದ್ರರಿಗೆ ಸಂಸ್ಥಾನಾಧಿಪತ್ಯ ವಹಿಸುತ್ತಲೇ ತಮಗೆ ಆಶ್ರಮ ಗುರುಗಳಾದ ಸುರೇಂದ್ರರೂ ವ್ಯಾಸರಾಜಾದಿ ಪ್ರಭೃತಿಗಳೂ ಬೃಂದಾವನಸ್ಥರಾಗಿರುವ ಸಾನ್ನಿಧ್ಯದಲ್ಲಿ ತಾವೂ ಬೃಂದಾವನಸ್ಥರಾಗಬೇಕೆಂಬ ಅಭಿಲಾಷೆ ಇವರಿಗೆ ಬಹಳವಾಯಿತು ಮಿತಪರಿವಾರದಿಂದ ಪ್ರಯಾಣಮಾಡಿ ಕೆಲವುಕಾಲ ವಿರೂಪಾಕ್ಷನ ಸಾನ್ನಿಧ್ಯದಿಂದ ಪವಿತ್ರವಾದ ಹಂಪಿಯಲ್ಲೂ ಅನಂತರ ಯಂತ್ರೋದ್ಧಾರಕನ ಸನ್ನಿಧಿಯಲ್ಲೂ ಇವರು ತಪಸ್ಸು

ಮಾಡಿದರು. ಕಡೆಗೆ ತಮ್ಮ ಅಂತಿಮಕಾಲವನ್ನು ತಿಳಿದು ತುಂಗಭದ್ರೆಯ ನಡುಗಡ್ಡೆಯಲ್ಲಿರುವ ಬೃಂದಾವನ ಕ್ಷೇತ್ರಕ್ಕೆ ಬಂದು ಅಲ್ಲೇ ಬೃಂದಾವನಸ್ಥ ರಾದರು.

## ದುರ್ಮರಣ

ಸರಸ್ವತಿಯು ಮೊದಲಿನಿಂದಲೂ ವಿರಕ್ತಸ್ವಭಾವದವಳಿದ್ದಳು. ಕೇವಲ ಪತಿಸೇವೆಗೇ ತನ್ನ ಸೃಷ್ಟಿಯೆಂದೂ, ದೇಹಧಾರಣೆಗಾಗಿ ಯಾವಾಗಲಾದ ರೊಂದಿಷ್ಟು ಆಹಾರವನ್ನು ತಿಂದರಾಯಿತೆಂದೂ ತಿಳಿದಿದ್ದಳು. ಭುವನಗಿರಿಗೆ ಹೋದಮೇಲೆ ಆಕೆಯ ವಿಚಾರವನ್ನು ಹೇಳುವುದೇನು ? ಗುರುರಾಜಾಚಾರ್ಯ ನಿಗೂ ಅವನ ಮನೆಯವರಿಗೂ ಆಚಾರ್ಯನ ಸನ್ಯಾಸವಾರ್ತೆಯನ್ನು ಎಷ್ಟು ಬಚ್ಚಿಡಬೇಕೆಂದರೂ ಸಾಧ್ಯವಾಗಲಿಲ್ಲ. ಪತಿಯು ಯತಿಯಾದನೆಂದು ಕೇಳಿ ದೊಡನೆ, ಮಿತಿಮೀರಿಬಂದ ದುಃಖದಿಂದ ಮನಸ್ಸನ್ನು ಸಮಸ್ಥಿತಿಗೆ ತಂದು ಕೊಳ್ಳಲಾರದೆ, ಓಡಿಹೋಗಿ ಭಾವಿಯಲ್ಲಿ ಬಿದ್ದು ಪ್ರಾಣಗಳನ್ನು ಕಳೆದು ಕೊಂಡಳು. ಮಾಡುವುದೇನು ? ಆಕೆಗೆ ಈ ದುರ್ಮರಣದಿಂದ ಪಿಶಾಚ ಜನ್ಮವೇ ಪ್ರಾಪ್ತವಾಯಿತು. ಈ ಸಂಗತಿಯನ್ನು ತಿಳಿದ ರಾಘವೇಂದ್ರರು ತಮ್ಮ ತಪಶ್ಶಕ್ತಿಯಿಂದದನ್ನು ಪರಿಹರಿಸಿ ಸದ್ಗತಿಯನ್ನನುಗ್ರಹಿಸಿದರು. ಅಂದಿನಿಂದ ತಮ್ಮ ಪೂರ್ವಾಶ್ರಮದ ಗೋತ್ರಜರೆಲ್ಲರೂ ವಿವಾಹಾದಿ ಶುಭಕಾಲಗಳಲ್ಲಿ ಸರಸ್ವತಿಯನ್ನುದ್ದೇಶಿಸಿ ಸುವಾಸಿನಿಯರ ಪೂಜೆಮಾಡಬೇಕೆಂದು ಅಪ್ಪಣೆ ಮಾಡಿದರು. ಈ ಪದ್ಧತಿ ಈಗಲೂ ಆ ಗೋತ್ರದವರ ಆಚರಣೆಯಲ್ಲಿದೆ.

## ಆಶಾಪೂರ್ತಿ

ಪೂರ್ವದಲ್ಲಿ ದೇವತಾರ್ಚನೆಗೆ ತೊಂದರೆ ಬರಬಾರದೆಂದು ಸುಧೀಂದ್ರ ರಿಂದ ನಿಯಮಿಸಲ್ಪಟ್ಟ ಯಾದವೇಂದ್ರರು, ತಮ್ಮ ಗುರುಗಳು ಬೃಂದಾವನಸ್ಥ ರಾದರೆಂದು ಕೇಳಿ ಕುಂಭಕೋಣೆಗೆ ಬಂದರು. ರಾಘವೇಂದ್ರರು ಅವರನ್ನು ಆಶ್ರಮಜ್ಯೇಷ್ಠರೆಂದು ನಮಸ್ಕರಿಸಿ, ಮಠದಲ್ಲಿಳಿಸಿಕೊಂಡು ಸತ್ಕರಿಸಿದರು. ಯಾದವೇಂದ್ರರು ಸನ್ಯಾಸಪಡೆದುದಕ್ಕೆ ಮೂಲರಾಮರ ಪೂಜೆಯನ್ನು, ಒಂದು ದಿನವಾದರೂ ಮಾಡಿ ಪುನೀತನಾಗಬೇಕೆಂಬ ತಮ್ಮ ಅಭಿಲಾಷೆಯನ್ನು ರಾಘವೇಂದ್ರರಿಗೆ ತಿಳಿಸಿದರು. ರಾಘವೇಂದ್ರರು—"ತಮಗೇಕೆ ಇಷ್ಟು

ಸಂಕೋಚ, ಮಠವೇ ತಮ್ಮದು, ಆಶ್ರಮಜ್ಯೇಷ್ಠರು ತಾವು, ಸಂಸ್ಥಾನವನ್ನೊಪ್ಪಿಸಿ ಶಿಷ್ಯನಾಗಿ ವಿಜಯೀಂದ್ರರ ಸನ್ನಿಧಿಯಲ್ಲಿ ಪ್ರವಚನಮಾಡಿಕೊಂಡಿರುವೆನು, ಇಂದೇ ತಾವು ಮೂಲರಾಮರ ಪೂಜೆ ಮಾಡಬೇಕು" ಎಂದು ತಿಳಿಸಿದರು. ಯಾದವೇಂದ್ರರು ಮೂಲರಾಮನನ್ನು ಪೂಜಿಸಿದರು. ರಾಘವೇಂದ್ರರು ತಮ್ಮ ಸಂತೋಷವನ್ನು ವ್ಯಕ್ತಗೊಳಿಸಿದರು. ಯಾದವೇಂದ್ರರು ಧನ್ಯನಾದೆನೆಂದರು.

ಯಾದವೇಂದ್ರರು ಸಂಸ್ಥಾನ ಪಾಲನೆಯ ಭಾರವಹಿಸಲು ಸಮ್ಮತಿಸಲಿಲ್ಲ. ವಿಜಯೀಂದ್ರರೂ ಸುಧೀಂದ್ರರೂ ಕುಳಿತ ಪೀಠದಲ್ಲಿ ಧರ್ಮಾಧಿಕಾರ ಮಾಡಲು ರಾಘವೇಂದ್ರರೇ ತಕ್ಕವರೆಂದು ಮರುದಿನದ ಪೂಜೆಯನ್ನು ರಾಘವೇಂದ್ರರಿಗೆ ವಹಿಸಿಬಿಟ್ಟರು. ವಿರಕ್ತ ಸನ್ಯಾಸಿಯು ವಿರಕ್ತನೇ ಆಗಿ ತಪಶ್ಚರ್ಯಮಾಡಬೇಕೆಂದು ಕೃಷ್ಣಾತೀರವನ್ನು ಕುರಿತು ಪ್ರಯಾಣ ಬೆಳೆಸಿದರು. ಕಾಲಾಂತರದಲ್ಲಿ ಮುಡುಮಾಲೆಂಬ ಸ್ಥಳದಲ್ಲಿ (8 Miles from Krishna Stn.) ತಮ್ಮ ಪಾರ್ಥಿವ ಶರೀರವನ್ನು ತ್ಯಜಿಸಿದರು

ಇಷ್ಟೇ ಸಂಗತಿಯ ಮೇಲೆ ಶ್ರೀಮಠದಲ್ಲಿ ಬರೆದಿಟ್ಟಿರುವ ಸತ್ಯಾಂಶದಿಂದ ದೂರವಾದ ಅನೇಕ ದಂತಕಥೆಗಳು ಪ್ರಚಾರಕ್ಕೆ ಬಂದಿವೆ. ಕಾವ್ಯವಾಗಿ ಬರೆಯಲು ಹೊರಟವರು, ಯಾದವೇಂದ್ರರಿಗೂ ರಾಘವೇಂದ್ರರಿಗೂ ಕಲಹವನ್ನು ತಂದೊಡ್ಡಿದ್ದಾರೆ. ರಾಜಸಭೆಗೆ ಕರೆತಂದಿದ್ದಾರೆ. ಕಡೆಗೆ ದನಗಾವ ಬಾಲಕರ ಬಾಯಿಂದ "ರಾಘವೇಂದ್ರ ರಾಜ್ಯವಾಳಿದ, ಯಾದವೇಂದ್ರ ದನಗಳನ್ನು ಕಾದ" ಎಂಬ ನ್ಯಾಯ ತೀರ್ಮಾನ ಮಾಡಿಸಿದ್ದಾರೆ. ಈ ಬಗೆಯ ಪ್ರಚಾರದಿಂದ ಇಂತಿಂಥವರೂ ಹೀಗಿದ್ದರೇ, ಹೀಗಾದರೇ, ಎಂಬ ಸಂಶಯ ಜನತೆಯಲ್ಲುಂಟಾಗುತ್ತದೆ. ಯಾವಾಗಲೂ ಚರಿತ್ರೆಯಲ್ಲಿ ರಸಪುಷ್ಟಿಗಾಗಿ ಅನೃತಗಳನ್ನು ಸೇರಿಸಬಾರದು. ಸತ್ಯಾಂಶಗಳನ್ನು ಸ್ಥಳಭೇದದಿಂದ ಜೋಡಿಸಿ ರಸಪುಷ್ಟಿಮಾಡಿಕೊಟ್ಟರೆ ಅದು ತಪ್ಪಾಗುವುದಿಲ್ಲ.

ಈ ಸಂದರ್ಭದಲ್ಲಿ ಯಾದವೇಂದ್ರರ ಮತ್ತು ರಾಘವೇಂದ್ರರ ಅಪೇಕ್ಷೆ ಹಾಗೂ ಯೋಗ್ಯತೆಗಳೇನೆಂಬುದನ್ನು ವಿಚಾರಿಸಬೇಕು. ಯಾದವೇಂದ್ರರು ಪೂರ್ವಾಶ್ರಮದಲ್ಲಿ ಸಾಂಸಾರಿಕ ಕ್ಲೇಶಗಳಿಂದ ಮನನೊಂದು ಸನ್ಯಾಸ ಬೇಕೆಂದು ಬೇಡುತ್ತಿದ್ದವರು. ಸನ್ಯಾಸ ಪ್ರಾಪ್ತಿಯಾದಮೇಲೆ ಗುರುಗಳ

ದೇಹಾಲಸ್ಯಕಾಲದಲ್ಲಿ ಮೂಲರಾಮರ ವಿನಾ ಇತರ ದೇವತಾ ಮೂರ್ತಿಗಳನ್ನು ಪೂಜಿಸುತ್ತಿದ್ದವರು. ಯಾದವೇಂದ್ರರಿಗೆ ಇದ್ದ ಮತ್ತೊಂದು ಅಪೇಕ್ಷೆ, ಗುರುಗಳಲ್ಲಿ ಕೇಳಿಕೊಳ್ಳಲಾಗದಿದ್ದ ಒಂದು ದಿನದ "ಮೂಲರಾಮರ ಪೂಜೆ." ರಾಘವೇಂದ್ರರು ಯಾದವೇಂದ್ರರ ಅಪೇಕ್ಷೆಯನ್ನು ನೆರವೇರಿಸಿಕೊಟ್ಟರು. ಸಂಸ್ಥಾನಾಧಿಪತ್ಯವನ್ನೂ ಮಾಡಿರೆಂದೇ ಒಪ್ಪಿಸಿದರು. ಯಾದವೇಂದ್ರರು ಮತ ರಾಜ್ಯಭಾರವನ್ನು ಬಯಸಲಿಲ್ಲ. ಸಂತುಷ್ಟಾಂತಃಕರಣರಾಗಿ ತಪಸ್ಸಿಗೆ ತೆರಳಿದರು. ರಾಘವೇಂದ್ರರಾದರೋ ನೃಸಿಂಹ ಪುರಾಣದಲ್ಲಿ ಉಲ್ಲೇಖವಿರುವಂತೆ ಪ್ರಹ್ಲಾದಾಂಶದಿಂದ ಅವತಾರ ಮಾಡಿದವರು. ದ್ವಾಪರದಲ್ಲಿ ಬಾಹ್ಲೀಕ ರಾಜನಾಗಿ ವೇದವ್ಯಾಸರ ಆರಾಧನೆ ಮಾಡಿದವರು. ಮತ್ತೆ ಕಲಿಯುಗದಲ್ಲಿ ವ್ಯಾಸರಾಯರಾಗಿ ಅವತರಿಸಿ ಮಹತ್ಕಾರ್ಯಗಳನ್ನು ಸಾಧಿಸಿದವರು. ತಂದೆಯು ಅಕ್ಷರಾಭ್ಯಾಸ ಮಾಡಿಸುವಾಗ ಓಂಕಾರವನ್ನು ಬರೆಯೆಂದು ರೇಖೆಗಳನ್ನು ರೂಪಿಸಿದರೆ, ಗುಣಪೂರ್ಣನಾದ ಪರಮಾತ್ಮನ ಸಂಜ್ಞೆಯನ್ನು ಇಷ್ಟು ಸಣ್ಣ ರೇಖೆಯಲ್ಲಿ ಅಡಗಿಸುವ ಬಗೆ ಹೇಗೆಂದು ಕೇಳಿದವರು. ಹುಟ್ಟಿದಾಗಲೇ ಅಪರೋಕ್ಷಿಗಳು. ರಾಘವೇಂದ್ರ ವಿಜಯ ಗ್ರಂಥಕರ್ತರು ಅಕ್ಷರಾಭ್ಯಾಸದ ವೈಚಿತ್ರ್ಯವನ್ನು—

**ವಿಲಿಖ್ಯಭೂಮೌಪ್ರಥಮಂಕುಮಾರಂ**
**ರೇಖಾಪಿಮಾನೋಮಿತಿಸಂಪಠೇತಿ**
**ಪಿತ್ರಾನಿಯುಕ್ತಃ ಪುನರಬ್ರವೀತ್ತಂ**
**ಅಲ್ಪೇಕಥಂಸಾಗುಣಪೂರ್ಣಸಂಜ್ಞಾ**

ಎಂಬುದಾಗಿ ವರ್ಣಿಸಿರುವರು. ಇಂಥ ಮಹನೀಯರು ಯಾದವೇಂದ್ರರೊಡನೆ ಸಂಸ್ಥಾನಾಧಿಪತ್ಯ ನಿಮಿತ್ತ ವಾದಿಸಿದರೆಂದರೆ ಹಾಸ್ಯಾಸ್ಪದ ಸಂಗತಿಯೆನಿಸುವುದು.

**ಶಂಕುಕರ್ಣಾಖ್ಯದೇವಸ್ತು ಬ್ರಹ್ಮಶಾಪಾಚ್ಚ ಭೂತಲೇ**
**ಪ್ರಹ್ಲಾದ ಇತಿ ವಿಖ್ಯಾತಃ ಭೂಭಾರಕ್ಷಪಣೇರತಃ**
**ಸಯೇವರಾಘವೇಂದ್ರಾಖ್ಯಃ ಯತಿರೂಪೇಣ ಸರ್ವದಾ**
**ಕಲೌಯುಗೇ ರಾಮಸೇವಾಂ ಕುರ್ವನ್ಮಂತ್ರಾಲಯೇ ಭವತ್**

ಎಂಬ ಶ್ಲೋಕಗಳನ್ನು ನೃಸಿಂಹ ಪುರಾಣದಿಂದ ಆರಿಸಿ ಶ್ರೀಪಾದಂಗಳವರು ಕಳುಹಿಸಿರುವುದನ್ನು ಹೊಂದಿಕೆಗಾಗಿ ಈ ಬಳಿಯಲ್ಲಿ ಸೇರಿಸಲಾಗಿದೆ.

## ಸ್ವಾಮಿಗಳ ಪೂಜಾ

ಸ್ವಾಮಿಗಳು ದಿನವೂ ಬ್ರಾಹ್ಮೀಮುಹೂರ್ತದಲ್ಲೆದ್ದು, ಸ್ನಾನಾಹ್ನಿಕಗಳನ್ನು ಮಾಡಿ, ಶಿಷ್ಯರಿಗೆ ವೇದಾಂತಪಾಠ ಹೇಳುತ್ತಿದ್ದರು ಮಧ್ಯಾಹ್ನ ಸ್ನಾನ ಜಪಗಳಾದೊಡನೆ, ಬ್ರಹ್ಮಕರಾರ್ಚಿತ ಶ್ರೀಮೂಲರಾಮ, ಸರ್ವಜ್ಞಕರಾರ್ಚಿತ ದಶಾವತಾರ ಪೀಠ ದಿಗ್ವಿಜಯರಾಮ, ಸೈತಕಮುಷ್ಟಿ (ವೇದವ್ಯಾಸರಿಂದ ಮಧ್ವಾಚಾರ್ಯರಿಗೆ ಅನುಗೃಹೀತವಾದದ್ದು) ಬಲಮುರೀಶಂಖ, ಜಯತೀರ್ಥ ಕರಾರ್ಚಿತ ಜಯರಾಮ* ಈ ಮೂರ್ತಿಗಳನ್ನಾರಾಧಿಸುತ್ತಿದ್ದರು. ಸ್ವಾಮಿಗಳ ಪೂಜೆಯೆಂದರೆ ಸಾಮಾನ್ಯ ಪೂಜೆಯಾಗಿರಲಿಲ್ಲ. ಇವರ ಭಕ್ತಿಗೆ ಮೆಚ್ಚಿ ಭಗವಂತನು ನಿಜರೂಪದಿಂದಲೇ ಇವರ ಸೇವೆಯನ್ನು ಸ್ವೀಕರಿಸುತ್ತಿದ್ದನು. ಯಾವಾಗಲೂ ಶ್ರೀಹರಿಯು ವೇಣುಗೋಪಾಲ ರೂಪದಿಂದ ದರ್ಶನ ಕೊಡುತ್ತಿದ್ದುದರಿಂದ, ಸುವರ್ಣಮಯ ವೇಣುಗೋಪಾಲಮೂರ್ತಿಯನ್ನು ನಿರ್ಮಿಸಿ ಆರಾಧಿಸುತ್ತಿದ್ದರು. ಆದುದರಿಂದ ಇವರು ರಚಿಸಿದ ಒಂದೇ ಒಂದು ಕನ್ನಡ ದೇವರ ನಾಮದಲ್ಲಿ ವೇಣುಗೋಪಾಲ ಮುದ್ರಿಕೆಯಿಂದ ಪದವನ್ನು ಮುಗಿಸಿರುತ್ತಾರೆ. ತಾವು ಸಂಸ್ಕೃತದಲ್ಲೆಷ್ಟೇ ಪ್ರವೀಣರಾಗಿದ್ದರೂ, ಕನ್ನಡ ಭಾಷೆಯಲ್ಲಿ ಅವರಿಗಿದ್ದ ಆದರವು ಈ ದೇವರ ನಾಮದಿಂದ ವ್ಯಕ್ತವಾಗುತ್ತದೆ.

## ದೇವರನಾಮ.

ಭೈರವಿ ತ್ರಿಪುಟ

ಇಂದು ಎನಗೆ ಗೋವಿಂದ ನಿನ್ನ ಪದಾರ
ವಿಂದವತೋರೋ ಮುಕುಂದನೇ ॥ ಪ ॥

---

*ಮೇಲ್ಕಂಡ ಮೂರ್ತಿಗಳ ಜೊತೆಯಲ್ಲಿ ಪಚ್ಚೆಯ ವೈಕುಂಠವಾಸು ದೇವಪ್ರತಿಮೆಯೊಂದು ಎಲ್ಲರ ದೃಷ್ಟಿಗೆ ಗೋಚರವಾಗುತ್ತದೆ. ಈ ದಿವ್ಯಮೂರ್ತಿಯನ್ನು ಆ ಕಾಲದಲ್ಲಿದ್ದ ಪಾಂಡ್ಯಭೂಪಾಲನು ಸುಮತೀಂದ್ರತೀರ್ಥರಿಗೆ ನೀಲಾದೇವಿಯರಿಂದ ಆರಾಧಿತವಾಗಿದ್ದ ಮೂರ್ತಿಯೆಂದು ಸಮರ್ಪಣೆ ಮಾಡಿದನು.

ಮಂದರೋದ್ಧಾರನೆ ನಂದಗೋಪಿಯ ಕಂದ
ಇಂದಿರಾರಮಣ ಗೋವಿಂದ ಗೋಕುಲಾನಂದ ‖ ಅ. ಪ. ‖

ನೊಂದೆನಯ್ಯಾ ಭವಬಂಧನದೊಳು ಸಿಲುಕಿ
ಮುಂದೆ ದಾರಿಗಾಣದೆ ಕುಂದಿದೆ ಜಗದೊಳು
ಕಂದನಾನೆಂದೆನ್ನ ಕುಂದುಗಳೆಣಿಸದೆ
ತಂದೆನೀ ಕಾಯೋ ಕಂದರ್ಪಜನಕನೆ ‖ ೧ ‖

ಮೂಢತನದಿ ಬಲುಹೇಡಿ ಜೀವನಾನಾಗಿ
ದೃಢಭಕ್ತಿಯ ಮಾಡಲಿಲ್ಲವೊ ಹರಿಯೇ
ನೋಡಲಿಲ್ಲ ನಿನ್ನ ಪಾಡಲಿಲ್ಲವೊ ಮಹಿಮೆ
ಗಾಡಿಕಾರ ಕೃಷ್ಣ ಬೇಡಿಕೊಂಬೆನೊ ಸ್ವಾಮಿ ‖ ೨ ‖

ಧಾರುಣಿಯೊಳು ಬಲುಭಾರ ಜೀವನಾನಾಗಿ
ಮೇರೆದಪ್ಪಿ ನಡೆದು ಸೇರಿದೆ ಕುಜನರ
ಆರೂ ಕಾಯುವರಿಲ್ಲ ಸೇರಿದೆ ನಿನಗಯ್ಯಾ
ಧೀರ ವೇಣುಗೋಪಾಲ ಪಾರಗಾಣಿಸೊ ಸ್ವಾಮಿ ‖ ೩ ‖

ಈ ನಾಮವನ್ನು ಸ್ವಾಮಿಗಳು ವೀಣಾವಾದ್ಯದೊಡನೆ ಹಾಡಿದಾಗ ಗೋಪಾಲ ಕೃಷ್ಣನು ವೇಣುಗಾನ ಮಾಡುತ್ತಾ ಪ್ರತ್ಯಕ್ಷನಾಗಿ ನರ್ತನ ಮಾಡಿದನಂತೆ !

## ಮೂರ್ತಿಪೂಜಾ

ಮೂರ್ತಿಪೂಜೆಯೆಂದಕೂಡಲೇ ನಮ್ಮಲ್ಲಿ ಕೆಲವರಿಗೆ ತಿರಸ್ಕಾರ ಭಾವ ಇದೆ. ವೇದಮತೀಯರೆಂದು ಕರೆದುಕೊಳ್ಳುವ ಆರ್ಯಸಮಾಜಿಗಳು ಮೂರ್ತಿ ಪೂಜೆಯನ್ನು ಕಟುತರವಾಗಿ ಖಂಡಿಸುತ್ತಾರೆ. ಮತ್ತೆ ಕೆಲವರು ವೇದದಲ್ಲಿ ಮೂರ್ತಿಪೂಜೆಯಿಲ್ಲವೆನ್ನುತ್ತಾರೆ; ಮತ್ತು ಅದು ಪುರಾಣ ಕಾಲದಲ್ಲಿ ಆಚರಣೆಗೆ ಬಂದಿರಬೇಕೆಂದು ಹೇಳುತ್ತಾರೆ. ಬೌದ್ಧ ಜೈನರನ್ನು ನೋಡಿ ವೈದಿಕರು ಮೂರ್ತಿಪೂಜೆಗಾರಂಭಿಸಿದರೆಂದು ಕೆಲವರು ಹೇಳುತ್ತಾರೆ. ಆದರೂ ಹೆಚ್ಚು ಜನರಿಗೆ ಮೂರ್ತಿಪೂಜೆಯಲ್ಲಿ ಆದರ ತಪ್ಪಿಲ್ಲ. ತತ್ವ ತಿಳಿಯದೆ ಮೂರ್ತಿ ಪೂಜೆ ಮಾಡುವವರು ಹೇರಳವಾಗಿದ್ದರೆ, ಅರ್ಥವರಿತು ಪೂಜಿಸುವ ಜನರೂ

ಅನೇಕರಿರುತ್ತಾರೆ. ನಮ್ಮ ಮಠಾಧಿಪತಿಗಳಂತು ಹಿಂದಿನವರು ಪೂಜೆಮಾಡಿ ಕೊಂಡು ಬಂದ ಮೂರ್ತಿಗಳಿಗಾಗಿ ಸಕಲ ವಿಧ ತ್ಯಾಗಗಳನ್ನೂ ಮಾಡಿದ್ದಾರೆ. ಒಂದು ಮೂರ್ತಿ ಪೂಜೆಗಾಗಿಯೇ ಮತ್ತೆ ಜನ್ಮವೆತ್ತಿ ಬಂದ ಆಪ್ತವಾಕ್ಯಗಳಿಗೆ ಕಡಮೆಯಿಲ್ಲ. ಮುಸಲ್ಮಾನರ ಧಾಳಿಯ ಕಾಲದಲ್ಲಿ ಒಂದೊಂದು ದೇವಾಲ ಯದ ಮೂರ್ತಿಗಳ ರಕ್ಷಣೆಗಾಗಿ ನಮ್ಮ ಜನರು ಮಾಡಿರುವ ಬಲಿದಾನವು ಹೃದಯವಿದಾರಕವಾಗಿದೆ.

ಅಂದಮೇಲೆ ಮೂರ್ತಿಪೂಜೆಯೆಂದರೇನು, ಇದು ಹೇಗೆ ಎಂದಿನಿಂದ ಜನರ ಆಚರಣೆಗೆ ಬಂದಿತು, ಎಂಬುದನ್ನಾದರೂ ಇಲ್ಲಿ ವಿಚಾರಿಸಬೇಕು ನಮ್ಮ ವೈದಿಕ ಧರ್ಮವಾದರೋ-ಮಂತ್ರಯಂತ್ರತಂತ್ರಗಳೆಂಬ ಭದ್ರವಾದ ಭಿತ್ತಿಯ ಮೇಲೆ ನಿಂತಿದೆ. ಆಚರಣೆಯಲ್ಲಿ ನೋಡಿದರೆ, ಮಂತ್ರವಲ್ಲದ ಅಕ್ಷರವಿಲ್ಲ, ಮಂತ್ರವಿಲ್ಲದ ಸಂಧ್ಯೆಯಿಲ್ಲ, ಮಂತ್ರವಿಲ್ಲದ ಪೂಜೆಯಿಲ್ಲ, ಮಂತ್ರ ವಿಲ್ಲದ ಧ್ಯಾನ ಮೊದಲೇ ಇಲ್ಲ; ಎಂಬುವುದು ಚೆನ್ನಾಗಿ ಕಂಡುಬರುತ್ತಿದೆ. ಮಂತ್ರಗಳಲ್ಲಿ ಏಕಾಕ್ಷರಿ, ಪಂಚಾಕ್ಷರಿ, ಷಡಕ್ಷರಿ, ಮತ್ತು ಅಷ್ಟಾಕ್ಷರಿ, ದ್ವಾದಶಾಕ್ಷರಿ ಹೀಗೆಲ್ಲಾ ಭಿನ್ನತೆಯಿದ್ದು, ಆಯಾ ಮಂತ್ರಕ್ಕೆ ದೇವತಾ, ಆ ರಾಧನೆಗೆ ಆಗಮ, ಅದರ ಪೂಜಾವಿಧಾನ ಮೊದಲಾದವುಗಳೇರ್ಪಟ್ಟು, ಅದೇ ಒಂದು ದೊಡ್ಡ ಶಾಸ್ತ್ರವಾಗಿ ಪರಿಣಮಿಸಿದೆ ಮಂತ್ರವೆಂಬುವುದು ಯಾವಾ ಗಲೂ ಭಾವನಾತ್ಮಕವಾದದ್ದು. ಭಾವನಾತ್ಮಕ ಮಂತ್ರವನ್ನು ಸ್ವರಪೂರ್ವಕ ಉಚ್ಚರಿಸಿದಾಗ ವಾಯುಮಂಡಲದಲ್ಲಿ ಆ ನಾದವು ಆಕಾರತಾಳಿ ಯಂತ್ರವೆನಿಸಿ ಕೊಳ್ಳುತ್ತದೆ. ಜ್ಯೋತಿರ್ಲಿಂಗ, ಆಕಾಶಲಿಂಗ ಎಂದು ಕೇಳಿಲ್ಲವೇ? ಅದರಂತೆ. ಅವಕಾಶದಲ್ಲಿ ತಾಳಿದ ಆಕಾರವೆನಿಸಿದ ಆ ಯಂತ್ರವನ್ನು ಗುರುತಿಗಾಗಿ ಮೃತ್ತಿಕೆ ಶಿಲಾ ದಾರು ಲೋಹಗಳಿಂದ ಮಾಡಿಟ್ಟುಕೊಂಡಾಗ ಅದು ಮೂರ್ತಿ ಯೆನಿಸಿಕೊಳ್ಳುತ್ತದೆ.

ಉಪಾಸಕರು ಸದ್ಗುರುವಿನಿಂದ ಉಪದೇಶಪಡೆದ ಮಂತ್ರವ್ಯಾವುದೋ, ಆ ಮಂತ್ರದ ಅಕ್ಷರಸಂಖ್ಯೆಯೆಷ್ಟೋ, ಅಷ್ಟಕ್ಕೆ ಸರಿಯಾಗಿ ಎಂದರೆ ಅಕ್ಷರಕ್ಕೆ ಲಕ್ಷದಂತೆ ಲಕ್ಷ್ಯವಿಟ್ಟು ಏಕಾಂತ ಸ್ಥಳದಲ್ಲಿ ಉಚ್ಚಸ್ವರದಿಂದ ಉಚ್ಚರಿಸಿದರೆ, ಅವನಿಗೆ ಮಂತ್ರಸಿದ್ಧಿಯಾಗುತ್ತದೆ ಸಿದ್ಧಿಯೆಂದರೆ ಆ ಮಂತ್ರವನ್ನು ಮತ್ತೊ ಬ್ಬರಿಗೆ ಉಪದೇಶಕೊಡುವುದಕ್ಕೆ ಅಧಿಕಾರಬಂತೆಂಬಷ್ಟು ಸಿದ್ಧಿ ಮಾತ್ರ.

ಅಧಿಕಾರ ಬಂತೆಂದು ಮನಸ್ಸಿನೀ ಉಪದೇಶಕೊಡುತ್ತ ಬಂದರೆ ದೊರೆತ ಸಿದ್ಧಿಯೂ ನಾಶವಾಗುತ್ತದೆ. ಸಿದ್ಧಿಯು ಪ್ರಸಿದ್ಧಿಯಲ್ಲಿ ಪರ್ಯವಸಾನವಾದರೆ ಅದೇ ಆವನ ಸರ್ವನಾಶಕ್ಕೂ ಕಾರಣವಾಗುತ್ತದೆ. ಸಿದ್ಧಿಯೆಂಬುವುದು ನಿಜವಾದ ಸಿದ್ಧಿಯಾಗಿ ಉಪಾಸನೆ ನಿರಂತರವಾದರೆ, ವಾಯುಮಂಡಲದಲ್ಲಿ ನಾದ ಸಂಚಾರದಿಂದ ತಾಳಿದ ಮಂತ್ರದ ಆಕಾರವು ನೀಲಾಕಾರವಾಗಿ ತೇಜೋಮಯವಾಗಿ ದರ್ಶನವಾಗುತ್ತದೆ. ಅದನ್ನು ನೋಡಿ ನಮ್ಮ ಶಾಸ್ತ್ರಕಾರರು ಮೂರ್ತಿಗಳ ಲಕ್ಷಣ ಹೀಗೆ ಹೀಗಿದೆಯೆಂದು ಗ್ರಂಥಗಳನ್ನು ರಚಿಸಿರುತ್ತಾರೆ. ಈ ಶಾಸ್ತ್ರಕ್ಕನುಸಾರವಾಗಿ ಸಾರ್ವಜನಿಕ ದೇವಾಲಯಗಳೂ, ಗೃಹದೇವತಾರಾಧನೆಗಳೂ ಏರ್ಪಟ್ಟಿವೆ. ಶಾಸ್ತ್ರವನ್ನನುಸರಿಸಿ ಮಾಡಿಟ್ಟುಕೊಂಡ ಮೂರ್ತಿಯಲ್ಲಿ ಬಾಹ್ಯಪೂಜೆ ಮಾಡುವಾಗ, ಆಯಾ ಮೂರ್ತಿಗೆ ತಕ್ಕ ಮಂತ್ರಗಳಿಂದ ಪೂಜಕರು ತಾವು ಮನಗಂಡ ತಮ್ಮ ಹೃದಯದ ಮೂರ್ತಿಯನ್ನು ಧ್ಯಾನಿಸಿ ಆವಾಹಿಸುತ್ತಾರೆ. ಆವಾಹನೆ ಮಾಡಿದವರು ತಮ್ಮ ಮನೆಗೆ ಬಂದ ಮಾನ್ಯ ಅತಿಥಿಗೆ ಆದರಸತ್ಕಾರ ಹೇಗೆ ಮಾಡುತ್ತಾರೋ ಅದರಂತೆ ಆಸನ, ಅರ್ಘ್ಯ ಪಾದ್ಯ, ಆಚಮನ, ಸ್ನಾನ, ವಸ್ತ್ರಮಾಲಾ, ಗಂಧ, ಧೂಪದೀಪನೈವೇದ್ಯಾದಿಗಳಿಂದ ಪೂಜಿಸುತ್ತಾರೆ. ವಂದನೆ ಮಾಡುತ್ತಾರೆ. ಪುನಃ ಆವಾಹಿತ ಭಗವನ್ಮೂರ್ತಿಯನ್ನು ತಮ್ಮ ಹೃದಯಾಕಾಶಕ್ಕೆ ಸೇರಿಸಿಕೊಳ್ಳುತ್ತಾರೆ. ಆವಾಹಿಸಿದ್ದ ಪ್ರತೀಕವನ್ನು ಜೋಪಾನವಾಗಿ ಪರಿಶುದ್ಧವಾಗಿ ಕಾದಿಡುತ್ತಾರೆ. ಎಷ್ಟೆಷ್ಟು ಆವಾಹನಾದಿ ಪೂಜೆಗಳು ಹೆಚ್ಚುತ್ತವೆಯೋ, ಅಷ್ಟಷ್ಟು ಮೂರ್ತಿಯು ಪವಿತ್ರವೆನಿಸುತ್ತದೆ. ಅದರಲ್ಲಿ ಶಕ್ತಿ ಹೆಚ್ಚುತ್ತದೆ. ಮಹನೀಯರಿಂದ ಪರಂಪರಾಗತವಾಗಿ ಬಂದರೆ ಆ ಮೂರ್ತಿಯು ಪುರಾತನವೆನಿಸುತ್ತದೆ. ಅದು ಭಾವುಕನ ಭಾವನೆಯಲ್ಲಿ ಕಲ್ಲುಕಂಚುಗಳಾಗಿರುವುದಿಲ್ಲ. ಸರ್ವಸಂಗ ಪರಿತ್ಯಾಗ ಮಾಡಿದ ಸನ್ಯಾಸಿಗಳಿಗಾಗಲಿ ಈ ಬಗೆಯ ಮೂರ್ತಿಪೂಜೆ ಬಿಟ್ಟಿದ್ದಲ್ಲ.

ರಾಘವೇಂದ್ರಸ್ವಾಮಿಗಳು ಪೂಜೆಮಾಡಿದಾಗೆಲ್ಲಾ ರಾಮರೂಪ ದರ್ಶನವಾಗುವುದಕ್ಕೆ ಬದಲಾಗಿ ವೇಣುಗೋಪಾಲ ರೂಪವೇ ದರ್ಶನವಾಗಲು, ಅವರು ಹಿಂದಿನ ಜನ್ಮದಲ್ಲಿ ವ್ಯಾಸರಾಯರಾಗಿದ್ದು ಮಾಡಿದ ಶ್ರೀಕೃಷ್ಣ ಮಂತ್ರೋಪಾಸನೆಯೇ ಕಾರಣವಾಗಿತ್ತು. ಕೃಷ್ಣರೂಪವಾಗಿಯೇ ಒಳಹೊರಗೆ ಪ್ರಾಮುಖ್ಯವಾಗಿ ನಿಲ್ಲುತ್ತಿತ್ತು. ಆದ್ದರಿಂದ ರಾಯರು ಸುವರ್ಣಮಯ

ವೇಣುಗೋಪಾಲಮೂರ್ತಿಯನ್ನು ತಮ್ಮ ಆರಾಧನೆಯಲ್ಲಿ ಸೇರಿಸಿಕೊಂಡದ್ದು.

ಧ್ಯಾನಾಸಕ್ತರಾದ ಯೋಗಿಗಳು ಮೂರ್ತಿಯನ್ನಿಟ್ಟುಕೊಂಡು ಬಾಹ್ಯ ಪೂಜೆ ಮಾಡುತ್ತಿರಲಿಲ್ಲವಲ್ಲಾ! ಅಂಥವರಿಗೆ ಸಾಕ್ಷಾತ್ಕಾರವಾಗುತ್ತಿರಲಿಲ್ಲವೋ? ಎಂದು ಯಾರಾದರೂ ಕೇಳಬಹುದು. ಧ್ಯಾನಸ್ಥಯೋಗಿಗಳು ಬಾಹ್ಯದಲ್ಲಿ ಮೂರ್ತಿಯನ್ನಿಟ್ಟು ಪೂಜೆ ಮಾಡುತ್ತಿರಲಿಲ್ಲವೆಂಬುದು ನಿಜ. ಆದರೆ ಅವರು ಧ್ಯಾನ್ಯದಲ್ಲಿ ಕುಳಿತಾಗ ಮಂತ್ರ ಮೂರ್ತಿಯನ್ನು ಒಳ ಹೊರಗೆಲ್ಲಾ ಕಾಣುತ್ತಿದ್ದರು. ಪೂಜೋಪಕರಣಗಳಿಲ್ಲದೆ ಮಾನಸಿಕ ಪೂಜೆ ಮಾಡುತ್ತಿದ್ದರು. ಆ ಪೂಜೆಯಲ್ಲಿ ಲೋಹಪ್ರತಿಮೆಯಿಲ್ಲದಿದ್ದರೂ ಆಕಾಶಸ್ಥ ಛಾಯಾಪ್ರತಿಮೆಯಿರುತ್ತಿತ್ತು. ವ್ಯಾಸರಾಯರು ಕನಕದಾಸರು ಮೊದಲಾದವರು ಈ ಬಗೆಯ ಪೂಜೆಮಾಡುತ್ತಿದ್ದ ಕಥೆಯು ಕರ್ಣಾಟಕ ಭಕ್ತವಿಜಯದಲ್ಲಿ ವಿಸ್ತಾರವಾಗಿ ನಿರೂಪಿತವಾಗಿರುವುದರಿಂದ ಅದನ್ನಿಲ್ಲಿ ವಿಸ್ತರಿಸಬೇಕಾಗಿಲ್ಲ. ಧ್ಯಾನದಲ್ಲಿ ಮೂರ್ತಿ ದರ್ಶನಮಾಡಬಲ್ಲವರಿಂದ ಆರಂಭಿಸಿ ಕಂಡ ಕಂಡಲ್ಲೆಲ್ಲಾ ಭಗವದ್ದರ್ಶನಮಾಡುವವರ ತನಕ ಎಲ್ಲರಿಗೂ ಅನುಕೂಲವಾಗಿರಬೇಕೆಂದು ಬಾಹ್ಯ ಪೂಜೆಗೂ ಮೂರ್ತಿಗೂ ನಮ್ಮವರು ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುವರು.

ನಮ್ಮ ದೇಶದ ರಾಮೇಶ್ವರ ಕ್ಷೇತ್ರದಲ್ಲಿ ಶ್ರೀರಾಮನು ಪ್ರತಿಷ್ಠಿಸಿ ಪೂಜಿಸಿದ ರಾಮೇಶ್ವರ, ಇತರ ಕ್ಷೇತ್ರಗಳಲ್ಲಿ ಗೌತಮರು ವಸಿಷ್ಠರು ಅಗಸ್ತ್ಯರು ಮೊದಲಾದ ಮುನಿಗಳು ಪ್ರತಿಷ್ಠಿಸಿ ಪೂಜಿಸಿದ ದೇವತಾ ಮೂರ್ತಿಗಳ, ಪುರಾಣ ಕಥೆಗಳನ್ನು ಕೇಳಿದರೆ, ಬಾಹ್ಯಪೂಜೆಗಿದ್ದ ಮಹತ್ವ ಗೊತ್ತಾಗುತ್ತದೆ. ಶ್ರೀ ಮಠದಲ್ಲಿರುವ ಮೂಲರಾಮ ವಿಗ್ರಹವನ್ನು ಶ್ರೀರಾಮನೇ ಸ್ವಯಂ ಪೂಜಿಸುತ್ತಿದ್ದ ಕಥೆಯು ಯೋಗವಾಸಿಷ್ಠವೆಂಬ ವೇದಾಂತ ಗ್ರಂಥದಲ್ಲಿ ಉಲ್ಲೇಖವಾಗಿರುವುದನ್ನು ನೋಡಿದರೆ ಮೂರ್ತಿ ಪೂಜೆಯು ಎಷ್ಟು ಪುರಾತನ ಮತ್ತು ಅವಶ್ಯಕವಾದದ್ದು ಎಂಬುವುದು ತಿಳಿದು ಬರುತ್ತದೆ. ಮತತ್ರಯದ ಆಚಾರ್ಯರೆಲ್ಲರೂ ಮೂರ್ತಿ ಪೂಜಕರೇ!

ಮೂರ್ತಿಪೂಜೆಯನ್ನು ನಿಂದಿಸುವ ಜನರಾದರೂ ದೇವರನ್ನು ಯಾವದಾದರೊಂದು ರೀತಿಯಲ್ಲಿ ಧ್ಯಾನಿಸಬೇಕಲ್ಲವೆ? ಗುಣವಿಲ್ಲ ಕ್ರಿಯೆಯಿಲ್ಲ ರೂಪವಿಲ್ಲವೆಂದು ಮೊದಲಾಗಿ ಚಿಂತಿಸಿದರೆ, ಆ ದೇವರು ಮನಸ್ಸಿನಲ್ಲಿ ಆರೂಢ

ನಾಗುವ ಬಗೆ ಹೇಗೆ ? ಆರಾಧನೆ ಆಗದ ದೇವರು ಉಪಾಸಕನಿಗೆ ಕೊಡುವುದೇನು, ಉಪಾಸಕನು ಪಡೆಯುವದೇನು ? ಗಂಡನು ಹೆಂಡತಿಯನ್ನು ಪ್ರೀತಿಸುವುದು ಮೂರ್ತಿ ಪೂಜೆಯಲ್ಲವೋ ? ತಂದೆಯು ಮಗನನ್ನು ಮುದ್ದಿಸುವುದು ಮೂರ್ತಿ ಪೂಜೆಯಲ್ಲವೋ? ಇಷ್ಟಮಿತ್ರರ ಭಾವ ಚಿತ್ರವನ್ನು ಮನೆಯಲ್ಲಿಟ್ಟುಕೊಳ್ಳುವುದು ಮೂರ್ತಿ ಪೂಜೆಯಲ್ಲವೋ ? ರಾಜಾಧಿರಾಜರ ಮತ್ತು ರಾಷ್ಟ್ರ ಪುರುಷರ ತೈಲ ಚಿತ್ರಗಳನ್ನು ಸಾರ್ವಜನಿಕ ಸ್ಥಳಗಳಲ್ಲಿ ಅನಾವರಣ ಮಾಡಿಟ್ಟುಕೊಳ್ಳುವುದು ಮೂರ್ತಿ ಪೂಜೆಯಲ್ಲವೋ ? ಹಾದಿ ಬೀದಿಗಳು ಸಂಧಿಸುವ ಚೌಕಗಳಲ್ಲಿ ರಾಜರ ಶಿಲಾ ಪ್ರತಿಮೆಗಳನ್ನು ಮಾಡಿಸಿ ನಿಲ್ಲಿಸುವುದು ಮೂರ್ತಿ ಪೂಜೆಯಲ್ಲವೋ ? ಕ್ರೈಸ್ತರು ಶಿಲುಬೆಯ ಗುರ್ತನ್ನು ಗೌರವಿಸುವುದು ಮೂರ್ತಿ ಪೂಜೆಯಲ್ಲವೋ ? ಮಹಮ್ಮದೀಯರ ಕ್ರೆಸಂಟ್ ಮೂರ್ತಿ ಪೂಜೆಯಲ್ಲವೋ ? ರಾಷ್ಟ್ರ ಧ್ವಜಗಳ ವಂದನೆ ಮೂರ್ತಿ ಪೂಜೆಯಲ್ಲವೋ ?

ಅಂದ ಬಳಿಕ ಮೂರ್ತಿಪೂಜೆ ಮಾಡದವರಾರು ? ಮೂರ್ತಿ ಪೂಜೆಯನ್ನು ನಿಂದಿಸಲು ಯಾರಿಗೆ ಏನು ಅಧಿಕಾರ ? ನಮ್ಮ ಜನರಾದರೋ—ಅನ್ಯರಂತೆ ಹಾದಿ ಬೀದಿಗಳಲ್ಲಿ ನಿಲ್ಲಿಸಿದ ರಾಜ ಮಹಾರಾಜರ ವಿಗ್ರಹಗಳ ಮೇಲೆ ಹದ್ದು ಕಾಗೆಗಳು ಕೂಡಲೆಂದು ಬಿಡದೆ ಜೋಪಾನವಾಗಿಟ್ಟು, ಮಾನವ ಸ್ವಭಾವವಾದ ಹೆಂಗರಳುತನದಿಂದ ಅಮೃತಾಭಿಷೇಕಮಾಡಿ, ದಿವ್ಯವಸ್ತ್ರ ಗಂಧಪುಷ್ಪಮಾಲೆಗಳನ್ನರ್ಪಿಸಿ ಧೂಪ ದೀಪನೈವೇದ್ಯಗಳಿಂದ ಸತ್ಕರಿಸಿ ನಮಸ್ಕರಿಸಿದರೆ, ಅದು ತಪ್ಪೋ ಅದು ಅಜ್ಞಾನವೋ ?

ನಿನ್ನೆ ಮೊನ್ನಿನವರಗಿದ್ದು ಪ್ರಖ್ಯಾತರಾದ ಶ್ರೀ ರಾಮಕೃಷ್ಣ ಪರಮಹಂಸರು ರಾಮಲಾಲ್ ಎಂಬ ಮೂರ್ತಿಯನ್ನು ಪೂಜಿಸಿ ಅದೇ ಮೂರ್ತಿಯು ಅನಂತರೂಪದಿಂದ ದರ್ಶನ ಕೊಡುತ್ತಿದ್ದುದನ್ನು ನೋಡಿ ನೋಡಿ ಆನಂದಿಸುತ್ತಿದ್ದ ಕಥೆಯನ್ನು ನಮ್ಮ ಕಾಲದ ಜನರು ವರ್ಷಕ್ಕೊಮ್ಮೆಯಾದರೂ ಓದುವದಿಲ್ಲವೆ ? ಅಥವ ಯಾರಾದರೂ ಹೇಳಿದ್ದನ್ನು ಕೇಳುವದಿಲ್ಲವೆ ?

ಪ್ರಪಂಚದಲ್ಲಿ ಯಾವುದು ಜ್ಞಾನಮಾರ್ಗ ಕರ್ಮ ಮಾರ್ಗಗಳಿಂದ ಸಾಧಿಸಲು ಸಾಧ್ಯವಲ್ಲವೋ ಅದನ್ನು ಭಕ್ತಿಮಾರ್ಗದಿಂದ ಸಾಧಿಸಲು ಸಾಧ್ಯವೆಂಬುದನ್ನು ನಮ ಪೂರ್ವಾಚಾರ್ಯರುಗಳು ತೋರಿಸಿಕೊಟ್ಟರು. ಚೈತನ್ಯ ಮಹಾ

ಪ್ರಭುಗಳು ತೋರಿಸಿಕೊಟ್ಟರು. ವ್ಯಾಸರಾಯರು ದಾಸರಾಯರುಗಳು ತೋರಿಸಿಕೊಟ್ಟರು. ಅದನ್ನೇ ಶ್ರೀ ರಾಘವೇಂದ್ರ ಸ್ವಾಮಿಗಳವರು ತೋರಿಸಿಕೊಟ್ಟರು. ದಾಸ್ಯಭಾವದ ಪೂಜೆಯಿರದ ಮೂರ್ತಿಯನ್ನು ತಾಂಡವವಾಡಿಸಿದರು. ಪರವಶರಾಗಿ ಹಾಡಿದರು. ವೀಣಾವಾದನ ಮಾಡಿದರು. ಮೂಲ ರಾಮನು ಗೋಪಾಲನಾಗಿ ವೇಣುಗಾನ ಮಾಡಿದನು.



# ೮. ಸ್ವಾಮಿಗಳ ದೇಶ ಸಂಚಾರ.

ಶ್ರೀ ರಾಘವೇಂದ್ರ ಸ್ವಾಮಿಗಳವರು ಸರ್ವದಾ ದೇವತಾರಾಧನೆಯಲ್ಲೂ, ಪಾಠ ಪ್ರವಚನ ಗ್ರಂಥರಚನೆಗಳಲ್ಲೂ ಕಾಲಕಳೆಯುತ್ತಾ ದಕ್ಷಿಣ ದಿಗ್ಯಾತ್ರೆಯನ್ನು ಪೂರೈಸಬೇಕೆಂದು ಸಂಚಾರ ಹೊರಟರು. ಆ ಕಾಲದಲ್ಲಿ ಮಠಾಧಿಪತಿಗಳ ಸಂಚಾರವು ಈಗಿನಷ್ಟು ಸುಗಮವಾಗಿರಲಿಲ್ಲ. ಊರೂರಲ್ಲೂ ಪಂಡಿತರು ಸಂಸ್ಥಾನಾಧಿಪತಿಗಳೆಂಬ ದಾಕ್ಷಿಣ್ಯವಿಡದೆ ವಾದಕ್ಕೆ ಬರುತ್ತಿದ್ದರು. ವಾಕ್ಯಾರ್ಥದಲ್ಲಿ ಒಡಂಬಡಿಸಿದ ವಿನಾ ಸ್ವಾಮಿಗಳನ್ನು ಮುಂದೆ ಬಿಡುತ್ತಿರಲಿಲ್ಲ. ವಾದದಲ್ಲಿ ಗೆದ್ದವರ ಧರ್ಮವನ್ನು ಸೋತವರು ಅವಲಂಬಿಸುವುದಾಗಲಿ, ಸರ್ವಸ್ವವನ್ನೂ ಒಪ್ಪಿಸಿ ಗೆದ್ದವರನ್ನು ಪಲ್ಲಕ್ಕಿಯಲ್ಲಿ ಕೂಡಿಸಿ ಮೆರವಣಿಗೆ ಮಾಡುವುದಾಗಲಿ, ಕನಿಷ್ಟ ಪಕ್ಷ ಜಯಪತ್ರಿಕೆಯನ್ನು ಕೊಡುವುದಾಗಲಿ ಪ್ರತಿಜ್ಞೆಯಾಗುತ್ತಿತ್ತು. ಪೂರ್ವಕಾಲದ ಮತಸ್ಥಾಪಕರೆಲ್ಲರೂ ಹೀಗೆ ಮಾಡಿಯೇ ಅನೇಕ ಜಹಗೀರುಗಳನ್ನೂ, ಬಿರುದಾವಳಿಗಳನ್ನೂ ಸಂಪಾದಿಸಿದರು. ಈ ಯಾತ್ರೆಯಲ್ಲಿ ರಾಘವೇಂದ್ರರನ್ನು ಮೊದಲು ಪ್ರತಿಭಟಿಸಿ ನಿಂತವರು ಭಲ್ಲಪುರಿಯ ಭೈರವಭಟ್ಟ, ವೀರಭದ್ರ ಪಂಡಿತರೆಂಬ ಪ್ರಬಲ ಶೈವವಾದಿಗಳು. ಇವರು ಆಕಾಲದಲ್ಲಿ ಪರಮಪ್ರಸಿದ್ಧರಾಗಿ ಅನೇಕ ಗ್ರಾಮಗಳನ್ನೂ ಶಿಷ್ಯಸಂಘವನ್ನೂ ಪಡೆದಿದ್ದರು. ಉಭಯರೂ ಸ್ವಾಮಿಗಳನ್ನು ಜಯಿಸಬೇಕೆಂದು ವಾದಿಸಿ ನಿರುತ್ತರರಾದರು. ಅವರು ತಮ್ಮ ಜಹಗೀರಿಯಲ್ಲಿ ಎರಡು ಗ್ರಾಮಗಳನ್ನು ಬಿಟ್ಟುಕೊಟ್ಟು ಸ್ವಾಮಿಗಳಿಗೆ ಶರಣಾಗತರಾದರು. ಈ ಪ್ರಾಂತ್ಯದಲ್ಲಿ ವಾದಿನಿಗ್ರಹಮಾಡಿ ಶಿಷ್ಯರನ್ನು ಸಂಪಾದಿಸಿದ ಸ್ಥಳಗಳಲ್ಲಿ ಅರುಣಾಚಲ, ಶಂಖಮುಖ, ಮಧುರಾ, ವೃದ್ಧಾಚಲ, ಶ್ರೀರಂಗ, ಕಂಚಿ, ನಾಮಗಿರಿ, ರಾಮೇಶ್ವರ ಕ್ಷೇತ್ರಗಳು ಮುಖ್ಯವಾದವುಗಳು. ಅನಂತರ ಪಶ್ಚಿಮತೀರದ ಮುಖ್ಯ ಸ್ಥಳಗಳನ್ನು ನೋಡಿ ಶ್ರೀಮದಾಚಾರ್ಯರ ಸರ್ವಾರ್ಥಸಿದ್ಧಿಗೂ ಅವಕಾಶವಾದ ಉಡುಪಿಗೆ ಬಂದರು. ಮಧ್ವಸರೋವರ ಸ್ನಾನ, ಕೃಷ್ಣದರ್ಶನಗಳಿಂದ ತೃಪ್ತರಾಗಿ, ಅನಂತೇಶ್ವರ ದೇವಾಲಯದಲ್ಲಿ ಶ್ರೀಮದಾಚಾರ್ಯರು ಪಾಠಹೇಳುತ್ತಿದ್ದ ಸ್ಥಳದೆದುರಿಗೆ ಒಂದು ವರ್ಷಕಾಲ ಶಿಷ್ಯರಿಗೆ ಪ್ರವಚನಮಾಡಿಸಿದರು.

ಉಡುಪಿಯಲ್ಲಿರುವಾಗಲೇ ವ್ಯಾಸತೀರ್ಥಕೃತ ಚಂದ್ರಿಕಾಕ್ಕೆ "ಪ್ರಕಾಶ"ವೆಂಬ ಹೆಸರಿನ ಟೀಕೆಯನ್ನೂ, ತಂತ್ರದೀಪಿಕಾಕ್ಕೆ "ನ್ಯಾಯಮುಕ್ತಾವಳಿ"ಯೆಂಬ ವ್ಯಾಖ್ಯಾನವನ್ನೂ ರಚಿಸಿ ಶ್ರೀಕೃಷ್ಣನಿಗರ್ಪಿಸಿದರು.

ಅನಂತರ ಸ್ವಾಮಿಗಳು ಸುಬ್ರಹ್ಮಣ್ಯಕ್ಕೂ ಅಲ್ಲಿಂದ ಈಗಿನ ಮೈಸೂರು ಸೀಮೆಗೂ ದಿಗ್ಜಯಮಾಡಿದರು. ಇಂತಹ ಸಂಚಾರದಲ್ಲಿ ವಿಶೇಷವಾಗಿ ನದೀ ತೀರಗಳನ್ನನುಸರಿಸಿ ಪ್ರಯಾಣಮಾಡುವುದೇ ಪದ್ಧತಿಯಾಗಿ ಕಾಣುತ್ತದೆ. ಕಾವೇರೀ ಮೂಲದಲ್ಲಿ (ಸಪ್ತರ್ಷಿಗಳ ಆಶ್ರಮ) ಕೆಲವು ಕಾಲ ಏಕಾಂತವಾಗಿ ತಪಶ್ಚರ್ಯದಲ್ಲಿದ್ದು, ಅಲ್ಲಲ್ಲಿ ಕೆಲವು ಪ್ರಾಣಪ್ರತೀಕಗಳನ್ನು ಪ್ರತಿಷ್ಠೆ ಮಾಡಿರುತ್ತಾರೆ. ಕಾವೇರೀ ತೀರದಿಂದ ಉತ್ತರಕ್ಕೆ ತಿರುಗಿ ಮುಖ್ಯ ಸ್ಥಳಗಳನ್ನು ನೋಡುತ್ತಾ ಶ್ರೀಮಠಕ್ಕೆ ಅನೇಕ ಶಿಷ್ಯರನ್ನು ಸಂಪಾದಿಸಿ ಹರಿಹರೇಶ್ವರನ ಸನ್ನಿಧಿಗೆ (ಹರಿಹರ) ಬಂದರು. ಅಲ್ಲಿಂದ ಪಂಪಾಕ್ಷೇತ್ರಕ್ಕೂ ನವಬೃಂದಾವನಕ್ಕೂ ಹೋಗಿ ತಮ್ಮ ಗುರುಗಳ ದಿವ್ಯ ಬೃಂದಾವನ ದರ್ಶನಮಾಡಿ, ಮಳಖೇಡಗೆ ಹೊರಟು ಮಧ್ಯದಲ್ಲಿ ಯಾದವಾವನಿ (ಆದವಾನಿ) ಯಲ್ಲಿಳಿದರು.

## ಅನಾಥಬಾಲಕ.

ವೆಂಕಣ್ಣನೆಂಬ ಬಾಲಕನೊಬ್ಬನು ಅತಿ ಬಾಲ್ಯದಲ್ಲೇ ತಂದೆತಾಯಿಗಳು ಮೃತರಾದ್ದರಿಂದ ಅನಾಥನಾಗಿ, ತನ್ನ ಸೋದರಮಾವನ ಮನೆಯಲ್ಲಿ ಸೇರಿಕೊಂಡಿದ್ದನು. ಬಾಲಕನ ಸ್ವತ್ತನ್ನು ತಾನೇ ಅನುಭವಿಸುತ್ತಿದ್ದರೂ, ಮಾವನು ಆವನಲ್ಲಿ ಕನಿಕರವಿಲ್ಲದೆ ಮನೆಯ ದನಕರುಗಳನ್ನು ಕಾಯುವುದಕ್ಕೆ ನೇಮಿಸಿದ್ದನು. ಬಾಲಕನಿಗೆ ಅಕ್ಷರಾಭ್ಯಾಸವನ್ನೂ ಮಾಡಿಸಲಿಲ್ಲ. ದನಗಾವರ ಜೊತೆಯಲ್ಲಿ ಸೇರಿಕೊಂಡು ಇವನೂ ಅವರಂತೆ ವೇಷ ಭಾಷೆಗಳನ್ನು ಕಲಿತಿದ್ದನು. ಪಾರಿಗೆಯ ಬ್ರಾಹ್ಮಣ ಬಾಲಕರನ್ನು ನೋಡಿದಾಗ ಇವನಿಗೆ ನಾಚಿಕೆಯಾಗುತ್ತಿತ್ತು. ಇವನು ಒಂದು ದಿನ, ಕಾಡಿಗೆ ದನಗಳನ್ನು ಹೊಡೆದುಕೊಂಡು ಹೋದಾಗ, ನಿದ್ರೆಬರಲು ಒಂದು ಆಲದ ಮರದ ಕೆಳಗೆ ಮಲಗಿದನು. ಆ ದೊಡ್ಡ ಮರದ ಪೊಟ್ಟರೆಯಲ್ಲಿ ಸೇರಿಕೊಂಡಿದ್ದ ಕೃಷ್ಣ ಸರ್ಪವು ನಿಶ್ಶಬ್ದವಾಗಿರುವುದನ್ನು ಕಂಡು ಹೊರಗೆ ಬಂದು ವೆಂಕಣ್ಣನಮೇಲೆ ಹೆಡೆಯೊಡ್ಡಿ ಆಡುತ್ತಿತ್ತು. ಅದನ್ನು ಕಂಡ ಇತರ ಗೋಪಾಲಕರು, ವೆಂಕಣ್ಣನು ಸರ್ಪದಷ್ಟನಾಗಿ ಮೃತನಾದನೆಂದು ಓಡಿಹೋಗಿ ಬಾಲಕನ ಮಾವನಿಗೆ

ತಿಳಿಸಿದರು. ಅವನು ಗಾಬರಿಯಿಂದ ಬಂದು ನೋಡುವಲ್ಲಿ ಹಾವೂ ಇರಲಿಲ್ಲ. ವೆಂಕಣ್ಣನೂ ಎದ್ದಿರಲಿಲ್ಲ. ಮೆಲ್ಲನೆ ಅತ್ತಿತ್ತ ನೋಡುತ್ತಾ, ಹತ್ತಿರಬಂದು ಉಸಿರಾಡುವ ಲಕ್ಷಣವನ್ನು ಕಂಡು, ಬಾಲಕನು ಮೃತನಾಗಿಲ್ಲವೆಂದರಿತು ತಟ್ಟಿ ಎಬ್ಬಿಸಿದನು. ಎದ್ದವನು ಮಾವನನ್ನು ಕಂಡು ಹೆದರಿ, ದೂರ ನಿಂತು ಕೊಂಡನು ಮಾವನು ಇನ್ನು ಮೇಲೆ ಹೀಗೆ ಸಿಕ್ಕಿದ ಕಡೆ ಮಲಗಬೇಡ ವೆಂದು ಜಬರಿಸಿ ಹೊರಟು ಹೋದನು. ಗೋಪಾಲಕರು ವೆಂಕಣ್ಣನನ್ನು ಅದೃಷ್ಟವಂತನೆಂದು ತಿಳಿದರು.

ಹೀಗಿರಲು ವೆಂಕಣ್ಣನು, ಸ್ವಾಮಿಗಳ ಬಳಿ ಜನಸಂದಣಿಯು ಸೇರು ತ್ತಿರುವುದನ್ನು ಕಂಡು, ಯಾರೂ ಇಲ್ಲದ ಸಮಯದಲ್ಲಿ ತಾನೂ ಗುರುಗಳನ್ನು ನೋಡಬೇಕೆಂದು ನಿಶ್ಚಯಿಸಿದನು ವಿದ್ಯವೇನೂ ಬರದಿರುವುದರಿಂದ ಎಲ್ಲ ರೊಡನೆ ಹೋದರೆ ಅವಮಾನವಾದೀತೆಂಬ ಭಯವು ಅವನನ್ನು ಬಾಧಿಸಿತು.

ಮರುದಿನ ಬೆಳಗಾಗುತ್ತಲೆ, ಶುದ್ಧನಾಗಿ ಗೋಪೀಚಂದನವನ್ನು ಹಚ್ಚಿ ಕೊಂಡು, ಸ್ವಾಮಿಗಳು ಜಪಕ್ಕೆ ಕುಳಿತಿರುವಾಗ ಹೋಗಿ ಅಡ್ಡಬಿದ್ದು ಖಿನ್ನ ನಾಗಿ ನಿಂತುಕೊಂಡನು. ಇವನ ದೀನಸ್ವಭಾವವನ್ನು ನೋಡಿ ಸ್ವಾಮಿಗಳು ದಯೆಯಿಂದ,—"ಅಪ್ಪಾ ನೀನಾರು ? ಯಾತಕ್ಕೆ ನಿಂತಿರುವೆ ?" ಎಂದು ಕೇಳಿದರು ಅನಾಥನು ಅಷ್ಟಕ್ಕೇ ಸಕಲಾರ್ಥವೂ ಸಿದ್ಧಿಸಿತೆಂದು ಭಕ್ತಿಯಿಂದ ಕೈಜೋಡಿಸಿ,—"ಸ್ವಾಮಿಾ ನಾನು ಅನಾಥ. ಬಾಲ್ಯದಲ್ಲಿ ತಂದೆತಾಯಿಗಳು ತೀರಿಹೋದರು. ಪಾಲಕರಿಲ್ಲದೆ ಸೋದರಮಾವನ ಮನೆಗೆ ಬಂದೆನು. ಉಪ ನಯನವಾಗಿದ್ದರೂ ಸಂಧ್ಯಾವಂದನೆ ಸಹ ಸರಿಯಾಗಿ ಬರುತ್ತಿಲ್ಲ. ಮಾವನ ಮನೆಯ ದನಗಾವುದರಲ್ಲೇ ಸಾಕಾಗಿದೆ. ವಿದ್ಯೆಯನ್ನಾದರೂ ಕಲಿಸುವರಿಲ್ಲ. ಬ್ರಾಹ್ಮಣನಾಗಿ ಹುಟ್ಟಿದರೂ ಹಣೆಯಲ್ಲಿ ಹೀಗೆ ಬರೆಯಿತು" ಎಂದು ದೀರ್ಘ ದಂಡವಾಡಿದನು. ಸ್ವಾಮಿಗಳು ದಯೆಯಿಂದ ಹತ್ತಿರ ಕರೆದು, ಹೆದರಬೇಡ ವೆಂದು ಚಕ್ರಾಂಕನಮಾಡಿ—"ಏಸಕ್ಸಮಯದಲ್ಲಿ ನಮ್ಮನ್ನು ಸ್ಮರಿಸಿಕೋ, ನಿನ್ನ ಕಷ್ಟಗಳು ದೂರವಾಗಿ ವಿದ್ಯಾಬುದ್ಧಿಗಳು ತಾವಾಗಿ ಬರುವವು ; ನೀನು ಮಾನ್ಯನಾಗಿ ಬಾಳುವೆ"ಯೆಂದು ಹರಸಿ ಆ ದಿನವೇ ಪ್ರಯಾಣಮಾಡಿದರು.

ಮಠಕ್ಕೆ ಬಂದಿದ್ದವರು ಇದೇನು ವಿಚಿತ್ರಸಂಧಿ ! ಮೊನ್ನೆ ತಾನೇ ಇವನು ಕಾಡಿನಲ್ಲಿ ಮಲಗಿದ್ದನಂತೆ ; ಸರ್ಪವು ಇವನ ತಲೆಯಮೇಲೆ ಹೆಡೆಯಾಡಿಸು

ತ್ತಿತ್ತಂತೆ. ಮನುಷ್ಯನ ಮೇಲೆ ಸರ್ಪವು ಹೆಡೆಯಾಡಿಸುವುದೇನು ಸಾಮಾನ್ಯವೋ ? ಇವನೊಳ್ಳೇ ಅದೃಷ್ಟಶಾಲಿಯಾಗುವನು ; ಸ್ವಾಮಿಗಳೂ ಚಕ್ರಾಂಕನಮಾಡಿ ಅನುಗ್ರಹಿಸಿರುವರು ; "ಸ್ತ್ರೀಣಾಂಚ ಚಿತ್ತಂ ಪುರುಷಸ್ಯ ಭಾಗ್ಯಂ" ಎಂಬಂತೆ ಬಲ್ಲವರಾರೆಂದು ಅನಾಥನ ಪ್ರಶಂಸೆಗೆ ಪ್ರಾರಂಭಿಸಿದರು.

ಸೋದರಮಾವನಿಗೀಸಂಗತಿ ತಿಳಿಯಿತು. ಅಸೂಯೆಯಿಂದ ವೆಂಕಣ್ಣನನ್ನು ಊರದನಗಳನ್ನು ಕಾವ ಅದೃಷ್ಟವಂತನೆಂದು ಪರಿಹಾಸ್ಯಮಾಡಿಬಿಟ್ಟನು. ಎಲ್ಲರೂ ಸಂಪತ್ಸಮಯವನ್ನು ನಿರೀಕ್ಷಿಸಿದರೆ, ವೆಂಕಣ್ಣನು ತನಗೆ ವಿಪತ್ತು ಯಾವಾಗ ಬರುವುದೋ ಎಂದು ಎದುರುನೋಡುತ್ತಿದ್ದನು. ಕೆಲವು ಕಾಲದಮೇಲೆ ಮಾವನು ಮೃತನಾಗಲು ವೆಂಕಣ್ಣನು ತನ್ನ ಹಳ್ಳಿಗೇ ಬಂದು ನೆಲೆಸಿದನು.

## ಅಸದುಲ್ಲಾ ಖಾನ್ (ಕ್ರಿ. ೧೬೬೨-೮೨)

ಈ ಕಾಲದಲ್ಲಿ ಅಸದುಲ್ಲನು ಆದವಾನಿಯ ಸುಭಾದಾರನಾಗಿ ರಾಯಚೂರು ಮೊದಲಾದ ಕರ್ಣಾಟಕ ಪ್ರಾಂತ್ಯಗಳನ್ನಾಳುತ್ತಿದ್ದನು. ಬಿಜಾಪುರದ ಬಾದಷಹರಿಗೆ ನವಾಬನು ಅಂಕಿತನಾಗಿದ್ದರೂ ಸ್ವತಂತ್ರನಾಗಿ ರಾಜ್ಯವನ್ನು ವಿಸ್ತರಿಸುತ್ತಿದ್ದನು. ಯುದ್ಧದ ಖರ್ಚಿಗೆ ಹಣಬೇಕಾದಾಗ ನವಾಬನೇ ಪ್ರಜೆಗಳಿಂದ ನಜರಾಣದ ವಸೂಲಿಗೆ ಬಂದು ಕೂಡುತ್ತಿದ್ದನು. ಕೇಳಿದಷ್ಟು ಹಣವನ್ನು ಕೊಡದಿದ್ದರೆ ಜನರ ಮಾನಪ್ರಾಣಗಳುಳಿಯುತ್ತಿರಲಿಲ್ಲ. ಹೀಗಿರಲು ವೆಂಕಣ್ಣನ ಹಳ್ಳಿಗೂ ಸರದಿ ಬಂದಿತು. ಜನರು ಗ್ರಾಮವನ್ನಲಂಕರಿಸಿ, ಕಾಣಿಕೆಯನ್ನೊಪ್ಪಿಸಲು ನವಾಬನನ್ನು ಎದುರುನೋಡುತ್ತಿದ್ದರು. ಅಸದುಲ್ಲನು ಆನೆಯಮೇಲೆ ಕುಳಿತು ಗ್ರಾಮವನ್ನು ಪ್ರವೇಶಿಸಿದನು. ವರಸೆಯಾಗಿ ಜನರು ಕಾಣಿಕೆಯನ್ನೊಪ್ಪಿಸುತ್ತಾ ಬಂದರು. ವೆಂಕಣ್ಣನೂ ಒಳ್ಳೆಯ ಉಡುಪು ಹಾಕಿಕೊಂಡು ಮೆರವಣಿಗೆಯ ಜೊತೆಯಲ್ಲಿ ಬರುತ್ತಿದ್ದನು. ವೆಂಕಣ್ಣನಂಥವರಿಗೆ ಉತ್ಸವವು ಅಂದವಾಗಿ ಕಾಣುತ್ತಿತ್ತು. ಅಷ್ಟರಲ್ಲಿ ಅಶ್ವಸೈನಿಕನೊಬ್ಬನು ನವಾಬನಿಗೊಂದು ವರದಿಯ ಪತ್ರವನ್ನೊಪ್ಪಿಸಿದನು. ಲಕ್ಕೋಟೆಯನ್ನೊಡೆದು ಓದುವ ಕಾರಕೂನರು ಬೇಕಾಗಿತ್ತು. ನವಾಬನಿಗೆ ಓದುವದಕ್ಕೆ ಬಂದರೂ ಅಧಿಕಾರದ ಠೀವಿಗೆ ಮತ್ತೊಬ್ಬರಿಂದಲೇ ಓದಿಸಿ ಕೇಳಬೇಕಾಗಿತ್ತು. ನವಾಬನೆಂದಮೇಲೆ

ಕೇಳುವದೇನು ? ಸುತ್ತುಮುತ್ತ ನೋಡಿ ಆನೆಯು ಹತ್ತಿರ ನಡೆದು ಬರುತ್ತಿದ್ದ ವೆಂಕಣ್ಣನನ್ನು ಮೇಲೆ ಕೂಡಿಸುವಂತೆ ಅಪ್ಪಣೆಮಾಡಿದನು. ದೂತರಿಗೆ ಅಷ್ಟೇ ಸಾಕು ; ನಿಮಿಷವೆನ್ನುವುದರೊಳಗೆ ವೆಂಕಣ್ಣನನ್ನು ಮಾವಟಿಗನ ಪಕ್ಕದಲ್ಲಿ ಕೂಡಿಸಿದರು. ನೋಡುವುದಕ್ಕೆ ಯುವಕನು ಪಟುವಾಗಿ ಕಾಣುತ್ತಿದ್ದನು. ಅಸದುಲ್ಲನು ವೆಂಕಣ್ಣನ ಕೈಗೆ ಲಕ್ಕೋಟೆಯನ್ನು ಕೊಟ್ಟು ಸುನಾವಣೆ ಮಾಡೆಂದನು. ಓದುವುದಕ್ಕೆ ಬರದೆಂದು ಆವನು ಗಡಗುಟ್ಟುತ್ತಾ ಹೇಳಿದರೂ ನವಾಬನು ನಂಬಲಿಲ್ಲ —"ಬ್ರಾಹ್ಮಣನಾಗಿ ಓದು ಬರದೆಂದು ಹೇಳುವೆಯಾ ! ಕಾಫಿರ್, ಓದದಿದ್ದರೆ ಕೆಳಗೆ ತಳ್ಳಿ ಆನೆಯಕಾಲಿನಿಂದ ತುಳಿಸಿಬಿಡುತ್ತೇನೆ ; ಒಳ್ಳೇ ಮಾತಿನಿಂದ ಓದು" ಎಂದು ಗದರಿಸಿದನು. ವೆಂಕಣ್ಣನು ನಿರುಪಾಯನಾಗಿ ಚಿಂತಿಸುತ್ತಿರಲು ಸುಕೃತ ವಶದಿಂದ ಗುರುಗಳಾಜ್ಞೆಯ ನೆನಪಾಯಿತು.— "ಶ್ರೀ ರಾಘವೇಂದ್ರಾಯನಮಃ, ಶ್ರೀ ರಾಘವೇಂದ್ರಾಯನಮಃ" ಎಂದು ಭಕ್ತಿಯಿಂದ ಸ್ಮರಿಸಿ ಲಕ್ಕೋಟೆಯನ್ನೊಡೆದನು. ಗುರುಗಳನುಗ್ರಹದಿಂದ ಕಾಗದವನ್ನು ತೆಗೆದುಕೊಳ್ಳುತ್ತಲೇ ಎಷ್ಟೋ ಕಾಲದಿಂದ ಓದಿದವನಂತೆ ವರದಿಯನ್ನು ಗಡಗಡನೆ ಓದಿದನು. ದೈವಯೋಗದಿಂದ ಯುದ್ಧಕ್ಕೆ ಹೋಗಿದ್ದ ನವಾಬನ ಸೈನಿಕರು ರಾಜ್ಯವನ್ನು ಜೈಸಿದ ವರ್ತಮಾನ ವರದಿಯಲ್ಲಿತ್ತು. ನವಾಬನಿಗೆ ಪರಮಾನಂದವಾಯಿತು. ವೆಂಕಣ್ಣನಿಗೆ ಬೇಕಾದ ಬಹುಮಾನವನ್ನೂ ದಿವಾನನೆಂಬ ಕಿತಾಬನ್ನೂ ಕೊಟ್ಟು ಪ್ರಯಾಣಮಾಡಿದನು.

ಅಂದಿನಿಂದ ವೆಂಕಣ್ಣನ ಪ್ರಾಬಲ್ಯ ಹೆಚ್ಚಿತು. ನವಾಬನು ಇವನನ್ನು ಆಗಾಗ ಕರೆಸಿಕೊಂಡು ರಾಜ್ಯಕಾರದ ಸಲಹೆಯನ್ನು ಕೇಳುತ್ತ ಬಂದನು. ರಾಜನೀತಿಯಲ್ಲೂ ಕನ್ನಡ ಉರ್ದು ಭಾಷೆಗಳ ಪರಿವರ್ತನದಲ್ಲೂ ವೆಂಕಣ್ಣನ ಸಮಾನರೇ ಇಲ್ಲವೆಂಬ ಖ್ಯಾತಿಯುಂಟಾಯಿತು. ಆದವಾನಿಯಲ್ಲೇ ನವಾಬನು ವೆಂಕಣ್ಣನಿಗೊಂದು ಮನೆಯನ್ನು ಕಟ್ಟಿಸಿಕೊಟ್ಟನು. ಕ್ರಮೇಣ ವೆಂಕಣ್ಣನಿಗೆ ಆದವಾನಿಯ ದಿವಾನಗಿರಿಯಾಯಿತು.

ಬಾಲ್ಯದಲ್ಲಿ ತಂದೆತಾಯಿಗಳನ್ನು ಕಳೆದುಕೊಂಡು, ಪಾಲಕರಿಲ್ಲದೆ ಮಾವನ ಮನೆಸೇರಿ ದನಗಳನ್ನು ಕಾದುಕೊಂಡಿದ್ದ ಹುಂಡನೂ, ಶ್ರೀ ರಾಘ

ವೇಂದ್ರರನುಗ್ರಹದಿಂದ ವಿದ್ಯಾತಂತನೆನಿಸಿ, ಪೂರ್ವದ ಜೀವನದಲ್ಲಿ ಪಡೆಯಬ ಹುದಾದ ಪದವಿಯ ಪರಮಾಧಿಯನ್ನು ಪಡೆದನು

ಶ್ಲೋ ॥ ನಹ್ಯಮ್ಮಯಾನಿ ತೀರ್ಥಾನಿ
ನದೇವಾ ಮೃಚ್ಛಿಲಾಮಯಾಃ
ತೇ ಪುನಂತ್ಯುರುಕಾಲೇನ
ದರ್ಶನಾದೇವಸಾಧವಃ ॥೧॥

ಎಂಬ ವ್ಯಾಸೋಕ್ತಿ ಗೆಂದಾದರೂ ಚ್ಯುತಿಯುಂಟೇ ?

ಇತ್ತ ಸ್ವಾಮಿಗಳು ಮಳಖೇಡೆಯಲ್ಲಿ ಜಯತೀರ್ಥಕೃತ ಟೀಕಾ ಗ್ರಂಥಗಳನ್ನು, ಅವರ ದಿವ್ಯ ಸನ್ನಿಧಿಯಲ್ಲೇ ಪಾರಹೇಳಿ ಮಂಗಳಮಾಡಿದರು. ಕೃಷ್ಣಾತೀರದ ಸಂಚಾರದಲ್ಲಿ ಅಣುಭಾಷ್ಯಕ್ಕೆ ಟೀಕೆಯನ್ನು ರಚಿಸಿ ಶ್ರೀಹರಿಗೆ ಸಮರ್ಪಿಸಿದರು.

ವಿಜಯನಗರಕ್ಕೆ (ಉತ್ತರವರ್ಕಾರದಲ್ಲಿ ಜವಾನ್ಸ್ವಾರಿ) ಬರಲು, ಅಲ್ಲಿನ ರಾಜನು ವಿದ್ಯಾಪಕ್ಷಪಾತಿಯಾಗಿದ್ದುದರಿಂದ, ಸ್ವಾಮಿಗಳನ್ನು ಯೋಗ್ಯರೀತಿಯಿಂದ ಸತ್ಕರಿಸಿದನು. ಆ ರಾಜನ ಆಸ್ಥಾನದಲ್ಲಿ ಮಹಾ ಪ್ರಖ್ಯಾತ ಪಂಡಿತರುಗಳಿದ್ದರು. ಅವರಿಗೂ ಸ್ವಾಮಿಗಳಿಗೂ "ಜಗತ್ಸತ್ಯತ್ವ, ಜೀವೇಶ್ವರಭೇದ-ಪಂಚಜೀವ" ವಿಷಯಗಳಲ್ಲಿ ಜಿಜ್ಞಾಸವಾಗಿ, ವಿದ್ವಾಂಸರನೇಕರು ಸ್ವಾಮಿಗಳ ಶಿಷ್ಯರಾದರು. ಮಹಾರಾಜನು ಸ್ವಾಮಿಗಳಿಗೆ ಶ್ವೇತಛತ್ರ ಮರ್ಯಾದೆಯನ್ನೂ ಧನಕನಕವಾಹನಗಳನ್ನೂ ಕಾಣಿಕೆಯಾಗಿ ಸಮರ್ಪಿಸಿದನು.

ಉತ್ತರಯಾತ್ರೆಯಲ್ಲಿ ಕಾಶಿ, ಗಯಾ, ಪ್ರಯಾಗ, ಬದರಿ, ಅಯೋಧ್ಯಾ, ಬೃಂದಾವನ ಮೊದಲಾದ ಕ್ಷೇತ್ರಗಳಲ್ಲಿ ಸಂಚರಿಸಿ, ವಿದ್ಯಾಪಾಂಡಿತ್ಯದಿಂದಲೂ ತಪಃಪ್ರಭಾವದಿಂದಲೂ ಬಹು ಶಿಷ್ಯರನ್ನು ಸಂಪಾದಿಸಿ ದಕ್ಷಿಣಕ್ಕೆ ತಿರುಗಿದರು. ಮಾರ್ಗದಲ್ಲಿ ಕೊಲ್ಹಾಪುರ ಪಂಢರಪುರಗಳಲ್ಲಿ ಲಕ್ಷ್ಮೀನಾರಾಯಣರ ಸೇವೆಯಲ್ಲಿ ಕೆಲವು ದಿವಸಗಳನ್ನು ಕಳೆದರು. ಬಿಜಾಪುರ ಪ್ರಾಂತ್ಯದಲ್ಲಿದ್ದಾಗ ಒಬ್ಬ ಬ್ರಾಹ್ಮಣ ಸೇವಕನು ಸ್ವಾಮಿಗಳ ವೃತ್ತಿಕಾಶೌಚದ ಸಮಯದಲ್ಲಿ, ತಾನು ಬಂದು ಬಹಳ ದಿವಸಗಳಾದವೆಂತಲೂ, ಊರಿಗೆ ಹೋಗಿ ಲಗ್ನಮಾಡಿಕೊಳ್ಳಬೇಕೆಂತಲೂ, ತನ್ನ ಸಂಬಳವನ್ನು ಕೊಡಿರೆಂತಲೂ ಕೇಳಿದನು.

ಸ್ವಾಮಿಗಳು ನಕ್ಕು,—'ಈಗ ನನ್ನ ಕೈಲಿರುವುದು ಮೃತ್ತಿಕೆ, ಇದನ್ನೇ ಬೇಕಾದರೆ ತೆಗೆದುಕೋ' ಎಂದರು. ಸೇವಕನು ಭಕ್ತಿಯಿಂದ, ಅದನ್ನೇ ದಯಪಾಲಿಸಿದರೆ ಕಾರ್ಯವನ್ನು ಸಾಧಿಸಿಕೊಳ್ಳುವೆನೆಂದು ಕೈಯೊಡ್ಡಿದನು. ನಿನಗಷ್ಟು ಭಕ್ತಿಯಿದ್ದರೆ ಕೊಳ್ಳೆಂದು ಅವನ ಕೈಗೆ ಒಂದು ಹಿಡಿ ಮಣ್ಣನ್ನು ಕೊಟ್ಟರು. ಸೇವಕನು ಪಂಚೆಯಲ್ಲಿ ಕಟ್ಟಿಕೊಂಡು ನಮಸ್ಕರಿಸಿ, ಮಾರ್ಗದಲ್ಲೊಂದು ಗ್ರಾಮದಲ್ಲಿ ರಾತ್ರಿಯನ್ನು ಕಳೆಯೋಣವೆಂದು ಶ್ರೀಮಂತನೊಬ್ಬನ ಜಗುಲಿಯ ಮೇಲೆ ತಂಗಿದನು. ಅಪರರಾತ್ರಿಯಾಗಿದ್ದುದರಿಂದ ಮನೆಯವರನ್ನು ಕೂಗಿ ಬಾಗಿಲನ್ನು ತೆಗೆಸಲಿಲ್ಲ. ಆ ದೇಸಾಯಿಯ ಹೆಂಡತಿಯು, ಒಂದೆರಡು ದಿವಸಗಳಿಂದ ವೇದನೆಯನ್ನು ಅನುಭವಿಸುತ್ತಿದ್ದವಳು, ಆ ರಾತ್ರಿಯೇ ಗಂಡು ಮಗುವನ್ನು ಪ್ರಸವಿಸಿದಳು. ಇದಾದ ಸ್ವಲ್ಪ ಹೊತ್ತಿನಲ್ಲಿ ಒಂದು ಬ್ರಹ್ಮರಾಕ್ಷಸವು ಭಯಂಕರ ರೂಪದಿಂದ ಜಗುಲಿಯ ಮೇಲೆ ಮಲಗಿರುವ ಬ್ರಾಹ್ಮಣನನ್ನು ಜಬರಿಸಿ,—"ದಾರಿಯನ್ನು ಬಿಡು; ಇಲ್ಲವೇ ತಲೆದಿಂಬಿನಲ್ಲಿರುವುದನ್ನು ಬಿಸಾಡು" ಎಂದು ಗರ್ಜಿಸಿತು. ಬ್ರಾಹ್ಮಣನಿಗೆ ಮೃತ್ತಿಕೆಯ ಮಹತ್ವದ ಗೌರವವು ಮತ್ತಷ್ಟು ಹೆಚ್ಚಿತು ಆ ಬ್ರಹ್ಮರಾಕ್ಷಸವಾದರೋ, ಹಿಂದೆ ದೇಸಾಯಿಗಾದ ಏಳು ಮಕ್ಕಳನ್ನೂ ಹುಟ್ಟಿದ ಕೂಡಲೇ ಕೊಂದಿತ್ತು. ಭೂತನ ವಿಕಾರರೂಪವನ್ನು ನೋಡಿದ ಬ್ರಾಹ್ಮಣನು ಏನು ಮಾಡುವುದಕ್ಕೂ ತೋರದೆ ನಿರುಪಾಯನಾಗಿ ಗುರುಗಳನ್ನು ಸ್ಮರಿಸುತ್ತಾ ಕುಳಿತನು. ಸರಸ್ವತಿಯ ಪಿಶಾಚ ಜನ್ಮವನ್ನು ಸ್ವಾಮಿಗಳು ಪರಿಹರಿಸಿ ಸದ್ಗತಿಯಿತ್ತುದರ ನೆನವು ಅವನಿಗಾಯಿತು ಆಗಲವನು ಧೈರ್ಯದಿಂದ ಆದದ್ದಾಗಲೆಂದು 'ಶ್ರೀರಾಘವೇಂದ್ರಾಯ ನಮಃ' ಎನ್ನುತ್ತಾ ಮೃತ್ತಿಕೆಯ ಗಂಟನ್ನೇ ಭೂತನಮೇಲೆಸೆದನು ಭೂತನು ಮೃತ್ತಿಕಾ ಸ್ಪರ್ಶಮಾತ್ರದಿಂದ ಗಟ್ಟಿಯಾಗಿ ಕೂಗಿಕೊಂಡು ಅಲ್ಲೇ ದಗ್ಧವಾಯಿತು. ಈ ಗದ್ದಲವನ್ನು ಕೇಳಿದ ಗೃಹಸ್ಥನು ಬಾಗಿಲು ತೆಗೆದು ಬ್ರಾಹ್ಮಣನನ್ನು ನೋಡಿ ಭಕ್ತಿಯಿಂದ,–"ಅದೇಕೆ ಸ್ವಾಮಿ ಇಲ್ಲಿ ಕುಳಿತಿರುವಿರಿ? ಯಾವ ಊರು ? ಈಗಾದ ಗಲಭೆಯೇನು ? ಒಳಕ್ಕೆ ಬನ್ನಿರಿ" ಎಂದು ಮಾತಾಡಿಸಿದನು. ಬ್ರಾಹ್ಮಣನು ಸ್ವಲ್ಪ ಹೊತ್ತು ಚೇತರಿಸಿಕೊಂಡು ತನ್ನ ವಿಚಾರವನ್ನೂ ಆಗ ನಡೆದ ವಿವರವನ್ನೂ ದೇಸಾಯಿಗೆ ಹೇಳಿದನು. ಬ್ರಾಹ್ಮಣನು ಸ್ವಾಮಿಗಳ ಶಿಷ್ಯನೆಂದು ತಿಳಿದ ಕಾರಣ ದೇಸಾಯಿಯು ಕೆಲವುಕಾಲ

ಆತನನ್ನು ಬಿಡದೆ ತನ್ನ ಮನೆಯಲ್ಲಿಯೇ ಇಟ್ಟುಕೊಂಡನು. ಜನಿಸಿದ ಗಂಡುಶಿಶುವು ಯಾವ ಆಪತ್ತಿಗೂ ಒಳಗಾಗದೆ ಸುಖದಿಂದ ಬೆಳೆಯಿತು. ಬ್ರಾಹ್ಮಣನ ಕಾಲುಗುಣದಿಂದಲೂ, ಸ್ವಾಮಿಗಳ ಮೃತ್ತಿಕೆಯ ಪ್ರಭಾವದಿಂದಲೂ, ತನ್ನ ಶಿಶುವಿನ ವಿಪನ್ನಿವಾರಣೆಯಾಯಿತೆಂದು ದೇಸಾಯಿಗೆ ನಂಬಿಕೆಯಾಯಿತು. ಆ ಬ್ರಾಹ್ಮಣನಿಗೆ ತನ್ನ ಅಣ್ಣನ ಮಗಳನ್ನೇ ಕೊಟ್ಟು ವಿವಾಹ ಮಾಡಿ ಬೇಕಾದಷ್ಟು ಹಣವನ್ನೂ ಕೊಟ್ಟನು.

ಇದಾದ ಕೆಲವು ದಿವಸಗಳ ಮೇಲೆ ಸ್ವಾಮಿಗಳು ಕಿರೀಟಗಿರಿಯ (ಗದಗು ತಾಲ್ಲೂಕು) ದೇಸಾಯಿ ರಘುನಾಥರಾಯನ ಪ್ರಾರ್ಥನೆಯಂತೆ ಅವನ ಮನೆಯಲ್ಲಿ ಬಂದಿಳಿದರು. ಸುತ್ತಮುತ್ತಣ ಸಾವಿರಾರು ಜನರು ಗುರುದರ್ಶನಾಭಿಲಾಷೆಯಿಂದ ಬಂದು ಸೇರಿದರು ದೇಸಾಯಿಯು ಜನಸಂದಣಿಗೆ ತಕ್ಕಂತೆ ಪಾಕಭೋಜನಶಾಲೆಗಳನ್ನು ಕಟ್ಟಿಸಿದ್ದನು. ಪಾಕಶಾಲೆಯಲ್ಲಿ ಬೇಕಾದ ಅಡಿಗೆಗಳಾಗುತ್ತಿದ್ದವು. ಅಡಿಗೆಯ ಮನೆಯಲ್ಲಿ ಸಾವಿರಾರು ಜನರಿಗೆ ಸಮೃದ್ಧಿಯಾಗಿ ಬಡಿಸುವಷ್ಟು ಮಾವಿನಹಣ್ಣಿನ ಸೀಕರಣೆಯು ಒಂದು ಗಚ್ಚಿನ ತುಂಬಾ ತುಂಬಿ ಸಿದ್ಧವಾಗಿತ್ತು. ಬಂದ ಜನರು ಸ್ನಾನ ಜಪ ಗುರುದರ್ಶನ ತತ್ಪರರಾಗಿದ್ದರು. ಗೃಹಸ್ಥನೂ ಗೃಹಿಣಿಯೂ ಮೇಲ್ವಿಚಾರಣೆಯಲ್ಲಿ ವಿರಾಮವಿಲ್ಲದೆ ತಿರುಗುತ್ತಿದ್ದರು. ಸ್ವಾಮಿಗಳ ಪೂಜೆಗಾರಂಭವಾಗಲು ಎಲ್ಲಿದ್ದವರೂ ಹಜಾರಕ್ಕೆ ಬಂದರು. ದೇಸಾಯಿಯವರಿಗೆ ಐದಾರು ವರ್ಷದ ಸುಂದರಬಾಲಕನೊಬ್ಬನಿದ್ದನು. ಅವನು ಅಲ್ಲಲ್ಲಿ ಓಡಾಡುತ್ತಾ, ಚಿಕ್ಕಡಿಗೆಯ ಮನೆಯ ಸೀಕರಣೆಯ ಗಚ್ಚನ್ನು ಬಗ್ಗಿನೋಡಿ, ವವನ ತಪ್ಪಿ ಬಿದ್ದು ಸ್ವಲ್ಪ ಕಾಲದೊಳಗೇ ಪ್ರಾಣಬಿಟ್ಟನು. ಯಜಮಾನಿಯು ಪೂಜೆಯನ್ನು ತೋರಿಸಬೇಕೆಂದು ಮಗನನ್ನು ಹುಡುಕಿ ಕಾಣದೆ, ಸೀಕರಣೆಯ ಗಚ್ಚಿನಲ್ಲಿ ತೇಲುತ್ತಿದ್ದ ಶವವನ್ನು ನೋಡಿದಳು. ಗಲಭೆಯಾದರೆ ಬಂದವರಿಗೆಲ್ಲಾ ಸಂತಾಪವಾದೀತೆಂದು, ಆ ಸಾಧ್ವಿಯು ದುಃಖವನ್ನು ತೋರ್ಪಡಿಸದೆ ಪತಿಯನ್ನು ಕರೆದು ತೋರಿಸಿದಳು. ಸತಿಪತಿಗಳಿಬ್ಬರೂ ಸ್ವಲ್ಪ ಹೊತ್ತು ಚಿಂತಿಸಿ ಮುಂದೇನು ಮಾಡುವುದಕ್ಕೂ ತಿಳಿಯದೆ ಮುಗ್ಧರಾದರು. 'ನೀನು ಹೇಳಿದಂತೆ—ನೀವು ಹೇಳಿದಂತೆ' ಎಂದು ಸ್ವಲ್ಪ ಹೊತ್ತು ಕಳೆದರು. ದೇಸಾಯಿಗಂತೂ ಉತ್ತರ ತೋರಲಿಲ್ಲ. ಆ ವಿಚಕ್ಷಣಳಾದ

ಸಾಧ್ವಿಯು—“ಆದದ್ದಾಯಿತು, ಹುಡುಗನು ಮೃತನಾಗಿರುವ ಸಂಗತಿ ತಿಳಿದರೆ ಎಲ್ಲರೂ ಮಧ್ಯಾಹ್ನಕಾಲದಲ್ಲಿ ಊಟವಿಲ್ಲದೆ ಹೊರಟುಹೋಗುವರು. ಎಷ್ಟು ಕೇಳಿಕೊಂಡರೂ ನಿಲ್ಲುವುದಿಲ್ಲ. ಯತಿಗಳೂ ಬ್ರಾಹ್ಮಣರೂ ಉಪವಾಸ ಹೋಗುವುದು ನಮಗೆ ಶ್ರೇಯಸ್ಸಲ್ಲ. ಹರಿಗುರುಗಳ ಅನುಗ್ರಹದಿಂದ ಮತ್ತೆ ಮಕ್ಕಳಾದಾರು ಇಷ್ಟು ಮಂದಿ ಮಹಾತ್ಮರು ನಮ್ಮ ಮನೆಗೇಕೆ ಬಂದಾರು ? ಈಗ ಮೃತಶರೀರವನ್ನು ಇಲ್ಲೇ ಮುಚ್ಚಿಟ್ಟು ಎಲ್ಲರ ಭೋಜನವಾಗುವವರೆಗೂ ದೂರದೂರ ಇರುವುದುಚಿತ”ವೆಂದು ಸೂಚಿಸಿದಳು. ಸಲಹೆಯು ದೇಸಾಯಿಯ ಮನಸ್ಸಿಗೆ ಬಂತು. ಅಡಿಗೆಯ ಮನೆಗೆ ಬೀಗ ಹಾಕಿ ದುಃಖವನ್ನಡಗಿಸಿಕೊಂಡು, ಒಬ್ಬೊಬ್ಬರೊಂದೊಂದು ಕಡೆ ಉಭಯರೂ ತಿರುಗಲಾರಂಭಿಸಿದರು.

ಪೂಜಾಕಾಲಕ್ಕೆ ದೇಸಾಯರು ಬರಲಿಲ್ಲವೆಂದು ಜನರಾಡುವುದು ತಪ್ಪಲಿಲ್ಲ ಸ್ವಾಮಿಗಳು ತೀರ್ಥವಿನಿಯೋಗ ಕಾಲದಲ್ಲಿ ದೇಸಾಯಿಯನ್ನು ಕರೆಯಲು ಹರಿಕಾರನಿಗೆ ಹೇಳಿದರು. ಅವನು ತನಗಿನ್ನೂ ಸ್ನಾನವಿಲ್ಲ ; ಕೆಲಸದಲ್ಲಿದ್ದೇನೆ ; ಭಿಕ್ಷವಾಗುತ್ತಲೇ ತೀರ್ಥಕ್ಕೆ ಬರುತ್ತೇನೆಂದು ಪ್ರತ್ಯುತ್ತರ ಹೇಳಿದನು. ಮತ್ತೆಮತ್ತೆ ಇದೇ ಪ್ರಶ್ನೋತ್ತರವಾಯಿತು. ಸ್ವಾಮಿಗಳು ಹೇಗಿದ್ದರೆ ಹಾಗೇ ಬರಬೇಕೆಂದು ಅಪ್ಪಣೆ ಮಾಡಿದರು ದೇಸಾಯಿಗೆ ಮೀರಬಾರದ ವಿಷಯವಾಯಿತು. ವ್ಯಸನವೆಲ್ಲವನ್ನೂ ಅಡಗಿಸಿಕೊಂಡು ದೂರದಲ್ಲೊಂದು ಕಡೆ ನಿಂತನು.

ಸ್ವಾಮಿಗಳು—ಏನು ದೇಸಾಯರೇ ಒಬ್ಬರೇ ಬಂದಿರಿ ?

ದೇಸಾಯಿ—ನಮ್ಮ ಜನರೆಲ್ಲಾ ಕೆಲಸದಲ್ಲಿರುವರು. ಭಿಕ್ಷವಾದಮೇಲೆ ತೀರ್ಥಕ್ಕೆ ಬರುವರು.

ಸ್ವಾ—ನಿಮ್ಮವರ ಮಾತಲ್ಲ.

ದೇ—ಮತ್ತಾರು ಬರಬೇಕು ?

ಸ್ವಾ—ನಿಮ್ಮ ಚಿರಂಜೀವಿ.

ದೇ—ಇಲ್ಲ. ಅವನು ಬರುವಹಾಗಿಲ್ಲ. ಮಾವನ ಮನೆಗೆ ಹೋಗಿದ್ದಾನೆ.

ಸ್ವಾ—ಇವತ್ತೇಕೆ ಕಳುಹಿಸಿದಿರಿ ? ಅವನನ್ನು ಕರೆಯಿಸಿರಿ. ಅವನು ಬಂದಲ್ಲದೆ ಭಿಕ್ಷೆಯನ್ನು ತೆಗೆದುಕೊಳ್ಳುವುದಿಲ್ಲ.

ದೇ—(ದುಃಖವು ಮಿತಿಮೀರಲು, ಇನ್ನೇನುಮಾಡಲಿ, ಪರೀಕ್ಷಾಕಾಲ ಬಂತಲ್ಲಾ ! ಎಂದುಕೊಂಡು) ಸ್ವಾಮೀ, ಅವನು ಇನ್ನು ಬರುವ ಹಾಗಿಲ್ಲ. ಬರುವುದು ಮುಗಿಯಿತು.

ಸ್ವಾ—ಏನು ದೇಸಾಯರೇ ಹೀಗೆ ಮಾತಾಡುವಿರಿ ?

ದೇ—ಮತ್ತೇನಾಡಬೇಕು ಸ್ವಾಮೀ, ನನ್ನ ಪ್ರಾಪ್ತಿಗೆ ?

ಸ್ವಾ—ನಡೆದ ಸಂಗತಿಯೇನು ? ಸ್ಪಷ್ಟವಾಗಿ ಹೇಳಿ.

ದೇ—ನಡೆದದ್ದೇನು ಸ್ವಾಮೀ, ಸೀಕರಣಿಯ ಗಚ್ಚಿನಲ್ಲಿ ಬಿದ್ದು ಸತ್ತ. (ಗಟ್ಟಿಯಾಗಿ ಅತ್ತನು).

ಸ್ವಾ—ಪ್ರಮಾದ ! ಪ್ರಮಾದ ! ರಾಮದೇವರು ಬಂದಿರುವಾಗ ಹೀಗೂ ಆಗುವುದುಂಟೆ ? ಮೃತಶರೀರವನ್ನೇನು ಮಾಡಿದಿರಿ ?

ದೇ—ತಿಳಿದರೆ ಸಾವಿರಾರು ಜನರ ಭೋಜನಕ್ಕೆ ವಿಘಾತವಾಗುವ ದೆಂದು ಮುಚ್ಚಿಟ್ಟಿದ್ದೇನೆ.

ಸ್ವಾ—ಒಳ್ಳೇ ಕೆಲಸಮಾಡಿದಿರಿ. ಮೃತಶರೀರವನ್ನು ಈಗಲೇ ತೆಗೆದು ಕೊಂಡು ಬನ್ನಿ.

ದೇ—ಅಪ್ಪಣೆ. (ಕಣ್ಣೊರಸಿಕೊಳ್ಳುತ್ತಾ ಒಬ್ಬನೇ ಎತ್ತಲಾರದೆ ಹೆಂಡತಿಯ ಸಹಾಯದಿಂದ ಹೆಣವನ್ನು ಹೊತ್ತು ತಂದು ದೂರದಲ್ಲಿ ಮಲ ಗಿಸಿದನು.)

ಸ್ವಾಮಿಗಳು ದೇಸಾಯಿ ದಂಪತಿಗಳ ಇಂಗಿತಜ್ಞತೆಗೂ ಭಕ್ತಿಭಾವಕ್ಕೂ ಆಶ್ಚರ್ಯಪಟ್ಟು, ಮೃತನ ಶರೀರದ ಮೇಲೆ ಕಮಂಡುಲೋದಕವನ್ನಭಿಮಂತ್ರಿಸಿ ಪ್ರೋಕ್ಷಿಸಿದರು.

ಬಾಲಕನು ನಿದ್ರೆಯಿಂದೆಚ್ಚರಿಯುವನಂತೆ ಕಣ್ಣೊರಸಿಕೊಳ್ಳುತ್ತಾ ಎದ್ದು ಕೂತನು. ದಂಪತಿಗಳ ಆನಂದಕ್ಕೆ ಪಾರವಿಲ್ಲದೇ ಹೋಯಿತು. ಮಗನನ್ನು ಮುದ್ದಿಟ್ಟುಕೊಂಡು ಸ್ವಾಮಿಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು.

ಜನಸಂದಣಿಯು ಸಂತೋಷವನ್ನೇನೆಂದು ಹೇಳೋಣ! ಗುರುಗಳ ಅನ್ಯಾದೃಶ ತಪಶ್ಶಕ್ತಿಯನ್ನೂ ದಂಪತಿಗಳ ಭಾಗ್ಯವನ್ನೂ ಶ್ಲಾಘಿಸಿ ಜಯ ಜಯ ಘೋಷಣೆಮಾಡಿದರು.

ದೇಸಾಯರು ಬಾಲಕನೊಡನೆ ಮಂಗಳಸ್ನಾನ ಮಾಡಿ ಬರಲು, ತೀರ್ಥ ಕೊಟ್ಟು ತಂದೆ ಮಕ್ಕಳನ್ನು ಸಮುಖದಲ್ಲಿ ಕೂಡಿಸಿಕೊಂಡು ಸ್ವಾಮಿಗಳು ಭಿಕ್ಷಸ್ವೀಕಾರ ಮಾಡಿದರು. ದೇಸಾಯಿಯು ಸ್ವಾಮಿಗಳ ಪರಮಾನುಗ್ರಹ ದಿಂದ ಧನ್ಯನಾದೆನೆಂದು ಕಿರೀಟಗಿರಿಯನ್ನೇ ಮೂಲರಾಮ ದೇವರಿಗೆ ಜಹಗೀರಿ ಯೆಂದು ಸಮರ್ಪಿಸಿದನು.

ಈ ಸುದ್ದಿಯನ್ನು ಕೇಳಿ ಕೆಲವರು ಕುಹಕಿಗಳು,—'ಸ್ವಾಮಿಗಳು ಸತ್ತವ ನನ್ನು ಬದುಕಿಸುವುದೆಂದರೇನು? ಇದೆಲ್ಲಾ ಬ್ರಾಹ್ಮಣರ ಬಡಿವಾರ. ದೇಸಾ ಯರ ಮಗನೆಲ್ಲೋ ನಿದ್ರೆ ಬಂದು ಮಲಗಿರಬಹುದು. ಯಾರು ಎಬ್ಬಿಸಿದರೂ ಏಳದಿರಬಹುದು. ಸ್ವಾಮಿ ನೀರೆರಚಿ ಎಬ್ಬಿಸಿರಬಹುದು. ಇಷ್ಟು ಮಾತ್ರಕ್ಕೆ ಏನು ಮಹಿಮೆ? ಧನಾರ್ಜನೆಗೆ ಇದೊಂದು ಸುದ್ದಿಯನ್ನು ಹರಡಿರುವರು' ಎಂದು ಮನಸ್ಸು ಬಂದಂತೆ ನಿಂದಿಸಿದರು.

ಕುಹಕಿಗಳಿಗೆ ಇಷ್ಟರಿಂದಲೇ ತೃಪ್ತಿಯಾಗಲಿಲ್ಲ. ತಾವೇ ಸ್ವಾಮಿ ಗಳನ್ನು ಪರೀಕ್ಷಿಸಬೇಕೆಂದು ಹೊರಟರು. ಒಬ್ಬ ಹುಡುಗನಿಗೆ ಸತ್ತಂತೆ ಬಿದ್ದಿರಬೇಕೆಂದು ಹೇಳಿಕೊಟ್ಟರು. ಸ್ವಾಮಿಗಳೆದುರಿಗೆ ಸುಳ್ಳುಳುವನ್ನಳುತ್ತ ನಿಂತರು. ಸಹಜವಾಗಿ ಸ್ವಾಮಿಗಳು ಅದೇನೆಂದು ವಿಚಾರಿಸಿದರು. ಕಪಟಿಗಳು ನಮಸ್ಕರಿಸಿ —"ಮಹಾಸ್ವಾಮಿ, ಇದ್ದಕ್ಕಿದ್ದ ಹಾಗೆ ನಮ್ಮ ಹುಡುಗನು ಸತ್ತು ಹೋಗಿದ್ದಾನೆ; ದೇಸಾಯರ ಮಗನನ್ನು ಬದುಕಿಸಿದಂತೆ ಅವನನ್ನೂ ಬದುಕಿಸ ಬೇಕು ಸ್ವಾಮಿ; ತಮ್ಮನ್ನು ನಮ್ಮ ಭಾಗದ ಪರಮೇಶ್ವರನೆಂದು ತಿಳಿ ದಿರುವೆವು ಸ್ವಾಮಿ" ಎಂದು ಪರಿಪರಿಯಾಗಿಗೋಳಾಡಿದರು.

ಸ್ವಾಮಿಗಳಿಗಿವರ ಮಾತಿನಲ್ಲಿ ನಂಬಿಕೆ ಬರಲಿಲ್ಲ. ಏನೋ ಕುಹಕ ಮಾಡಿರುವರೆಂದು ತಿಳಿದರು. ವೇಷಧಾರಿಗಳನ್ನು ಕರೆದು, ನಿಜವಾಗಿ ನಿಮ್ಮ ಬಾಲಕನು ಮೃತನಾಗಿರುವನೇ ಹೇಳಿರೆಂದರು. ಅವರು, ಇಂಥಾ ವಿಷಯದಲ್ಲಿ ಸುಳ್ಳು ಹೇಳುವದುಂಟೇ ಸ್ವಾಮಿ, ತಾವು ದಯಮಾಡಿ ಬದುಕಿಸಬೇಕೆಂದು ಬೇಡಿದರು. ಹಾಗಿದ್ದರೆ ನಡೆಯಿರೆಂದು ಅವರೊಡನೆಯೇ ಸ್ವಾಮಿಗಳು

ಹೊರಟರು. ಕುಹಕಿಗಳು ತಮ್ಮ ವಿನೋದ ಫಲಿಸಿತೆಂದು ಒಳಗೊಳಗೆ ಸಂಕೇತ ಮಾಡಿಕೊಂಡರು.

ಸ್ವಾಮಿಗಳು ಮನೆಯನ್ನು ಹೊಕ್ಕು ಮೃತನನ್ನು ತೋರಿಸಿರೆಂದು ಕೇಳಿದರು ಈ ಸುಳಿವನ್ನು ಕಂಡ ಬಾಲಕನು ಕಂ ಕಿಂ ಎನ್ನದೆ ಸತ್ತಂತೆ ಬಿದ್ದಿದ್ದನು. ಕುಹಕಿಗಳು ಮೃತನ ಮುಸುಕನ್ನು ತೆಗೆದು ಇವನೇ ಎಂದು ಮತ್ತೆ ಹೊದ್ದಿಸಿದರು. ಆಗಲೂ ಸ್ವಾಮಿಗಳು ಯಥಾರ್ಥ ಹೇಳಿರೆಂದರು. ಕುಹಕಿಗಳು ತಮ್ಮ ಹಠವನ್ನು ಸಾಧಿಸಿದರು. ಸ್ವಲ್ಪ ಹೊತ್ತು ಸ್ವಾಮಿಗಳು ನಿಂತಿದ್ದು "ನಮ್ಮೊಡನೆ ನಿಮ್ಮ ಪರೀಕ್ಷೆಯೇ ? ನಾವು ನಿದ್ರೆ ಮಾಡುವವನನ್ನು ಎಬ್ಬಿಸಬಲ್ಲೆವಲ್ಲದೆ ಸತ್ತವನನ್ನು ಬದುಕಿಸುವವರಲ್ಲ. ನಿಮ್ಮ ಬಾಲಕನು ಸತ್ತನು, ನೋಡಿರೆ"ಂದು ಹಿಂತಿರುಗಿದರು.

ಕುಹಕಿಗಳು ಸ್ವಾಮಿಗಳನ್ನು ಹಾಸ್ಯಮಾಡುತ್ತಾ, ಮೃತವೇಷಧಾರಿಯನ್ನು ಏಳೋ ! ಎಂದು ಕೂಗಿದರು. ಅವನೇಳಲಿಲ್ಲ.—'ಎಲೋ ನಿದ್ರೆ ಬಂತೇ ಏಳು ಏಳು, ಸ್ವಾಮಿಯ ಎದುರಿಗೆ ಓಡಿಹೋಗು' ಎಂದು ಮತ್ತೆ ಕೂಗಿದರು. ಆದರೂ ಅವನೇಳಲಿಲ್ಲ. ಒಡನೆಯೇ ಬಂದು ತಟ್ಟಿದರು, ಹೊರಳಿಸಿದರು, ಪ್ರಾಣ ಚಿನ್ಹೆ ಕಂಡು ಬರಲಿಲ್ಲ. ಭೀತರಾಗಿ ಸ್ವಾಮಿಗಳ ಬಳಿಗೆ ಓಡಿಬಂದು ತಮ್ಮದು ತಪ್ಪಾಯಿತೆಂದು ಕ್ಷಮೆ ಬೇಡಿದರು. ಅವರು ತಮ್ಮ ಮಾತಿಗೆ ಪ್ರತಿಯಿಲ್ಲವೆಂದು ಉತ್ತರಕೊಟ್ಟು ಸ್ನಾನಕ್ಕೆ ತೆರಳಿದರು. ಈ ನೀಚರ ಕೃತಿಗೆ ನಿರಪರಾಧಿಯಾದ ಬಾಲಕನು ಬಲಿಯಾಗಬೇಕಾಯಿತು. ಸಮಾಜದ ಸಜ್ಜನರೂ ತಲೆಯನ್ನು ತಗ್ಗಿಸಬೇಕಾಯಿತು. ಮಾಡುವುದೇನು ?

ಸ್ವಾಮಿಗಳು ದೇಶ ಸಂಚಾರ ಹೊರಟು ಬಹಳ ಕಾಲವಾಯಿತು. ಅನೇಕ ದುರ್ವಾದಿಗಳನ್ನು ಗೆದ್ದು ಶಿಷ್ಯರನ್ನು ಮಾಡಿಕೊಂಡುದರಿಂದಲೂ, ಸತ್ತವರನ್ನು ಬದುಕಿಸುವುದೇ ಮೊದಲಾದ ತಮ್ಮ ತಪಶ್ಶಕ್ತಿಯನ್ನು ತೋರಿಸಿದುದರಿಂದಲೂ, ಸ್ವಾಮಿಗಳ ಕೀರ್ತಿಯು ದಿಗಂತ ವಿಶ್ರಾಂತವಾಯಿತು. ತಮ್ಮ ಜನ್ಮಕ್ಕೇ ಕಾರಣನಾದ ತಿರುಪತಿಯ ಶ್ರೀನಿವಾಸನ ದರ್ಶನಮಾಡಿ, ಕುಂಭಕೋಣೆಯನ್ನು ಸೇರಬೇಕೆಂದವರು ನಿಶ್ಚೈಸಿದರು. ಮಧ್ಯಕಾಲದಲ್ಲಿ ಚಾತುರ್ಮಾಸ್ಯ ಸನ್ನಿಹಿತವಾದ್ದರಿಂದ ಮಾರ್ಗದಲ್ಲೊಂದು ಮಾರುತಿಯ ಪುರಾತನ ದೇವಾಲಯದಲ್ಲಿರಬೇಕೆಂದು ಯೋಚಿಸಿದರು. (ಈ ಸ್ಥಳವು ರಾಯಚೂರು

ಜಿಲ್ಲಾ ಮಾನವಿಗೆ ಎಂಟು ಮೈಲಿ ದೂರದಲ್ಲಿದೆ) ಸುತ್ತುಮುತ್ತಣ ಭಕ್ತ ಜನರು ತಮ್ಮ ಸುಕೃತ ವಿಶೇಷದಿಂದ ಚಾತುರ್ಮಾಸ್ಯ ಸೇವೆಯು ಲಭಿಸಿತೆಂದು ಸ್ವಾಮಿಗಳನ್ನು ಸಂಭ್ರಮದಿಂದ ಕರೆದುಕೊಂಡು ಬರುತ್ತಿದ್ದರು. ದೇವಾಲಯಕ್ಕೆ ಕಟ್ಟಿಗೆಯನ್ನು ತರುತ್ತಿದ್ದ ಹೊಲೆಯನೊಬ್ಬನು ದೂರದಲ್ಲಿಯೇ ಪಲ್ಲಕ್ಕಿಯಲ್ಲಿ ಕೂತುಕೊಂಡು ಬರುತ್ತಿರುವ ಸ್ವಾಮಿಗಳನ್ನು ನೋಡಿ, ಹೊರೆಯನ್ನು ಕೆಳಕ್ಕೊಗೆದು ಭಕ್ತಿಯಿಂದ ಕೈಜೋಡಿಸಿ ನಿಂತನು.

[ಕನಕದಾಸನೇ ತನ್ನಿಚ್ಛೆಯಿಂದ ನೀಚಯೋನಿಯಲ್ಲಿ ಜನಿಸಿದ್ದನೆಂಬ ಆಪ್ತವಾಕ್ಯವು ಪರಸ್ಪರ ಸಂಭಾಷಣೆಯಿಂದ ಪೋಷಿತವಾಗುತ್ತದೆ.]

ಸ್ವಾಮಿಗಳು—ಏನೋ ಕನಕ! ನಿನ್ನ ಗತಿ ಹೀಗಾಯಿತೇ ?

ಹೊಲೆಯ—ಹೌದು ನನ್ನೊಡೆಯಾ—ವ್ಯಾಸರಾಯ—ನನ್ನ ಕರ್ಮ ?

ಸ್ವಾಮಿಗಳು—ನಿನಗೇನಾಗಬೇಕೋ?

ಹೊಲೆಯ—ಏನೂ ಬೇಡಪ್ಪಾ, ಜನ್ಮ ಸಾಕುಮಾಡಪ್ಪಾ.

ಸ್ವಾಮಿಗಳು—ಒಳ್ಳೇದು, ರಾಮದೇವರಿಗೇನು ಸೇವೆಮಾಡುವೆ ?

ಹೊಲೆಯ—ಬಡವ, ನಾನೇನು ಮಾಡಲಪ್ಪಾ ?

ಸ್ವಾಮಿಗಳು—ನಿನಗೆ ಗತಿಯಿದ್ದುದನ್ನು ತಂದುಕೊಡು.

ಹೊಲೆಯ - ಆಗಲಪ್ಪಾ.

ಉತ್ಸವವು ದೇವಾಲಯವನ್ನು ತಲ್ಪಿತು. ಸಂಕಲ್ಪಕ್ಕೆ ಕೂಡಬೇಕಾದ ಸಲಕರಣೆಗಳು ಸಿದ್ಧವಾದುವು. ಸ್ನಾನ, ಪೂಜೆ, ಭಿಕ್ಷ, ಭೋಜನಗಳು ಎಂದಿನಂತೆ ನಡೆದವು. ಮಧ್ಯಾಹ್ನಾತ್ಪರ ಎಲ್ಲರೂ ವಿಶ್ರಾಂತಿಯಲ್ಲಿದ್ದರು. ಸ್ವಾಮಿಗಳು ಮಾತ್ರ ದೇವಸ್ಥಾನದ ವಸಾರೆಯಲ್ಲಿ ವೇದ ಭಾಷ್ಯವನ್ನು ಬರೆಯುತ್ತಿದ್ದರು.

ಇತ್ತ ಹೊಲೆಯನು ಏನೂ ಗತಿಯಿಲ್ಲದೆ ತನ್ನ ಮನೆಯಲ್ಲಿ ಸಿಕ್ಕಿದ ಒಂದು ಬೊಗಸೆ ಸಾಸಿವೆಯನ್ನು ತಂದು ದೇವಾಲಯದ ಧ್ವಜ ಸ್ತಂಭದ ಬಳಿ ನಿಂತನು. ಸ್ವಾಮಿಗಳು ಹೊಲೆಯನನ್ನು ಏನು ತಂದೆಯೋ, ಎಂದು ಕೇಳಿದರು. ಅವನು ತಾನು ತಂದಿದ್ದ ಸಾಸಿವೆಯನ್ನು ಸುರಿದು, ಇಷ್ಟೇ, ಇನ್ನೇನೂ ಇಲ್ಲವೆಂದು ನಮಸ್ಕಾರಮಾಡಿದನು. ಆದಿನವೆಲ್ಲಾ ಗುರುಗಳಾಜ್ಞೆಯಿಂದ ಅವನಿಗೆ ನಿರಶನವ್ರತವಾಯಿತು. ಮರುದಿನ ಸ್ವಾಮಿಗಳು ಸರ್ವಾಧಿಕಾರಿಯನ್ನು

ಕರೆದು, ಆ ಹೊಲೆಯನು ಕೊಟ್ಟ ಸಾಸಿವೆಯನ್ನು ಅಡಿಗೆಗೆ ಉಪಯೋಗಿಸಬೇಕೆಂದು ಹೇಳಿದರು. ಸರ್ವಾಧಿಕಾರಿಯು— ವ್ರತಕಾಲ* ಸಾಸಿವೆಯನ್ನು ಪಯೋಗಿಸುವುದು ಹೇಗೆನ್ನಲು, ಸ್ವಾಮಿಗಳು—"ಮಹಾಭಕ್ತನು ಕೊಟ್ಟದ್ದು; ರಾಮನಿಗೆ ಅದೇ ಪ್ರಿಯವಾಗಿದೆ; ಇನ್ನು ಮುಂದೆ ಈ ಜ್ಞಾಪಕಾರ್ಥವಾಗಿ ನಮ್ಮ ಮಠದಲ್ಲಿ ವ್ರತಕಾಲದಲ್ಲಿ ಸಾಸಿವೆಯನ್ನುಪಯೋಗಿಸಬೇಕು; ನಮ್ಮ ಶಿಷ್ಯರೆಲ್ಲರೂ ಇದೇ ಸಂಪ್ರದಾಯವನ್ನನುಸರಿಸಬೇಕು'' ಎಂದು ಆಜ್ಞೆಮಾಡಿದರು. ಸರ್ವಾಧಿಕಾರಿಯು ತನ್ನ ಸಂಶಯಪರಿಹಾರಕ್ಕಾಗಿ ಭಕ್ತನಾರೆಂದು ಕೇಳಿದನು. ಸ್ವಾಮಿಗಳು ಹೊಲೆಯನನ್ನು ತೋರಿಸಿ ಅವನೇ ಎಂದರು. ಸರ್ವಾಧಿಕಾರಿಗೆ ಈ ಉತ್ತರದಿಂದ ಅಷ್ಟು ತೃಪ್ತಿಯಾಗಲಿಲ್ಲ. ಸ್ವಾಮಿಗಳು ಆಗ ಎಲ್ಲರನ್ನೂ ಕರೆದು,- ಇವನಾರು ಬಲ್ಲಿರೋ ? ಇವನೇ ಪೂರ್ವಜನ್ಮದಲ್ಲಿ ಕನಕ; †ಹಿಂದಿನ ಜನ್ಮದಲ್ಲಿ ನಮಗೂ ದೇವರ ದರ್ಶನ ಮಾಡಿಸಿದವನು. ಜನ್ಮಬಂಧವನ್ನು ಕಳೆದುಕೊಂಡಿದ್ದರೂ ತನ್ನಿಚ್ಛೆಯಿಂದಲೇ ಚಂಡಾಲನಾಗಿ ಹುಟ್ಟಿದ್ದಾನೆ.

ಸರ್ವಾಧಿಕಾರಿಯು ತಾನು ಪಟ್ಟ ಸಂಶಯಕ್ಕೆ ಕ್ಷಮೆ ಬೇಡಿ ಆ ದಿನದ ಅಡಿಗೆಗೆ ಸಾಸಿವೆಯನ್ನು ಉಪಯೋಗಪಡಿಸಿದನು.

ಹೊಲೆಯನು ಸ್ನಾನಾದಿ ಶುದ್ಧನಾಗಿ ತೀರ್ಥಪ್ರಸಾದ ಸಿಕ್ಕುವುದನ್ನೇ ಎದುರು ನೋಡುತ್ತಿದ್ದನು.

ಸ್ವಾಮಿಗಳು ಭಿಕ್ಷಾಭೋಜನಗಳಾದೊಡನೆ, ಹೊಲೆಯನನ್ನು ಧ್ವಜಸ್ಥಂಭದಬಳಿಗೆ ಕರೆದು, ತೀರ್ಥ ಪ್ರಸಾದಗಳನ್ನನುಗ್ರಹಿಸಿದರು. ಗುರುಕಟಾಕ್ಷದಿಂದಲೂ, ಪೂರ್ವ ಜನ್ಮಗಳಲ್ಲಿ ಮಾಡಿದ ಭಗವದಾರಾಧನೆಯ ಪ್ರಭಾವದಿಂದಲೂ ಹೊಲೆಯನ ಜ್ಞಾನವು ಪಕ್ವವಾಯಿತು. ರಾಮನಾಮ

*ಚಾತುರ್ಮಾಸ್ಯವ್ರತದಲ್ಲಿ ಆಷಾಢ ಶುದ್ಧ ಏಕಾದಶಿಯಿಂದ ಶ್ರಾವಣ ಶುದ್ಧ ದ್ವಾದಶಿಯವರಿಗೂ ಶಾಖಗಳನ್ನೂ, ಹುಳಿ, ಮೆಣಸಿನಕಾಯಿ ಖಾರವನ್ನೂ ಸಾಸಿವೆಯನ್ನೂ ಉಪಯೋಗಿಸುವುದಿಲ್ಲ. ಶ್ರಾವಣ ಭಾದ್ರಪದಗಳಲ್ಲಿ ಹಾಲು ಮೊಸರಿಗೆ ವ್ರತ. ಆಶ್ವೀಜದಲ್ಲಿ ದ್ವಿದಳಧಾನ್ಯವರ್ಜ, ಹುಳಿವರ್ಜ. ಖಾರವೆಂದರೆ ಮೆಣಸಿನಖಾರಮಾತ್ರ. ತರಕಾರಿಯಲ್ಲೂ ಕೆಲವು ಮಾತ್ರ. ಈ ವ್ರತಾಚರಣೆಯು ಮಾಧ್ವರಲ್ಲಿ ಬಹಳ.

†ರಾಘವೇಂದ್ರರು ಹಿಂದಿನ ಜನ್ಮದಲ್ಲಿ ವ್ಯಾಸರಾಯಸ್ವಾಮಿಗಳಾಗಿದ್ದರು.

ಸ್ಮರಣೆಗಾರಂಭಿಸಿದನು. ಸರ್ವರೂ ಕಾಣುವ ಹಾಗೇ ಶ್ವಾಸಗತಿಯನ್ನು ನಿರೋಧಿಸಿ ದೇಹವನ್ನು ತ್ಯಜಿಸಿದನು.

ಸ್ವಾಮಿಗಳು ಹೊಲೆಯನ ಕಳೇಬರವನ್ನು ದೇವಾಲಯದೆದುರಿಗೆ ಭೂಸ್ಥಾಪನೆಮಾಡಿಸಿ ಕನಕನಿಗೆ ಮೋಕ್ಷವಾದ ಸ್ಥಳವೆಂಮ ಧ್ವಜಸ್ತಂಭವನ್ನು ಸ್ಥಾಪಿಸಿದರು.

## ಬಿದರಹಳ್ಳಿ ಶ್ರೀನಿವಾಸಾಚಾರ್ಯರು.

ಬಿದರಹಳ್ಳಿ (ಶಿರಹಟ್ಟಿ ತಾಲ್ಲೂಕು) ಶ್ರೀನಿವಾಸಾಚಾರ್ಯರೆಂಬ ಟಿಪ್ಪಣಿ ಕಾರರು ತಾವು ರಚಿಸಿದ ಗ್ರಂಥಗಳನ್ನು ಸ್ವಾಮಿಗಳಿಗೆ ತೋರಿಸಬೇಕೆಂದು ಇದೇ ಕಾಲದಲ್ಲಿ ಮಠಕ್ಕೆ ಬಂದರು. ಸ್ವಾಮಿಗಳು ಇವರ ಟಿಪ್ಪಣಿಗಳನ್ನು ನೋಡಿ ಸಂತೋಷಪಟ್ಟು ಸನ್ಯಾಸಾಶ್ರಮ ಸ್ವೀಕಾರಮಾಡಿದವರಿಗೇ ಲಭ್ಯ ವಾಗುವ "ತೀರ್ಥ'' ಎಂಬ ಬಿರುದನ್ನು ದಯಪಾಲಿಸಿದರು. ಅಂದಿನಿಂದ ಆಚಾರ್ಯರು ಶ್ರೀನಿವಾಸತೀರ್ಥರಾದರು. ಇವರ ಗ್ರಂಥಗಳಿಗೆ ಶ್ರೀನಿವಾಸ ತೀರ್ಥೀಯ ಟಿಪ್ಪಣಿಗಳೆಂದು ಹೆಸರಾಯಿತು. ಇವರು ಉತ್ತರಾದಿ ಮಠದ ಶಿಷ್ಯರಾಗಿದ್ದರು. ವ್ರತಕಾಲದಲ್ಲಿ ಈ ಮಠದಲ್ಲಿ ಹೊಸದಾಗಿ ಸಾಸಿವೆಯನ್ನು ಉಪಯೋಗಿಸುವುದು ತಮ್ಮ ಮಠ ಸಂಪ್ರದಾಯಕ್ಕೆ ವಿರೋಧವೆಂದು ಪ್ರತ್ಯೇಕ ಸಾರನ್ನು ಮಾತ್ರ ಮಾಡಿಸಿಕೊಂಡು ಸ್ವಾಮಿಗಳೆದುರಿಗೇ ಭೋಜನಮಾಡು ತ್ತಿದ್ದರು. ಗುರು ಸಾನ್ನಿಧ್ಯದಲ್ಲಿ ಹೀಗೆ ಮಾಡುವುದು ಅಧಿಕಪ್ರಸಂಗವಾಗಿತ್ತು. ಸ್ವಾಮಿಗಳೇನೋ ಇವರಿಗೆ ಉತ್ತಮ ಮರ್ಯಾದೆಮಾಡಿ ಮಂತ್ರಾಕ್ಷತೆ ಕೊಟ್ಟು ಕಳುಹಿಸಿದರು. ತೀರ್ಥರು ಬಿದರಹಳ್ಳಿಗೆ ಬಂದೊಡನೆ ಇವರ ವಿದ್ಯಾಗುರು ಗಳಾದ ಯಾದವಾರ್ಯರು ಶಿಷ್ಯನ ಮುಖವನ್ನು ನೋಡಿ—

ಯಾದವಾರ್ಯರು:—ಏನು ! ಸ್ವೋತ್ತಮ ದ್ರೋಹವನ್ನೇ ಸಂಪಾದಿಸಿ ಕೊಂಡು ಬಂದಹಾಗಿದೆ.

ಶ್ರೀನಿವಾಸತೀರ್ಥರು:—ಹಾಗೆಂದರೇನು ? ಸ್ವಾಮಿಗಳು ಗ್ರಂಥಗಳನ್ನು ನೋಡಿ ಸಂತೋಷಪಟ್ಟರು. "ತೀರ್ಥ"ಬಿರುದನ್ನೂ ಯೋಗ್ಯ ಬಹುಮಾನ ವನ್ನೂ ಅನುಗ್ರಹಿಸಿದರು.

ಯಾದವಾರ್ಯರು:—ಬಹುಮಾನ ಹಾಗಿರಲಿ. ನಿನ್ನ ಮುಖ ತೇಜೋಹೀನವಾಗಿದೆ. ಆಯಸ್ಸೇ ಗ್ರಾಸವಾಗುತ್ತಿದೆ. ಅಪರಾಧವೇನುಮಾಡಿದೆ? ಮೊದಲು ಹೇಳು.

ಶ್ರೀನಿವಾಸತೀರ್ಥರು:—ಏನೊಂದೂ ಇಲ್ಲ. ಸ್ವಾಮಿಗಳು ಹತ್ತಿರದಲ್ಲೇ ಕೂಡಿಸಿಕೊಳ್ಳುತ್ತಿದ್ದರು. ಸಂತೋಷವಾಗಿ ಶಾಸ್ತ್ರಗಳನ್ನುಪದೇಶ ಮಾಡುತ್ತಿದ್ದರು

ಯಾದವಾರ್ಯರು:—ಇರಲಿ, ಸ್ವಾಮಿಗಳು ಕೊಟ್ಟ ಮಂತ್ರಾಕ್ಷತೆಯೆಲ್ಲಿ?

ಶ್ರೀನಿವಾಸತೀರ್ಥರು:— (ಸಂಪುಟವನ್ನು ಮುಂದಿಟ್ಟು) ತೆಗೆದುಕೊಳ್ಳಬೇಕು.

ಯಾದವಾರ್ಯ:—(ಬಿಚ್ಚಿನೋಡಿ) ಅಯ್ಯೋ, ಕಪ್ಪಗಿದೆ. ಏನೋ ದ್ರೋಹವಾಗಿದೆ. ನಾನು ಮೊದಲೇ ನಿನಗೆ ಹೇಳಿದ್ದೆ.

ಶ್ರೀನಿವಾಸತೀರ್ಥರು:—ಪರಮತವೆಂದು ಶಾಠ್ಯವೇನೂ ಮಾಡಲಿಲ್ಲ.

ಯಾದವಾರ್ಯರು:—ನೀನು ಹೋದಾಗಿನಿಂದ ನಡೆದುದನ್ನೆಲ್ಲಾ ಹೇಳು.

ಶ್ರೀನಿವಾಸತೀರ್ಥರು:—ಎಲ್ಲವನ್ನೂ ಹೇಳುತ್ತಾ ವ್ರತಕಾಲದಲ್ಲಿ ಆ ಮಠದಲ್ಲಿ ಈಚೆಗೆ ಸಾಸಿವೆಯನ್ನು ಉಪಯೋಗಿಸುತ್ತಿದ್ದಾರೆ. ಅದು ನಮ್ಮ ಮಠ ಸಂಪ್ರದಾಯಕ್ಕೆ ವಿರೋಧವೆಂದು ಬೇರೇ ಸಾರನ್ನು ಮಾತ್ರ ಮಾಡಿಸಿಕೊಂಡೆ.

ಯಾದವಾರ್ಯರು:—ಅದೇ, ಅದೇ! ಅಲ್ಲೇ ತಪ್ಪಾಯಿತು. ಸರ್ವನಾಶವಾಯಿತು. ಮಹಾತ್ಮರ ಸನ್ನಿಧಿಯಲ್ಲಿ ನಿನ್ನ ಪ್ರತಿಷ್ಠೆಯೇತರದು? ಅವರಂತೆ ಆಚರಿಸಿ ಅನುಗ್ರಹವನ್ನು ಪಡೆದು ಬರಬೇಕಾಗಿತ್ತು. ದೊಡ್ಡವರ ಅನುಗ್ರಹಕ್ಕಿಂತ ನಿನ್ನ ವ್ರತ ದೊಡ್ಡದಾಯಿತೇ? ನಡೆ, ಅವರಿಗೆ ಶರಣಾಗತನಾಗಿ ಅವರ ಸಂಪ್ರದಾಯದಂತಿದ್ದು ಅನುಗ್ರಹವನ್ನು ಪಡೆದು ಬಾ.

ಶ್ರೀನಿವಾಸತೀರ್ಥರು ಹಾಗೆಯೇ ಹೊರಟರು. ತಾವು ಮಾಡಿದ ತಪ್ಪಿಗೆ ಉಪವಾಸವೇ ಪ್ರಾಯಶ್ಚಿತ್ತವೆಂದು ಅಶನೋದಕಗಳನ್ನು ತೊರೆದು ಪಾದಚಾರಿಗಳಾಗಿ ಮಠಕ್ಕೆ ಬಂದರು. ಸ್ವಾಮಿಗಳು ಇವರ ಮ್ಲಾನವದನವನ್ನೂ, ನಮಸ್ಕರಿಸಿದಾಗಿನ ಪರಿಸ್ಥಿತಿಯನ್ನೂ ತಿಳಿದು,—"ಏನು ಆಚಾರ್ಯರೇ! ಇದೇನು! ಹೀಗೇಕೆ! ಆಯಿತೇನು?" ಎಂದು ಪ್ರಶ್ನೆಮಾಡಿದರು. ತೀರ್ಥರ ಬಾಯಿಂದ ಮಾತು ಹೊರಡಲಿಲ್ಲ. ಸ್ವಾಮಿಗಳು ಅವರ ಅಭಿಪ್ರಾಯವನ್ನು ಅವರ ಕಣ್ಣಿ

ನಿಂದ ಬರುವ ಧಾರೆಗಳಿಂದಲೇ ತಿಳಿದುಕೊಳ್ಳಬೇಕಾಯಿತು. ಯಾದವಾರ್ಯರು ಮಂತ್ರಾಕ್ಷತೆಗಾಗಿ ಮತ್ತೆ ಕಳುಹಿಸಿದರೇ ಹೇಗೆ ? ಎಂದು ಸ್ವಾಮಿಗಳು ಕೇಳಿದರು. ಈ ಶಬ್ದಗಳು ಕಿವಿಗೆ ಬಿದ್ದೊಡನೆಯೇ ಶ್ರೀನಿವಾಸತೀರ್ಥರ ಮೈ ನಡುಗಿತು. ಸಾಷ್ಟಾಂಗ ನಮಸ್ಕಾರ ಮಾಡಿ, - "ಸರ್ವಜ್ಞ ಚಿತ್ತಕ್ಕೆ ತಿಳಿಯದ ವಿಚಾರವಿಲ್ಲ; ಸರ್ವಾಪರಾಧವನ್ನೂ ಕ್ಷಮಿಸಿ ಮಂತ್ರಾಕ್ಷತೆ ಕೊಡಬೇಕು; ಮೊದಲೇ ಬುದ್ಧಿ ಹೇಳಿದ್ದರೆ ಶ್ರೀಪಾದಾಜ್ಞೆಯನ್ನು ಮೀರುತ್ತಿರಲಿಲ್ಲ" ಎಂದು ಬೇಡಿಕೊಂಡರು. ಅವತ್ತೇ ಶ್ರೀನಿವಾಸತೀರ್ಥರಿಗೆ ಮೂರು ದಿನಗಳ ಉಪವಾಸದ ಪಾರಣೆಯಾಯಿತು ಸ್ವಾಮಿಗಳು ತೀರ್ಥರಿಗೆ ಬಹುವಿಧದಿಂದ ಉಪಚಾರ ಮಾಡಿಸಿದರು. ಸಂಸ್ಥಾನ ಸಾನ್ನಿಧ್ಯದಲ್ಲಿ ಗೃಹಸ್ಥಾಶ್ರಮಿಗಳು ನಡೆದುಕೊಳ್ಳಬೇಕಾದ ರೀತಿ ನೀತಿಗಳನ್ನು ತಿಳಿಸಿದರು. ಪರಮಾನುಗ್ರಹ ಮಾಡಿ ಮಂತ್ರಾಕ್ಷತೆಯನ್ನೂ ಕೊಟ್ಟು ಕಳುಹಿಸಿದರು.

## ಮಲೆಯಾಳದ ಮೂವರು ಜ್ಯೋತಿಷ್ಕರು

ಮಲೆಯಾಳದ ಮೂವರು ಜ್ಯೋತಿಷ್ಕರು ತಮ್ಮ ವಿದ್ಯಾಪರೀಕ್ಷೆ ಕೊಡಬೇಕೆಂದು ಸ್ವಾಮಿಗಳ ಬಳಿಗೆ ಬಂದರು. ಸ್ವಾಮಿಗಳು (ತಮ್ಮ ಜಾತಕವನ್ನೇ ಬರೆದು) ದ್ವಾದಶ ರಾಶಿಗಳಲ್ಲೂ ಗ್ರಹಗಳನ್ನು ಗುರ್ತಿಸಿಕೊಟ್ಟು, ಹೀಗೊಂದು ಕುಂಡಲಿಯಿರುವದೆಂದೂ, ಇದರ ಫಲವನ್ನು ಗುಣಿಸಿರೆಂದೂ ಮೂವರನ್ನೂ ಬೇರೆ ಬೇರೆ ಕೊಠಡಿಗಳಲ್ಲಿ ಕೂಡಿಸಿದರು. ಮರುದಿನದ ಸಭೆಗೆ ಮೂವರೂ ಫಲವನ್ನು ಬರೆದುತಂದು ಒಬ್ಬೊಬ್ಬರೂ ಹೇಳುವುದಕ್ಕಾರಂಭಿಸಿದರು. ಸ್ವಾಮಿಗಳು, ಫಲದ ಮಾತಿರಲಿ, ಆಯುಸ್ಸು ಎಷ್ಟಿರುವುದೋ ಹೇಳಿರೆಂದು ಪ್ರಶ್ನೆ ಮಾಡಿದರು. ಮೊದಲನೆಯವನು ನೂರು ವರ್ಷವೆಂದೂ, ಎರಡನೆಯವನು ಮುನ್ನೂರು ವರ್ಷವೆಂದೂ, ಮೂರನೆಯವನು ಏಳುನೂರು ವರ್ಷವೆಂದೂ ಹೇಳಿದರು. ಸಭೆಯಲ್ಲಿದ್ದ ಪಂಡಿತರು, ಇದೇನು ವಿಪರೀತ ಫಲವೆಂದು ಜ್ಯೋತಿಷ್ಕರೊಡನೆ ವಾಗ್ವಾದಕ್ಕೆ ಹೊರಟರು. ಸ್ವಾಮಿಗಳು ಮಾತಿನ ಮಧ್ಯದಲ್ಲಿ ಪ್ರವೇಶಿಸಿ—'ಮೂವರು ಹೇಳಿದ್ದೂ ಸರಿಯಾಗಿದೆ ; ಮೊದಲನೆಯವನು ದೇಹದೃಷ್ಟಿಯಿಂದ ಹೇಳಿದನು ; ಎರಡನೆಯವನು ಗ್ರಂಥಪ್ರಚಾರ ದೃಷ್ಟಿಯಿಂದ ಹೇಳಿದನು ; ಮೂರನೆಯವನು ಬೃಂದಾವನದಲ್ಲಿ ಮಹಿಮೆ

ನಡೆಯುವ ದೃಷ್ಟಿಯಿಂದ ಹೇಳಿದನು' ಎಂದು ಸಮಾಧಾನಗೊಳಿಸಿ ಮೂವರಿಗೂ ಮಾನಾನುಗುಣವಾಗಿ ಸಂಭಾವನೆ ಮಾಡಿದರು. ಸಭೆಯಲ್ಲಿದ್ದ ಪಂಡಿತರು ಈ ವಿಪರೀತ ಫಲದ ಜಾತಕ ಯಾರದೆಂದು ಕೇಳಿದರು ಸ್ವಾಮಿಗಳು ನಗುತ್ತ ಆ ಜಾತಕವು ಮೂಲರಾಮದೇವರ ಅರ್ಚಕನದೆಂದು ಹೇಳಿದರು.

ಹೀಗೆ ಸ್ವಾಮಿಗಳು ಚಾತುರ್ಮಾಸ್ಯವನ್ನು ಮುಗಿಸಿ, ಶಿಷ್ಯರನ್ನನುಗ್ರಹಿಸಿ, ತಮ್ಮ ಜನನಕ್ಕೆ ಕಾರಣನಾದ ಶ್ರೀನಿವಾಸನನ್ನು ಸೇವಿಸಬೇಕೆಂದು ತಿರುಪತಿಯ ಮಾರ್ಗವಾಗಿ ಹೊರಟರು. ಸಂಸ್ಥಾನ ದಿಗ್ವಿಜಯವಾಗುವುದೆಂಬ ಸಮಾಚಾರ ತಿಳಿದು ಆಗಿದ್ದ ಕ್ಷೇತ್ರಾಧಿಕಾರಿಗಳು ಸಕಲ ಮರ್ಯಾದೆಗಳಿಂದ ಇದಿರ್ಗೊಂಡು ಸ್ವಾಮಿಗಳವರಿಗೆ ಶ್ರೀನಿವಾಸನ ಏಕಾಂತಸೇವೆ ಮೊದಲಾದ ಎಲ್ಲ ಸೇವೆಗಳನ್ನೂ ಮಾಡಿಸಿದರು. ಸ್ವಾಮಿಗಳು ಸುವರ್ಣದಿಂದ ತಮ್ಮ ತುಲಾಭಾರವನ್ನೊಪ್ಪಿಸಿ, ಶ್ರೀನಿವಾಸನಿಗೆ ಮಹಾ ಬ್ರಹ್ಮೋತ್ಸವ ಮೊದಲಾದ ಎಲ್ಲ ಉತ್ಸವಗಳನ್ನೂ ಮಾಡಿಸಿದರು. ತಿರುಪತಿಯಲ್ಲಿದ್ದಾಗಲೇ ತಮ್ಮದಾಗಿ ಒಂದು ಮಠವನ್ನು ಕಟ್ಟಿಸಿ, ಶ್ರೀನಿವಾಸನ ನಿತ್ಯಸೇವೆಗೆ ಕೆಲವು ಕಟ್ಟಳೆಗಳನ್ನೂ ಮಾಡಿದರು. ತಿರುಪತಿಯಿಂದ ಕಾಳಹಸ್ತಿ ಕಂಚೀ ಕ್ಷೇತ್ರಗಳ ಮಾರ್ಗವಾಗಿ ಹೊರಟು ಮಧ್ಯದಲ್ಲಿದ್ದ ತೀರ್ಥಗಳಲ್ಲಿ ಮಿಂದು, ದೇವತಾಮೂರ್ತಿಗಳ ದರ್ಶನ ಮಾಡಿ ಕುಂಭಕೋಣೆಯನ್ನು ಸೇರಿದರು.

ರಾಘವೇಂದ್ರರ ಸಾನ್ನಿಧ್ಯವಿಲ್ಲದೆ ಶೂನ್ಯವಾಗಿದ್ದ ಕುಂಭಕೋಣೆಯು ಮತ್ತೆ ಇಂದ್ರನ ಅಮರಾವತಿಯಾಯಿತು. ರಾಘವೇಂದ್ರ ಮಠವೆಂದರೆ ಚತುಷ್ಷಷ್ಟಿ ಕಲೆಗಳ ವಿಶ್ವವಿದ್ಯಾನಿಲಯವಾಗಿತ್ತು. ವಿದ್ಯೆಯೆಲ್ಲವೂ ಧರ್ಮಮೂಲವಾಗಿತ್ತು. ನಾಯಕ ಸಂತತಿಯ ರಾಜರು ಗೀರ್ವಾಣ ವಿದ್ಯಾವಿಶಾರದರಾಗಿದ್ದರು. ವರ್ಣಾಶ್ರಮ ಧರ್ಮರಕ್ಷಣೆಯೇ ಆ ರಾಜರ ಬಿರುದಾಗಿತ್ತು. ಬಲಕಾರ್ಯಕ್ಕೆ ಚತುರಂಗಸೇನೆ ಹೇಗೋ, ಜ್ಞಾನಕಾರ್ಯಕ್ಕೆ ಚತುಶ್ಶಾಸ್ತ್ರ ಪಂಡಿತರ ಸೇನೆಯು ಹಾಗೆಯೇ ದೇಶೋನ್ನತಿಯ ಬಲಭುಜವಾಗಿತ್ತು. ಶ್ರೀ ಮಠದಲ್ಲಿ ಪಾರಂಗತರಾದ ವಿದ್ವಾಂಸರಿಗೆ ರಾಜಾಂಗದಲ್ಲಿ ಪ್ರತ್ಯೇಕ ಪರೀಕ್ಷೆಯಿರಲಿಲ್ಲ. ಒಂದೊಂದು ಅಗ್ರಹಾರವೂ ವೇದವಿದ್ಯೆಯ ಪ್ರೌಢ ಪಾಠಶಾಲೆಯಾಗಿತ್ತು. ವಿದ್ವಾಂಸರನ್ನು ಪೋಷಿಸುವ ಭಾರ ರಾಜನದಾಗಿತ್ತು.

ಆದುದರಿಂದ ವಿದ್ಯಾ ಪರೀಕ್ಷೆಗೆ ಬರುವ ಜನಸಂದಣಿಯೂ ಮಠದಲ್ಲಿ ಬಹಳವಾಗಿರುತ್ತಿತ್ತು. ಸ್ವಯಂ ಗಾನವಿದ್ಯಾ ವಿಶಾರದರಾಗಿದ್ದುದರಿಂದ ರಾಘವೇಂದ್ರರು ಗಾಯಕರಿಗೆ ಕಲ್ಪವೃಕ್ಷಪ್ರಾಯರಾಗಿದ್ದರು. ಯಾರ ಸಹಾಯವನ್ನೂ ಬಯಸದೆ, ಪೂರ್ವಾಶ್ರಮದಲ್ಲಿ ಬಡತನದ ಕ್ಲೇಶಗಳನ್ನನುಭವಿಸಿಯೇ ವಿದ್ಯಾಭ್ಯಾಸ ಮಾಡಿದವರಾದ್ದರಿಂದ, ವಿದ್ಯದ ಹೆಸರಿನ ಮೇಲೆ ಬಂದವರಿಗೆಲ್ಲಾ ಮನಬಂದಂತೆ ದ್ರವ್ಯ ದಾನಮಾಡುತ್ತಿದ್ದರು. ವಿಜಯೀಂದ್ರರೂ ಸುಧೀಂದ್ರರೂ ಮಠದಲ್ಲಿ ಬಹಳ ದ್ರವ್ಯವನ್ನು ಶೇಖರಿಸಿಟ್ಟಿದ್ದರು. ಗ್ರಾಮ ಭೂಮಿಗಳೂ ಹೇರಳವಾಗಿದ್ದವು. ಸಂಸ್ಥಾನಕ್ಕೆ ಈಗಿನ ಬಡತನವಿರಲಿಲ್ಲ. ರಾಜಾಧಿರಾಜರು ತಾವು ದಿಗ್ವಿಜಯ ಮಾಡಿದಾಗೆಲ್ಲಾ ಶ್ರೀ ಮಠಕ್ಕೆ ಲಕ್ಷಾಂತರ ದ್ರವ್ಯವನ್ನು ಕಾಣಿಕೆ ಕೊಡುತ್ತಿದ್ದರು. ಆ ಕಾಲದಲ್ಲಿ ಸಂತತಿಯಿಲ್ಲದವರು ತಮ್ಮ ಸ್ವತ್ತನ್ನು ಮಠಕ್ಕೇ ಒಪ್ಪಿಸಿಬಿಡುತ್ತಿದ್ದರು. ಪ್ರಜೆಗಳು ತಾವೇನು ಧರ್ಮ ಮಾಡಬೇಕಾದರೂ, ಗುರುಗಳಿಗೊಪ್ಪಿಸಿದರಾಯಿತೆಂದು ತಿಳಿದಿದ್ದರು. ಈಗಿನ ಹಾಗೆ ಸರ್ಕಾರದಲ್ಲಿಡುವ ಪದ್ಧತಿಯಿರಲಿಲ್ಲ. ಸಾರಾಂಶವೇನೆಂದರೆ, ಮಠವೇ ದೇಶದ ಸಾರ್ವಜನಿಕ ಭಂಡಾರವಾಗಿತ್ತು.

ಈ ಕಾಲದಲ್ಲಿ ಸ್ವಾಮಿಗಳ ಗ್ರಂಥರಚನಾಕಾರ್ಯವು ಭರದಿಂದ ಸಾಗಿತು. ಇವರು ರಚಿಸಿದ ಗ್ರಂಥಗಳು ಒಟ್ಟು ನಲವತ್ತರಮೇಲಿದ್ದರೂ ಈ ಗ್ರಂಥಗಳಲ್ಲಿ ಇನ್ನೂ ಕೆಲವು ಮುದ್ರಣವೇ ಆಗಿಲ್ಲ ಚತುರ್ವೇದ ಭಾಷ್ಯವಂತೂ ಅದೃಶ್ಯವಾಯಿತೆಂದೇ ಹೇಳಬೇಕು. ಆದರೂ ಕೆಲವು ಗ್ರಂಥಗಳ ಹೆಸರುಗಳನ್ನು ಮಾತ್ರ ಕೆಳಗೆ ಕೊಟ್ಟಿದೆ.

| | |
|---|---|
| ಪರಿಮಳ | ಮಂತ್ರಾರ್ಥಮಂಜರಿ |
| ಪ್ರಕಾಶ | ಭೇದಬೋಧಿನಿ |
| ತತ್ವಮಂಜರಿ | ವಾದಾವಳೀ ಟಿಪ್ಪಣಿ |
| ಗೀತಾವಿವೃತಿ | ಪ್ರಾತಸ್ಸಂಕಲ್ಪಗದ್ಯ |
| ಸರ್ವಸಮರ್ಪಣಗದ್ಯ | ಪುರುಷಸೂಕ್ತವ್ಯಾಖ್ಯಾನ |
| ಭಾವದೀಪಿಕಾ | ತರ್ಕತಾಂಡವ ಟಿಪ್ಪಣಿ |
| ದಶಪ್ರಕರಣಗಳ ಟಿಪ್ಪಣಿ | ಅಂಭೃಣೀಸೂಕ್ತವಿವೃತಿ |
| ದಶೋಪನಿಷತ್ತುಗಳ ಖಂಡಾರ್ಥ | ಹಿರಣ್ಯಗರ್ಭಸೂಕ್ತವ್ಯಾಖ್ಯಾನ |

ನ್ಯಾಯಮುಕ್ತಾವಳಿ
ತಂತ್ರದೀಪಿಕಾ
ಪ್ರಮಾಣಪದ್ಧತಿ
ರಾಮಕೃಷ್ಣ ಚರಿತ್ರಮಂಜರೀ
ಭಾವಸಂಗ್ರಹ
ಭಟ್ಟಸಂಗ್ರಹಮೀಮಾಂಸ
ವೇದತ್ರಯವಿವೃತಿ

[ಈ ಮಠದ ಪೀಳಿಗೆಯಲ್ಲಿ ಪಟ್ಟಕ್ಕೆಬಂದ ವಾದೀಂದ್ರರ ಕಾಲದವರೆಗೂ ಸ್ವಾಮಿಗಳ ಹಸ್ತಾಕ್ಷರದ ಅವರ ಎಲ್ಲಾ ಗ್ರಂಥಗಳೂ ಸರ್ವಮೂಲದ ಜೊತೆಯಲ್ಲಿ ಪೂಜೆಯಲ್ಲಿದ್ದವು. ಆಗ ಪ್ರಾಪ್ತವಾದ ವಿಪತ್ತಿನಲ್ಲಿ ಸ್ವಾಮಿಗಳ ಪುಸ್ತಕಗಳು ಮಾಯವಾದವು. ಈಗ ಪ್ರಚಾರದಲ್ಲಿರುವವುಗಳಾದರೂ ಅವರಿಂದ ಶಿಷ್ಯರು ಪ್ರತಿ ಮಾಡಿಕೊಂಡವುಗಳು.]

## ಯಾತ್ರಿಕರು

ಒಂದುದಿನ ಮೂವರು ಯಾತ್ರಿಕ ಬ್ರಾಹ್ಮಣರು ಗುರುದರ್ಶನಾಭಿಲಾಷೆಯಿಂದ ಕುಂಭಕೋಣೆಗೆ ಬಂದರು. ಮಾರ್ಗಾಯಾಸದಿಂದಲೂ ಬಿಸಿಲದಗೆಯಿಂದಲೂ ಅವರಿಗೆ ಇಚ್ಛಾಭೋಜನದ ಚಪಲವಾಯಿತು. 'ಈದಿನ ನಮ್ಮಿಷ್ಟದಂತೆ ಭೋಜನ ಮಾಡಿಸಿದರೆ ಸ್ವಾಮಿಗಳು ದೊಡ್ಡವರು' ಎಂದುಕೊಂಡು ಕಾವೇರಿಗೆ ಸ್ನಾನಕ್ಕೆ ಬಂದರು. ಅವರು ಬಂದ ಎಷ್ಟೋ ಹೊತ್ತಿನ ಮೇಲೆ ಮಠದ ಪರಿಚಾರಿಕನೊಬ್ಬನು ಸ್ವಾಮಿಗಳ ವಸ್ತ್ರವನ್ನೊಗೆಯುವುದಕ್ಕೆ ಬಂದನು.

ಪರಿಚಾರಕ:—(ಶೇಷವಸ್ತ್ರವನ್ನು ಹಿಂಡುತ್ತಾ) ಸ್ವಾಮಿಾ, ನಿಮ್ಮ ನಿಮ್ಮ ಇಚ್ಛಾಭೋಜನವೇ ಆಗುತ್ತದೆ. ಬೇಗ ಮಠಕ್ಕೆ ಬನ್ನಿ.

ಯಾತ್ರಿಕರು:—(ಇವನಿಗೇನುಗೊತ್ತು ನಮ್ಮ ಸಂಕೇತ? ಎಂದುಕೊಂಡು) ನಮ್ಮ ಇಚ್ಛಾಭೋಜನ ನಿಮಗೆ ಹೇಗೆ ತಿಳಿಯಿತು?

ಪರಿಚಾರಕ:—(ವಸ್ತ್ರದ ಹಿಂಡಿಕೆಯನ್ನು ಕಲ್ಲಮೇಲಿಟ್ಟಿದ್ದನು) ನಿಮ್ಮನ್ನಾರು ಮಾತಾಡಿಸಿದರು?

ಯಾತ್ರಿಕರು:—ಈಗತಾನೇ ಹೇಳಿದಿರಿ.

ಪರಿಚಾರಕ:—ನಾನೇನೂ ಹೇಳಲಿಲ್ಲ.

ಯಾತ್ರಿಕರು:—(ಇವನಿಗೆ ಬುದ್ಧಿಭ್ರಮೆಯಿರಬಹುದು) ಹೋಗಲಿ.

ಪರಿಚಾರಕ:—(ವಸ್ತ್ರದ ಕಟ್ಟನ್ನು ತಲೆಯಮೇಲಿಟ್ಟುಕೊಂಡು ಪುನಃ) ಬೇಗಬನ್ನಿ ನಿಮ್ಮಿಚ್ಛಾಭೋಜನವಾಗುವುದು.

ಯಾತ್ರಿಕರಿಗಿದರ ಮರ್ಮ ತಿಳಿಯಲಿಲ್ಲ. ಆಹ್ನಿಕವನ್ನು ಮುಗಿಸಿ ಮಠಕ್ಕೆ ಬಂದರು. ಸ್ವಾಮಿಗಳು ಮೂವರಿಗೂ ತೀರ್ಥಕೊಟ್ಟು ಅಲಂಕಾರಪಙ್ತಿ ಯಲ್ಲಿ ಕೂಡಿಸಿದರು. ಭೋಜನಕಾಲದಲ್ಲಿ ಮೂವರಿಗೂ ಅವರವರು ಬಯಸಿದ್ದ ಪದಾರ್ಥಗಳನ್ನೇ ಬಡಿಸುವಂತೆ ಸ್ವಾಮಿಗಳಾಜ್ಞೆಯಾಯಿತು. ಯಾತ್ರಿಕರು ತಮ್ಮ ತಮ್ಮ ಸಂಕೇತವು ಸ್ವಾಮಿಗಳಿಗೆ ತಿಳಿಯಿತೆಂದು ಭಯಪಟ್ಟು ಕ್ಷಮೆ ಬೇಡಿದರು. ಪರಿಚಾರಕನಿಗೂ ಸ್ವಾಮಿಗಳ ವಸ್ತ್ರ ಕೈಯಲ್ಲಿದ್ದಾಗ ದಿವ್ಯ ಜ್ಞಾನವಾಗಿದ್ದುದೂ, ವಸ್ತ್ರವನ್ನು ಕೆಳಗಿಟ್ಟಾಗ ಅವನು ಮೂಢನಾಗಿದ್ದುದೂ ಯಾತ್ರಿಕರ ತಿಳಿವಳಿಕೆಗೆ ಬಂತು ಸ್ವಾಮಿಗಳು ಮಂತ್ರಾಕ್ಷತೆಯ ಕಾಲದಲ್ಲಿ ನೀವು ಮೂವರೂ ಮುಂದೆ ನಮ್ಮ ಬೃಂದಾವನ ಪೂಜಕರಾಗುವಿರೆಂದು ವರವಿತ್ತು ಯಾತ್ರಿಕರನ್ನು ಕಳುಹಿಸಿದರು.

ಸ್ವಾಮಿಗಳ ಮಹಿಮೆಯು ಅಪಾರವಾದುದು. ಇವರ ಚರಿತ್ರ ಶ್ರವಣದಿಂದ ಭಕ್ತರಿಗೆ ಭಕ್ತಿ ಹೆಚ್ಚುವುದು. ತಾಮಸರಿಗೆ ಪರಿಹಾಸ್ಯವನ್ನೂ ದ್ವೇಷವನ್ನೂ ಉಂಟುಮಾಡುವುದು.

## ವೀರ ಕ್ಷಾಮ

ಈಕಾಲದಲ್ಲಿ ದಕ್ಷಿಣ ದೇಶದಲ್ಲಿ ವೀರಕ್ಷಾಮವುಂಟಾಯಿತು. ಜನರು ಅನ್ನೋದಕಗಳಿಗೆ ಗತಿಯಿಲ್ಲದೆ ತಂಜಾವೂರಿಗೂ, ಕುಂಭಕೋಣೆಗೂ ತಂಡ ತಂಡವಾಗಿ ಬಂದರು. ಪರಮ ಧಾರ್ಮಿಕನಾದ ವಿಜಯರಾಘವನಾಯಕನು (ರಘುನಾಥಭೂಪಾಲನ ಮಗ) ದೇಶದಲ್ಲೆಲ್ಲಾ ಅನ್ನಸತ್ರಗಳನ್ನಿಡಿಸಿದನು. ಕ್ಷಾಮವು ವರ್ಷವರ್ಷವೂ ಹೆಚ್ಚಿತು ರಾಜನ ಧಾನ್ಯ ಭಂಡಾರವು ಬರಿದಾಗುತ್ತಾ ಬಂತು. ನೆರೆಹೊರೆಯ ರಾಜ್ಯದ ಪ್ರಜೆಗಳೂ ಅನ್ನಾತುರರಾಗಿ ತಂಜಾವೂರಿಗೆ ಬಂದರು ಲಕ್ಷಾವಧಿ ಜನರನ್ನು ಪೋಷಿಸುವುದು ರಾಜನಿಗೆ ಕಷ್ಟಕ್ಕಿಟ್ಟಿತು. ಸ್ವಾಮಿಗಳಿಂದಲೇ ಪರ್ಜನ್ಯ ಜಪಮಾಡಿಸಿ ದೇಶಕ್ಕೆ ಸುವೃಷ್ಟಿಯನ್ನುಂಟುಮಾಡಬೇಕೆಂದು ತಾನೇ ಕುಂಭಕೋಣೆಗೆ ಬಂದನು. ಅದುವರೆಗೆ ಮಾಡಿಸಿದ ಜಪಗಳು ಫಲದಾಯಕಗಳಾಗದಿರುವುದೇ ರಾಜನ ಬರುವಿಕೆಗೆ

ಕಾರಣವಾಯಿತು. ಸ್ವಾಮಿಗಳಿಗೂ ರಾಜನಿಗೂ ಪರಸ್ಪರ ಕುಶಲ ಪ್ರಶ್ನೆಗಳಾದವು. ಬಳಿಕ ರಾಜನು ಸದ್ಗುರೋ—"ಈ ಕ್ಷಾಮದಲ್ಲಿ ಒಬ್ಬರೂ ಉಳಿಯುವಹಾಗಿಲ್ಲ. ಅನ್ನಕ್ಕೆ ಗತಿಯಿಲ್ಲದೆ ಜನರು ಸಾಯುವ ಹೊತ್ತು ಬಂದಿದೆ. ಬೊಕ್ಕಸವು ಬರಿದಾಗುತ್ತ ಬಂತು. ದೇಶದಲ್ಲೆಲ್ಲೂ ಧಾನ್ಯಸಂಗ್ರಹವಿಲ್ಲ. ಜನಗಳ ಕಷ್ಟವನ್ನು ಕಣ್ಣಿನಿಂದ ನೋಡಲಾರೆನು. ಮಹಾ ತಪಸ್ವಿಗಳಾದ ತಾವೇ ಪರಿಹಾರ ಮಾಡಬೇಕು" ಎಂದು ಬೇಡಿಕೊಂಡನು. ರಾಜನಾದರೆ ತಾನೇ ಏನು ? ಲಕ್ಷಾವಧಿ ಜನರನ್ನು ತಡೆಯುವುದಕ್ಕಾದೀತೇ ? ಪ್ರಜೆಗಳಿಗೆ ಸಮೃದ್ಧಿಯಿದ್ದರೆ ರಾಜನಿಗೂ ಸಮೃದ್ಧಿ. ಪ್ರಜೆಗಳು ನಿರ್ಗತಿಕರಾದರೆ ರಾಜನೂ ಕ್ಷಾಮಪೀಡಿತನಾಗಬೇಕು.

ಮಹಾರಾಜನ ಪ್ರಜಾವಾತ್ಸಲ್ಯವನ್ನು ನೋಡಿ ಸ್ವಾಮಿಗಳಿಗೆ ಸಂತೋಷವಾಯಿತು. ಪ್ರಭುವೇ,—"ಈಶ್ವರ ಸಂಕಲ್ಪವನ್ನು ಮೀರುವುದು ಯಾರಿಗೂ ಸಾಧ್ಯವಲ್ಲ. ಕ್ಷಾಮವು ಈಗಲೇ ಪರಿಹಾರವಾಗುವಂತಿಲ್ಲ. ಪ್ರಜೆಗಳ ಪಾಪಾಚರಣೆಯೇ ಕ್ಷಾಮಡಾಮರಗಳಿಗೆ ಕಾರಣ. ಈಶ್ವರ ಸಂಕಲ್ಪವನ್ನೆದುರಿಸದೆ ಮನುಷ್ಯ ಪ್ರಯತ್ನದಲ್ಲಿ ಸಾಧ್ಯವಾದುದನ್ನು ಮಾಡಬೇಕು. ಪ್ರಜೆಗಳನ್ನುಳಿಸಿಕೊಳ್ಳಬೇಕು. ಕ್ಷಾಮನಿವಾರಣೆಯಾಗುವವರೆಗೂ ನಾವು ತಂಜಾವೂರಿನಲ್ಲಿರುವೆವು. ನಿನ್ನ ಧಾನ್ಯ ಭಂಡಾರದಲ್ಲಿ ಅಕ್ಷಯವಾಗುವಂತೆ ಶ್ರೀದೇವಿಯನ್ನು ಪ್ರಾರ್ಥಿಸುವೆವು. ಯೋಚಿಸದಿರು" ಎಂದು ರಾಜನೊಡನೆ ರಾಜಧಾನಿಗೆ ಬಂದರು. ನಿತ್ಯವೂ ಧಾನ್ಯರಾಶಿಯಮೇಲೆ ಶ್ರೀಬೀಜವನ್ನು ಬರೆದು ಅಕ್ಷಯವಾಗುವಂತೆ ಮಾಡಿ ಅನ್ನಛತ್ರಗಳಿಗೆ ಕಳುಹಿಸುತ್ತಾ ಬಂದರು. ಕೆಲವು ತಿಂಗಳುಗಳಿಗೂ ಸಾಲದಿದ್ದ ಧಾನ್ಯವು ವರ್ಷಗಳಾದರೂ ಮುಗಿಯಲಿಲ್ಲ.

ಸಾಧ್ವೀಮಣಿಯಾದ ದ್ರೌಪದಿಯು ಕೊಟ್ಟ ಶಾಖಪತ್ರದಿಂದ ತೃಪ್ತನಾಗಿ, ಶ್ರೀಹರಿಯು ಎಂಭತ್ತುಸಾವಿರ ಶಿಷ್ಯರೊಡನೆ ಪರೀಕ್ಷೆಗೆ ಬಂದ ದೂರ್ವಾಸರಿಗೆ ಮೃಷ್ಟಾನ್ನವನ್ನುಣಿಸಿದನು. ಭಕ್ತರ ಕೋರಿಕೆಯನ್ನು ಸಲಿಸಿ ಬಲು ದಿನಗಳಾದವೆಂದೋ ಎಂಬಂತೆ, ಈಗ ರಾಘವೇಂದ್ರರ ಪ್ರಾರ್ಥನೆಗೆ ಮೆಚ್ಚಿ ಕ್ಷಾಮಪೀಡಿತರನ್ನು ಸಲಹಿದನು.

ಸ್ವಲ್ಪಕಾಲದ ಮೇಲೆ ಕ್ಷಾಮತೀರಿ ಸುಭಿಕ್ಷವಾಯಿತು. ಪ್ರಜೆಗಳು ರಾಜನನ್ನೂ ಗುರುಗಳನ್ನೂ ಕೊಂಡಾಡಿ, ಕೃತಜ್ಞತೆಯಿಂದ ತಮ್ಮ ತಮ್ಮ

ಸ್ಥಳಗಳಿಗೆ ಪ್ರಯಾಣಮಾಡಿದರು. ಆ ಕಾಲದಿಂದ ಪ್ರಜೆಗಳು ಮಠಕ್ಕೆ ದೀಪಾರಾಧನ ಕಾಣಿಕೆಯನ್ನು ಕೊಡುತ್ತಾ ಬಂದರು. ಸುಬುಧೇಂದ್ರಸ್ವಾಮಿಗಳಕಾಲದವರೆಗೂ ಆ ಪದ್ಧತಿಯು ನಿರಾತಂಕವಾಗಿ ನಡೆಯುತ್ತಿತ್ತು. ಈ ಮೂರು ಶತಮಾನಗಳಷ್ಟು ಕಾಲಕ್ರಮಣದಲ್ಲಿ ಪರಿಸ್ಥಿತಿ ಬದಲಾಯಿತು. ದೊಡ್ಡ ಕೃಷ್ಣರಾಜ ಒಡೆಯರ ಕಾಲದಲ್ಲಿ ಶ್ರೀಮಠವು ಮೈಸೂರು ಸೀಮೆಗೆ ಬಂದುಬಿಟ್ಟಿತು. ಆ ದೇಶದಲ್ಲಿ ಮಠದ ಸಂಚಾರ ಕಡಮೆಯಾಯಿತು. ಜನತೆಯಲ್ಲಿ ಸಂಪ್ರದಾಯ ಮರೆತುಹೋಯಿತು. ಈಗಲೂ ಕೆಲವು ಸಂಪ್ರದಾಯಜ್ಞರು ಮಠದ ಸವಾರಿ ಆ ದೇಶದಲ್ಲಿ ಚಿತ್ತೈಸಿದಾಗ ತಮ್ಮ ಮರ್ಯಾದೆಯನ್ನು ಸ್ವಲ್ಪಮಟ್ಟಿಗೆ ನಡೆಸುತ್ತಾರೆ.

ವಿಜಯರಾಘವನಾಯಕನು ಗುರ್ವನುಗ್ರಹದಿಂದ ತನ್ನಿಷ್ಟಾರ್ಥಗಳು ಪೂರ್ತಿಯಾದವೆಂದು ತನ್ನ ಮನಸ್ಸಿನ ತೃಪ್ತಿಗಾಗಿ ಮೂಲರಾಮನಿಗೆ ದಿವ್ಯ ರತ್ನ ಮಾಲಿಕೆಯೊಂದನ್ನು ಸಮರ್ಪಿಸಿದನು. ಸುದರ್ಶನ ಹೋಮ ಕಾಲದಲ್ಲಿ ಆ ಮಾಲಿಕೆಯನ್ನು ಸ್ವಾಮಿಗಳ ಕೈಗೆ ಕೊಡಲು ಅವರು ಅದನ್ನು ಯಜ್ಞೇಶ್ವರನಿಗೆ ಸಮರ್ಪಿಸಿ ಕೈಮುಗಿದರು. ಹತ್ತಿರಿದ್ದವರೂ ರಾಜನೂ ಏನೂ ಮಾತನಾಡಲಾರದೆ ತವಕಿಸುತ್ತಿದ್ದರು. ಸ್ವಾಮಿಗಳು ಷೋಡಶೋಪಚಾರ ಕಾಲದಲ್ಲಿ ಅಗ್ನಿಯಿಂದ ಅದೇ ಮಾಲಿಕೆಯನ್ನು ತೆಗೆದು ರಾಮನಿಗರ್ಪಿಸಿದರು. ಮಾಲಿಕೆಯು ಸ್ವಲ್ಪವೂ ವಿರೂಪವಾಗದೆ ಥಳಥಳಿಸುತ್ತಿತ್ತು.

## ಪತಿತದ್ವಿಜ

ಸ್ವಾಮಿಗಳು ತಂಜಾವೂರನ್ನು ಬಿಟ್ಟಮೇಲೆ ಎರಡನೇ ಸಲ ರಾಮೇಶ್ವರ ಯಾತ್ರೆಮಾಡಿ ತಾಮ್ರಪರ್ಣಿತೀರದಲ್ಲಿ ಸಂಚರಿಸುತ್ತಾ *ಕಲ್ಲಡ ಕುರುಚಿಗೆ ಬಂದರು. ಆ ಅಗ್ರಹಾರದಲ್ಲಿ ಪತಿತ ಬ್ರಾಹ್ಮಣನೊಬ್ಬನು ಸ್ವಾಮಿಗಳಿಗೆ ನಮಸ್ಕರಿಸಿ,—"ಸ್ವಾಮಿ, ನನ್ನನ್ನು ಅಗ್ರಹಾರೀಕರು ಬಹಿಷ್ಕರಿಸಿರುವರು. ನನ್ನ ಮನೆಯಲ್ಲಿ ಹವ್ಯಕವ್ಯಗಳೊಂದಕ್ಕೂ ಬರುವುದಿಲ್ಲ. ನಾನೆಷ್ಟು ಬೇಡಿಕೊಂಡರೂ ಅವರು ಪ್ರಸನ್ನರಾಗುವುದಿಲ್ಲ. ನನ್ನನ್ನುದ್ಧರಿಸಿ ಗೋಷ್ಠಿಯಲ್ಲಿ

---

* ಕಲ್ಲಡಕುರುಚಿಯೆಂಬ ಅಗ್ರಹಾರ ನಿರ್ದೇಶದಲ್ಲಿ ಇನ್ನೂ ಸಂಶಯಗಳಿವೆ. ನನ್ನ ಕಳೆದ ತಮಿಳುನಾಡು ಸಂಚಾರದಲ್ಲಿ ಅದೇ ಸ್ಥಳವೆಂದು ನಿಶ್ಚೈಸುವುದಕ್ಕೆ ತಕ್ಕ ಆಧಾರಗಳು ದೊರೆಯಲಿಲ್ಲ. ಕೇಳಿದ ಮಾತನ್ನು ಮಾತ್ರ ಬರೆದಿರುತ್ತೇನೆ.

ಸೇರಿಸಿಕೊಡಬೇಕು" ಎಂದು ಬೇಡಿಕೊಂಡನು. ಪತಿತನ ಋಜುಭಾವವನ್ನೂ ಪಶ್ಚಾತ್ತಾಪವನ್ನೂ ನೋಡಿ ಸ್ವಾಮಿಗಳಿಗೆ ದಯೆಹುಟ್ಟಿತು. ನೀನು ಪೂಜಾ ಕಾಲದಲ್ಲಿ ಮಠಕ್ಕೆ ಬಾರೆಂದು ಆಜ್ಞೆಮಾಡಿದರು. ಅದರಂತೆ ಅವನು ಭಕ್ತಿಯಿಂದ ಸ್ನಾನಮಡಿಗಳನ್ನು ಮಾಡಿಕೊಂಡು ಸಕಾಲದಲ್ಲಿ ಬಂದು ಕುಳಿತನು ಸ್ವಾಮಿಗಳು ಅವನನ್ನು ಹತ್ತಿರ ಕರೆದು ಶಂಖೋದಕ ಪ್ರೋಕ್ಷಣೆಯಿಂದ ಶುದ್ಧಿಮಾಡಿ ತೀರ್ಥಪ್ರಸಾದಗಳನ್ನನುಗ್ರಹಿಸಿದರು. ಅಗ್ರಹಾರಸ್ಥರು ಸ್ವಾಮಿಗಳೆದುರಿಗೆ ಮಾತನಾಡುವ ಧೈರ್ಯವಿಲ್ಲದೆ, ಹಿಂದುಗಡೆ ದುಡ್ಡು ಕೊಟ್ಟವರೆಲ್ಲಾ ಶುದ್ಧರೆಂದಾಡಿಕೊಂಡರು. ಈ ಮಾತು ಹೇಗೋ ಸ್ವಾಮಿಗಳಿಗೆ ತಿಳಿಯಿತು. ಸಂಶಯ ಪರಿಹಾರಮಾಡಲು ಗ್ರಾಮಸ್ಥರನ್ನು ಕರೆಯಿಸಿ, ಬಿಳಿಯ ಬಟ್ಟೆಯೊಂದನ್ನು ಭಲ್ಲಾತಕಿಯ ರಸದಲ್ಲಿ (ಗೇರು) ತೋಯಿಸಿ, ಶಂಖೋದಕ ಪ್ರೋಕ್ಷಣೆಯಿಂದ ಮತ್ತೆ ಬಿಳಿಯ ವಸ್ತ್ರವನ್ನೇ ಮಾಡಿ—'ನೋಡಿದಿರೋ ! ಇದರಂತೆ ಆ ಪತಿತನೂ ಶುದ್ಧನಾದನು. ಲೋಕದಲ್ಲಿ ಪ್ರತಿಪ್ರಾಣಿಯೂ ಜ್ಞಾತಾಜ್ಞಾತವಾದ ಅನೇಕ ಪಾಪಗಳಿಗೆ ಗುರಿಯಾಗುವನು. ಮನುಷ್ಯನ ಪಾಪಕ್ಕೆ ಶಿಕ್ಷೆಯನ್ನು ವಿಧಿಸಬೇಕೆಂದರೆ ದೇವರೂ ನಿಮಿಷಕ್ಕೊಂದು ಬ್ರಹ್ಮಾಂಡ ಲಯಮಾಡಬೇಕಾದೀತು ದೇವರು ಪತಿತ ಪಾವನನು ; ದಯಾಮಯನು. ಪತಿಯ ಪ್ರೇಮದ್ರೋಹಿಯೆನಿಸಿ ಶಿಲೆಯಾಗಿ ಬಿದ್ದಿದ್ದ ಅಹಲ್ಯೆಯನ್ನುದ್ಧರಿಸಿದನು. ಚಂಡಾಲರಲ್ಲಿ ಬೆರೆತು ಪರಮಪಾತಕಿಗಳೆನಿಸಿದ ಅಜಾಮಿಳ ಮಾಧವರಿಗೆ ಸದ್ಗತಿಯಿತ್ತನು. ಯಾವನೇ ಆಗಲಿ, ತಾನು ಮಾಡಿದ ಕೆಲಸದಲ್ಲಿ ತಪ್ಪನ್ನು ತಿಳಿದರೆ ಅವನ ಅರ್ಧದೋಷ ಪರಿಹಾರವಾಗುವುದು. ತಪ್ಪನ್ನು ಪರರ ಮುಂದೆ ಹೇಳಿಕೊಂಡು ಪಶ್ಚಾತ್ತಾಪಪಟ್ಟರೆ ದೋಷದೂರನಾಗುವನು. ನಿಮ್ಮ ತಿರಸ್ಕಾರದಿಂದಲೂ, ತನ್ನ ಪಶ್ಚಾತ್ತಾಪದಿಂದಲೂ ಪತಿತನು ದೋಷದೂರನಾದನು. ಅವನನ್ನು ದೂಷಿಸಿದರೆ ನೀವೇ ದೋಷಿಗಳಾಗುವಿರಿ' ಎಂದು ಬುದ್ಧಿಹೇಳಿ ಕಳುಹಿಸಿದರು. ಅಗ್ರಹಾರಿಕರು ಅನ್ಯಥಾ ಭಾವಿಸಿದುದಕ್ಕಾಗಿ ಸ್ವಾಮಿಗಳ ಕ್ಷಮೆಬೇಡಿದರು.

ಹೀಗೆ ಸ್ವಾಮಿಗಳವರು ದೀನರನ್ನುದ್ಧರಿಸುತ್ತಾ, ದುರ್ವಾದಿಗಳನ್ನು ನಿಗ್ರಹಿಸುತ್ತಾ, ಶಿಷ್ಯರಿಗೆ ನಿರಂತರ ಪಾಠಪ್ರವಚನ ಮಾಡಿಸುತ್ತಾ, ತತ್ಕಾಲದ ಸೇತುಯಾತ್ರೆಯನ್ನು ಪೂರೈಸಿ ಕುಂಭಕೋಣೆಯನ್ನು ಸೇರಿದರು.

# ೯. ಸ್ವಾಮಿಗಳ ಕಡೆಯ ಸಂಚಾರ.

ಕೆಲವು ಕಾಲಾನಂತರ ಸ್ವಾಮಿಗಳು ಭಕ್ತ ಜನರನ್ನುದ್ಧರಿಸಲು ಮತ್ತೆ ಸಂಚಾರ ಹೊರಟು ಉತ್ತರ ಕರ್ಣಾಟಕಕ್ಕೆ ಬಂದರು. ಆಗ ತುಂಗಭದ್ರೆಯ ಮೇಲಿನ ಸೀಮೆಗಳು ಸವಣೂರು ನವಾಬನಿಗೆ ಸೇರಿದ್ದವು. ರಾಜರೆಂದರೆ ನವಾಬರೇ. ಉತ್ತರದಲ್ಲಿ ದೆಹಲಿಯ, ದಕ್ಷಿಣದಲ್ಲಿ ಬಿಜಾಪುರದ, ಬಾದ ಷಹರು ತಮ್ಮ ಸುಭಾದಾರರಿಂದ ಭಂಡಾರವನ್ನು ತುಂಬಿಸಿಕೊಳ್ಳುತ್ತಿದ್ದರು. ತಂಜಾವೂರಲ್ಲಿ ರಘುನಾಥ ಭೂಪಾಲನ ನಂತರ ಬಂದ ರಾಜರು ಶಕ್ತರಾಗಿರ ಲಿಲ್ಲ. ಮೈಸೂರರಸರು ದೆಹಲಿಯವರಿಗೆ ಅಂಕಿತರಾಗಿದ್ದರು. ಹಿಂದೂ ಜನರ ಮಾನ ಪ್ರಾಣಗಳು ತುರುಕರ ಕೈಯಲ್ಲಿದ್ದುವೆಂದು ಹೇಳಬೇಕಾಗಿಲ್ಲ. ಉತ್ತರ ಕರ್ಣಾಟಕದಲ್ಲಂತೂ ಜನರು ನಿರ್ಭಯವಾಗಿ ಸಂಚರಿಸುವುದು ಗಂಡಾಂತರವಾಗಿತ್ತು. ಆಂಗ್ಲೇಯರು ಸಾರ್ವಭೌಮರಾಗಿ, ದೇಶೀಯರನ್ನು ನಿರ್ವೀರ್ಯರನ್ನಾಗಿ ಮಾಡಿದ ಈ ಕಾಲದಲ್ಲೂ ಮುಸಲ್ಮಾನರ ಹಾವಳಿ ಬಲ ವಾಗಿರುವಾಗ, ಅವರೇ ರಾಜರಾಗಿದ್ದಾಗ ದೇಶಸ್ಥಿತಿ ಹೇಗಿತ್ತೆಂದು ಹೇಳ ಬೇಕೆ ?

ಹಿಂದುಗಳು ವಾಸದ ಮನೆಯನ್ನು ಕಟ್ಟಿದರೂ ಮುಸಲ್ಮಾನರ ಪಂಜಾ (ಚಟ್ಟು) ಗುರುತನ್ನು ಗೋಡೆಗೆ ಬಡಿದು, ನಿಮ್ಮ ಸಂಪ್ರದಾಯಕ್ಕೆ ಅಗ್ರ ಮರ್ಯಾದೆ ಮಾಡಿರುವೆವೆಂದು ಗೃಹಪ್ರವೇಶ ಮಾಡಬೇಕಾಗಿತ್ತು.

ಈ ಪದ್ಧತಿ ಈಗಲೂ ರೂಢಿಯಲ್ಲಿ ನಿಂತು ಪೂರ್ವಾಚಾರವೆನಿಸಿ ಕೊಂಡಿದೆ.

ಅಂದಮೇಲೆ ಹಿಂದೂ ಮತ ಪ್ರಚಾರಕರ ಪಾಡೇನು ? ತಮ್ಮ ತಪಶ್ಶಕ್ತಿ ಯಿಂದ ಅತಿಮಾನುಷ ಮಹಿಮೆಗಳನ್ನು ತೋರಿಸಿ ಧರ್ಮಧ್ವಜವನ್ನು ಸ್ಥಾಪಿಸಬೇಕಾಗಿತ್ತು. ಇಂಥಾ ದುಷ್ಟ ಪರಿಸ್ಥಿತಿಗಳಿದ್ದುದರಿಂದಲೇ ಒಳ್ಳೊಳ್ಳೇ ಮಹಿಮರ ಅವತಾರವಾಯಿತೋ ಏನೋ ? ಒಂದು ಕಡೆ ಸ್ವಧರ್ಮಿಗಳಾದ ಪಂಡಿತರನ್ನು ವಾಕ್ಯಾರ್ಥದಿಂದೊಡಂಬಡಿಸಿ, ಗಹನ ತತ್ವಗಳು ಸುಲಭವಾಗಿ

ತಿಳಿಯುವಂತೆ ಗ್ರಂಥರಚನೆ ಮಾಡಬೇಕು ಮತ್ತೊಂದು ಕಡೆ ವಿಧರ್ಮಿಗಳು ಗುಣಬದ್ಧರಾಗದಿದ್ದರೆ ಅದ್ಭುತ ಮಹಿಮೆಯನ್ನು ತೋರಿಸಿ ಶರಣಾಗತರಾಗು ವಂತೆ ಮಾಡಿಕೊಳ್ಳಬೇಕು.

ಹೀಗಿರಲು, ಆಗಿದ್ದ ತುರುಷ್ಕರಾಜನು ತನ್ನ ದೇಶದಲ್ಲಿ ನಜರಾಣದ ವಸೂಲಿಗೆ ರಾಣೀವಾಸವನ್ನೂ ಕರೆದುಕೊಂಡು ಸೇನಾ ಸಮೇತನಾಗಿ ಸಂಚರಿಸುತ್ತಿದ್ದನು. ಬಂದ ದಂಡಿನ ಸರಬರಾಯಿ, ಅವರು ಹೊಡೆದ ಕೊಳ್ಳೆ, ಇಷ್ಟೂ ಕೊಟ್ಟು, ನವಾಬನ ಗೌರವಕ್ಕೆ ತಕ್ಕ ಸುವರ್ಣ ಪುಷ್ಪಗಳನ್ನೂ ಒಪ್ಪಿಸಬೇಕು. ಇಲ್ಲದಿದ್ದರೆ ನವಾಬನ ಡೇರೆಯ ಗೂಟಗಳು ಕದಲುತ್ತಿರಲಿಲ್ಲ.

## ಸರ್ಪದಂಶ

ಕೃಷ್ಣಾಪುರವೆಂಬ ಗ್ರಾಮದಲ್ಲಿ (ಈಗಿನ ಹುಬ್ಬಳ್ಳಿಯ ಒಂದು ಭಾಗ) ಪದ್ಧತಿಯಂತೆ ಸುಲಿಗೆಯಾಗುತ್ತಿರಲು, ನವಾಬನ ಮಗನು ಅಕಸ್ಮಾತ್ ಸರ್ಪದಷ್ಟನಾಗಿ ಮೃತನಾದನು. ಪುತ್ರಶೋಕದಿಂದ ತಪ್ತನಾದ ನವಾಬನು ಆ ಶರೀರವನ್ನು ಸಮಾಧಿಮಾಡಿಸಿ, ಹೆಚ್ಚಿಗೆ ಪರಿವಾರವನ್ನು ಸವಣೂರಿಗೆ ಕಳು ಹಿಸಿ, ಅದೇ ತೋಪಿನ ಬಳಿ ಪಟಗೃಹದಲ್ಲಿ ವಾಸಮಾಡುತ್ತಿದ್ದನು.

ಸ್ವಾಮಿಗಳ ಪ್ರಯಾಣವೂ ಅದೇ ಮಾರ್ಗದಲ್ಲಾಯಿತು. ಬೋಯಿಗಳು ದಣುವಾರಿಸಿಕೊಳ್ಳಲು ತೋಪಿನಲ್ಲಿ ಮೇನೆಯನ್ನಿಳಿಸಿದರು. ಮೇನೆಯ ಸಮೀಪದಲ್ಲೇ ರಾಜಕುಮಾರನ ಸಮಾಧಿಯಿತ್ತು. ತೋಪಿನಲ್ಲಿ ಮೇನೆಯೂ ಜನರೂ ಇರುವುದನ್ನು ನವಾಬನು ನೋಡಿ, ಯಾರಿರಬಹುದೆಂದು ವಿಚಾರಿ ಸಲು ತಾನೇ ಬಂದನು. ಮೇನೆಯಲ್ಲಿ ಕುಳಿತಿರುವವರು ಹಿಂದೂ ಧರ್ಮದ ಯತಿಗಳೆಂದು ಗೊತ್ತಾಯಿತು. ವ್ಯಸನಕಾಲದಲ್ಲಿ ಸ್ವಾಭಾವಿಕವಾಗಿ ಹುಟ್ಟುವ ಸಾತ್ವಿಕ ಗುರುತ್ವ ಬುದ್ಧಿಯಿಂದ ನವಾಬನು ಹತ್ತಿರ ಬಂದು ಸ್ವಾಮಿಗಳಿಗೆ ಸಲಾಂ ಮಾಡಿದನು. ಮ್ಲಾನವದನನಾದ ನವಾಬನೊಡನೆ ಸ್ವಾಮಿಗಳು ಕುಶಲಪ್ರಶ್ನೆ ಮಾಡುವಷ್ಟರಲ್ಲಿ ಅವನ ಕಣ್ಣಿಂದ ನೀರುದುರಿತು. ಮಗನ ದುರ್ಮರಣವನ್ನು ಹೇಳಿಕೊಂಡು ಅವನು ಸಮಾಧಿಯನ್ನು ತೋರಿಸಿದನು. ಸಮಾಧಿಯಾಗಿ ಎಷ್ಟು ಕಾಲವಾಯಿತೆಂಬುದನ್ನು ಕೇಳಿ ಸ್ವಾಮಿಗಳು, ಇನ್ನೂ ಕೈಮೀರಿಲ್ಲವೆಂದಭಯವಿತ್ತು, ಸಮಾಧಿಯನ್ನಗೆಯಿಸಿ, ಗರುಡ ಮಂತ್ರದಿಂದ

ವಿಷಬಾಧೆಯನ್ನು ಪರಿಹರಿಸಿ, ಮಂತ್ರಪೂತವಾದ ಉದಕ ಪ್ರೋಕ್ಷಣೆಯಿಂದ ರಾಜಕುಮಾರನನ್ನು ಬದುಕಿಸಿದರು. ನವಾಬನ ಸಂತೋಷವೂ ಗುರು ಭಕ್ತಿಯೂ ಅಪಾರವಾಯಿತು. ಬಹು ವಿಧದಿಂದ ಸ್ವಾಮಿಗಳನ್ನು ಸತ್ಕರಿಸಿ ಅನೇಕ ಜವಾಹೀರುಗಳನ್ನೂ ಕೃಷ್ಣಾಪುರ ಮೊದಲಾದ ಹನ್ನೆರಡು ಗ್ರಾಮಗಳ ಜಹಗೀರಿಯನ್ನೂ ಕೊಟ್ಟನು.

[ಈ ಜಹಗೀರಿಯು ಕಂಪನಿಯ ಸರ್ಕಾರ ಬಂದಾಗ ತಪ್ಪಿಹೋದಂತೆ ಕಾಣುತ್ತದೆ.]

## ಜಲನಿರ್ಮಾಣ

ಅನಂತರ ನೀರು ನೆರಳಿಲ್ಲದ ಮಾರ್ಗ ಮಧ್ಯದಲ್ಲಿ ಮಠದ ಶೂದ್ರ ಸೇವಕ ನೊಬ್ಬನ ಹೆಂಡತಿಗೆ ಪ್ರಸವವೇದನೆಯಾಗಲು, ಸ್ವಾಮಿಗಳು ದಂಡದಿಂದ ದಿವ್ಯ ಸ್ವಾದೋದಕ ಕುಂಡವನ್ನು ನಿರ್ಮಿಸಿ ಹೊದ್ದಿದ್ದ ಶಾಟಿಯನ್ನು ಅಂತರಾಳ ದಲ್ಲಿ ನೆರಳಾಗಿ ನಿಲ್ಲುವಂತೆ ಮಾಡಿ ಆ ದೀನರನ್ನು ಸಲಹಿದರು.

ಇಂಥಾ ಮಹಿಮೆಗಳೇ ಅವರ ಚರಿತ್ರೆಯಲ್ಲಿ ಹೇರಳವಾಗಿರುವವು. ಎಲ್ಲವನ್ನೂ ಬರೆದರೆ ಗ್ರಂಥ ವಿಸ್ತಾರವಾಗುತ್ತದೆ. ಆಧುನಿಕ ತರುಣರ ಬುದ್ಧಿ ಯಲ್ಲಿ ತೂರಲಾರದೆಂಬ ಭಯವಾಗುತ್ತದೆ. ನಮ್ಮ ಪೂರ್ವಿಕರ ಅತಿಮಾನುಷ ಮಹಿಮೆಗಳಿಗೆ ಶಬ್ದ ದಾರಿದ್ರ್ಯದಿಂದ 'ಮೆಸ್ಮರಿಸಂ, ಹಿಪ್ನಾಟಿಸಂ' ಎಂದು ಬಿಡುತ್ತಾರೆ. ವಿಜ್ಞಾನ ಶಾಸ್ತ್ರಜ್ಞರಿಗೆ ಯೋಗಮಹಿಮೆಯ "ಅ, ಆ, ಇ, ಈ" ಸಹ ತಿಳಿಯದಿರುವಾಗ ಅವರ ಹತ್ತಿರ ಯಾರು ಪಂಚಾಯಿತಿಗೆ ಕೂಡ ಬೇಕು ?

ರಾಘವೇಂದ್ರರ ಮಾತಿರಲಿ. ಪ್ರಪಂಚದ ಯಾವ ಸಮಾಜವನ್ನಾ ದರೂ ತೆಗೆದು ಕೊಳ್ಳೋಣ ! ಅಲ್ಲಿ ಅವತರಿಸಿದ ಆಚಾರ್ಯಪುರುಷರ ವಿಜಯ ಚರಿತ್ರೆಗಳನ್ನು ಓದೋಣ ! ಅಲ್ಲೂ ಇಂಥಾ ಅದ್ಭುತ ಕಥೆಗಳೇ ಹೇರಳ ವಾಗಿವೆ.

ಭಗವಂತನ ಕೃಷ್ಣಾವತಾರದಲ್ಲೂ ಇಂಥ ಕಥೆಗಳೇ ತುಂಬಿವೆ. ಜ್ಞಾನಾಧಿಕಾರಿಗಳಾದ ಉದ್ಧವಾರ್ಜುನರಿಬ್ಬರಿಗೆ ಮಾತ್ರ ಶ್ರೀಕೃಷ್ಣನು ತತ್ವೋಪದೇಶ ಮಾಡಿದನು. ಅರ್ಜುನನಿಗೂ ತತ್ವದಲ್ಲಿ ನಿಶ್ಚಯಬುದ್ಧಿ

ಹುಟ್ಟಿದಿರಲು, ಶ್ರೀಕೃಷ್ಣನು ವಿಶ್ವರೂಪದರ್ಶನವೆಂಬ ಅತಿಮಾನುಷ ಮಹಿಮೆಯನ್ನು ತೋರಿಸಬೇಕಾಯಿತು. ಆಗಲೇ ಅವನ ಸಂಶಯ ಪರಿಹಾರವಾಯಿತು.

**ಶ್ಲೋ॥ ನಷ್ಟೋಮೋಹಃ ಸ್ಮೃತಿರ್ಲಬ್ಧಾ ।**
**ತ್ವತ್ಪ್ರಸಾದಾನ್ಮಯಾಚ್ಯುತ ॥**
**ಸ್ಥಿತೋಽಸ್ಮಿ ಗತಸಂದೇಹಃ ।**
**ಕರಿಷ್ಯೇವಚನಂ ತವ ॥೭೩॥** xviii

ಎನ್ನುತ್ತಾ ಸ್ವಾಮಿಗೆ ಶರಣಾಗತನಾದನು.

ಗೋಕುಲದ ದನಗಾವ ಗೊಲ್ಲತಿಯರಿಗೆ, ಹಾಲು, ಮೊಸರು, ಬೆಣ್ಣೆಗಳನ್ನು ಕದ್ದುತಿಂದು, ಮೊದಲು ಸಂಶಯವನ್ನೂ ಕಡೆಗೆ ದ್ವೇಷವನ್ನೂ ಹುಟ್ಟಿಸಿ ಅನಂತರ ಇಷ್ಟು ಜನರ ಮನೆಯಲ್ಲಿ ಕದ್ದ ಹಾಲೆಷ್ಟು? ಮೊಸರೆಷ್ಟು? ಬೆಣ್ಣೆಯೆಷ್ಟು? ಎಲ್ಲವನ್ನೂ ಒಬ್ಬನೇ ಹೇಗೆ ತಿಂದ? ಹೇಗೆ ಅರಗಿಸಿಕೊಂಡ? ಎಲ್ಲರ ಮನೆಯಲ್ಲೂ ಏಕ ಕಾಲದಲ್ಲಿ ಹೇಗೆ ಕಾಣಿಸಿದ? ಎಂಬ ವಿಚಾರಗಳನ್ನುಂಟುಮಾಡಿ, ಇವನು ಮನುಷ್ಯಮಾತ್ರನಲ್ಲ; ದೇವರೇ ಸರಿ; ಎಂಬ ಭಕ್ತಿಯನ್ನು ಹುಟ್ಟಿಸಿ ಅಂಥವರಿಗೂ ಮೋಕ್ಷವಿತ್ತನು. ಮತ್ತೆ ಕೆಲವರು ಅವನ ವೇಣುಗಾನರಾಸೋತ್ಸವಗಳಿಂದ ಮೋಹಿತರಾಗಿ ಭಕ್ತರಾದರು. ಅಧಿಕಾರಿಯೋಗ್ಯತೆಯನ್ನನುಸರಿಸಿ ತಕ್ಕ ಉಪಾಯದಿಂದ ಸಮಾಜವನ್ನುದ್ಧರಿಸುವುದೇ ಈಶ್ವರಕಾರ್ಯ. ಮಹಾತ್ಮರುಗಳಾದರೂ ಅದೇ ಮಾರ್ಗವನ್ನೇ ಅನುಸರಿಸುವರು.

ಯಾವ ಕಾಲದಲ್ಲೂ ಜನರಿಗೆ ಮೂಢಭಕ್ತಿ ಹೆಚ್ಚು. ತಮ್ಮ ಮನಗಂಡ ವಿಷಯಗಳನ್ನು ವಿವರಿಸಲಾರದವರನ್ನು ಜನರು ಮೂಢಭಕ್ತರೆನ್ನುವರು. ಎಲ್ಲರೊಡನೆ ವಿವಾದಮಾಡಿ ತತ್ವಗಳನ್ನು ಮನಗಾಣಿಸಿಕೊಡುವುದು ಯಾವಾಗಲೂ ಸಾಧ್ಯವಲ್ಲ. ವಾದದಲ್ಲಿ ಪರಾಜಿತರಾದವರಿಗೂ ಬಹುಕಾಲದಿಂದ ಅಂಟಿಬಂದ ಅಜ್ಞಾನರೋಗ ಬಿಡುವುದಿಲ್ಲ. ಅಂಥವರಿಗೆ ಅದ್ಭುತ ಮಹಿಮಾಪ್ರದರ್ಶನವೊಂದೇ ಗಂಡೌಷಧ. ಅಂಥವುಗಳನ್ನೇ ಜನರು ನಂಬುವರು. ವಿಚಾರಬಲದಿಂದ ಕ್ರಮೇಣ ತತ್ವವನ್ನು ತಿಳಿದು ನಡೆಯುವರು.

ಮಧ್ವಾಚಾರ್ಯರಂಥಾ ಪ್ರಬಲ ಅವತಾರಪುರುಷರಾದರೂ ಇದೇ ಮಾರ್ಗ ಹಿಡಿಯಬೇಕಾಯಿತು. ದುಷ್ಟ ಅಲ್ಲಾಖಿಲ್ಜಿಯು ಮತದ್ವೇಷದಿಂದ ಹಿಂದುಗ ಗಳನ್ನು ಪರಿಪರಿಯಾಗಿ ಗೋಳಾಡಿಸುತ್ತಿದ್ದನು. ಗಂಗಾ ನದಿಯನ್ನೇ ಹಿಂದುಗಳು ದಾಟಿ ಬರಕೂಡದೆಂದು ಮಾರ್ಗ ನಿರೋಧಮಾಡಿದ್ದನು. ತುರುಷ್ಕ ಸೈನ್ಯವನ್ನು ಕಾವಲಿಟ್ಟು ಆಜ್ಞೋಲ್ಲಂಘನ ಮಾಡಿದವರನ್ನು ದಂಡಿಸುತ್ತಿದ್ದನು. ಶಿಷ್ಯ ಪರಿವಾರ ಸಹಿತ ಬದರೀ ಯಾತ್ರೆಗೆ ಹೊರಟ ಮಧ್ವಾಚಾರ್ಯರಿಗೂ ಗಂಗೆ ಯನ್ನು ದಾಟಗೊಡಲಿಲ್ಲ. ಆಚಾರ್ಯರು ಆಜ್ಞೋಲ್ಲಂಘನಮಾಡಿ ತಮ್ಮ ಯೋಗಬಲದಿಂದ ಶಿಷ್ಯರು ಸಾಲಾಗಿ ಒಬ್ಬರ ಕೈ ಮತ್ತೊಬ್ಬರು ಹಿಡಿದು ಬರು ವಂತೆಮಾಡಿ, ನೀರಿನಲ್ಲಿ ಕಾಲು ಸಹ ತೋಯದಂತೆ ನಡೆಸಿ, ನದಿಯನ್ನು ದಾಟಿ ಬಂದರು. ಖಿಲ್ಜಿಯ ಸೈನಿಕರಿಗಿದು ಆಶ್ಚರ್ಯವನ್ನುಂಟುಮಾಡಿತು. ಆದರೂ ಅವರು ರಾಜಾಜ್ಞೆಯಿಂದ ಆಚಾರ್ಯರನ್ನು ಕೊಲ್ಲುವುದಕ್ಕೆ ಬಂದರು ಆಚಾರ್ಯರು ತಮ್ಮ ಕರವಸ್ತ್ರವನ್ನು ತಿರುಗಿಸುತ್ತಾ ಸೈನಿಕರಿಗೆದುರಾದರು. ಆ ವಸ್ತ್ರಭ್ರಮಣವು ವಿದ್ಯುಲ್ಲತೆಯಾಗಿ ಪರಿಣಮಿಸಿ, ಸೈನಿಕರನ್ನು ಮೋಹಗೊಳಿ ಸಿತು ಮಾರಿಬಂದ ಸೈನಿಕರೆಲ್ಲಾ ಮೂರ್ಛಾಕ್ರಾಂತರಾದರು. ಖಿಲ್ಜಿಯೂ ತೇಜೋರಾಶಿಯೇ ಮನುಷ್ಯಾಕಾರದಿಂದ ಬರುತ್ತಿರುವುದನ್ನು ನೋಡಿ ಮುಗ್ಧ ನಾದನು. ಆಚಾರ್ಯರು ರಾಜಸಭೆಯನ್ನು ಪ್ರವೇಶಿಸುತ್ತಲೇ ನವಾಬನು ಶರಣಾಗತನಾದನು. ಅವನೊಡನೆ ಆಚಾರ್ಯರು ಅರಬ್ಬೀ ಭಾಷೆಯಲ್ಲೇ ಮಾತನಾಡಿದರು. ಆಚಾರ್ಯರ ಮಾತಿಗೆ ಮರುಳಾದ ಖಿಲ್ಜಿಯು ತನ್ನ ಅರ್ಧ ರಾಜ್ಯವನ್ನೊಪ್ಪಿಸಿದನು. ಆಚಾರ್ಯರು ಅವನ ರಾಜ್ಯವನ್ನು ಅವನಿಗೇ ಕೊಟ್ಟು ಮತದ್ವೇಷ ಮಾಡಬೇಡವೆಂದು ಬುದ್ಧಿ ಹೇಳಿ ಬದರಿಗೆ ಹೊರಟರು.

ಸ್ವಾಮಿಗಳ ಸಂಚಾರವೇನೋ ಭರದಿಂದ ಸಾಗಿತು. ತಂಡೋಪ ತಂಡವಾಗಿ ಜನರು ಬಂದು ಗುರುಸೇವೆಯಿಂದ ಕೃತಾರ್ಥರಾದರು. ಉತ್ತರ ದಿಂದ ದಕ್ಷಿಣಕ್ಕೆ ಬರುತ್ತ ಒಂದು ದಿನ ಮಧ್ಯಾಹ್ನಕಾಲದಲ್ಲಿ (ಶಾ|| ೧೫೯೧ ಜ್ಯೇಷ್ಠ ಶು|| ೧೫) ಕುಸುಮವರ್ತಿಯ ಕೃಷ್ಣದ್ವೈಪಾಯನ ಸ್ವಾಮಿಗಳು ಮುಕ್ತರಾಗಿ ವೈಕುಂಠ ವಿಮಾನದಲ್ಲಿ ಪ್ರಯಾಣಮಾಡುತ್ತಿರಲು, ಪಾಠಹೇಳು ತ್ತಿದ್ದ ರಾಘವೇಂದ್ರರು ತಟ್ಟನೆ ಎದ್ದುನಿಂತು ಕೈಮುಗಿದರು. ಶಿಷ್ಯರಿಗೊಂದೂ ತಿಳಿಯಲಿಲ್ಲ. ಗುರುಗಳಂತೆ ತಾವೂ ಕೈಮುಗಿದು ನಿಂತುಕೊಂಡರು.

ರಾಘವೇಂದ್ರರು ನಾವು ಇನ್ನೆಷ್ಟು ದಿವಸ ಈ ಭೂಲೋಕವಾಸ ಮಾಡಬೇಕೆಂದು ಕೃಷ್ಣದ್ವೈಪಾಯನರನ್ನು ಕೇಳಿದರು. ಅದಕ್ಕವರು ಕೈ ಬೆರಳೆರಡನ್ನು ಜೋಡಿಸಿ ಮೂರುಬಾರಿ ಬೀಸಿದರು. ಇದೊಂದೂ ಶಿಷ್ಯರಿಗೆ ತಿಳಿಯಲಿಲ್ಲ. ಗುರುಗಳು ಪೀಠದಮೇಲೆ ಕೂಡುತ್ತಲೇ ಏನು ಸಮಾಚಾರವೋ ಆಜ್ಞೆಯಾಗಬೇಕೆಂದು ಕೇಳಿದರು. ರಾಘವೇಂದ್ರರು—"ಕೃಷ್ಣದ್ವೈಪಾಯನರು ಮುಕ್ತರಾಗಿ ವಿಮಾನವೇರಿ ಹೋಗುತ್ತಿದ್ದರು. ಅವರನ್ನು ನೋಡಿ ನಮಸ್ಕರಿಸಿದೆವು. ನಾವು ಇನ್ನೆಷ್ಟು ಕಾಲ ಭೂಮಿಯಲ್ಲಿರಬೇಕೆಂದು ಕೇಳಿದೆವು. ಅವರು ಕೈಸನ್ನೆಯಿಂದ ಇನ್ನು ಎರಡು ವರುಷ, ಎರಡು ತಿಂಗಳು, ಎರಡು ದಿನವೆಂದು ತಿಳಿಸಿದರು. ಇಷ್ಟೇ" ಎಂದು ಕಣ್ಣುಮುಚ್ಚಿ ಕುಳಿತರು.

ಕೃಷ್ಣದ್ವೈಪಾಯನರು ಶ್ರೀ. ಉತ್ತರಾದಿಮಠ ಪರಂಪರೆಯಲ್ಲಿ ಬಂದ ವೇದವ್ಯಾಸತೀರ್ಥರಿಂದ ಆಶ್ರಮಪಡೆದ ಯತಿವರರು. ಇವರು ಸಂಸ್ಥಾನಾಧಿಪತ್ಯ ಬಯಸಿ ಸನ್ಯಾಸ ಸ್ವೀಕಾರಮಾಡಿದವರಲ್ಲ. ಕೇವಲ ವಿರಕ್ತರಾಗಿ ಪಾಠ ಪ್ರವಚನ ಮಾಡಿಕೊಂಡಿದ್ದು ಭೀಮಾತೀರದ ಕುಸುಮವರ್ತಿಯೆಂಬ ಸ್ಥಳದಲ್ಲಿ ಬೃಂದಾವನಸ್ಥರಾದರು. ಇವರು ಮಹಾಮಹಿಮರಾದ್ದರಿಂದ ಜಗನ್ನಾಥದಾಸರು ಸಹ ಕೊಂಡಾಡಿದ್ದಾರೆ.

ಶಿಷ್ಯರು ಸ್ತಬ್ಧರಾಗಿ ಮನಸ್ಸಿನಲ್ಲೇ ವಿಚಾರಮಗ್ನರಾದರು. ಸ್ವಾಮಿಗಳು ಪಾರ್ಥಿವಶರೀರದಿಂದಿರುವುದರ ಅವಧಿಯು ಅವರ ಮನಸ್ಸಿಗೆ ಹಳಹಳಿಯನ್ನುಂಟುಮಾಡಿತು.

ಬಹಳಹೊತ್ತಿನಮೇಲೆ ಸ್ವಾಮಿಗಳು ಕಣ್ಣುಬಿಟ್ಟು, ಸರ್ವಾಧಿಕಾರಿಯನ್ನು ಕರೆದು, ನಾಳೆ ಕೃಷ್ಣದ್ವೈಪಾಯನ ಸ್ವಾಮಿಗಳ ಪುಣ್ಯತಿಥಿಯನ್ನಾಚರಿಸಬೇಕೆಂದು ಅಪ್ಪಣೆಮಾಡಿದರು.

ಇದಾಗುತ್ತಲೂ ಸ್ವಾಮಿಗಳು ಆದವಾನಿಗೆ ಬಂದರು. ಪೂರ್ವ ಪರಿಚಿತ ದಿವಾನ ವೆಂಕಣ್ಣನು ಮಹಾ ವೈಭವದಿಂದ ಸ್ವಾಮಿಗಳನ್ನು ಕರೆತಂದು, ತನ್ನ ಮನೆಯಲ್ಲಿಳಿಸಿಕೊಂಡು ಸತ್ಕರಿಸಿದನು. ಪೂರ್ವ ಸ್ಮರಣೆ ಹೇಗಿರುವುದೋ ನೋಡೋಣವೆಂದು—

ಸ್ವಾಮಿಗಳು:—ಏನು ದಿವಾನರೇ ನಿಮಗೆ ಈ ಪದವಿ ಹೇಗೆಬಂತು ?

ವೆಂಕಣ್ಣ:—ಎಲ್ಲಾ ಚರಣಾನುಗ್ರಹದಿಂದ.

ಸ್ವಾಮಿಗಳು:—ನಿಮ್ಮ ಯೋಗ್ಯತೆ ದೊಡ್ಡದು.

ವೆಂಕಣ್ಣ:—ನನ್ನದು ದನಗಾವ ಯೋಗ್ಯತೆ. ದೊಡ್ಡತನವೇನಿದ್ದರೂ ಚರಣಾನುಗ್ರಹದಿಂದ ಬಂದದ್ದು.

ಅಸದುಲ್ಲಾಖಾನನೂ ಗುರುಗಳ ದರ್ಶನಮಾಡಿ ಕೃತಾರ್ಥನಾಗಲೆಂಬ ಆಸೆ ವೆಂಕಣ್ಣನಿಗೆ ಹುಟ್ಟಿತು. ಒಡನೆಯೇ ನವಾಬನ ಬಳಿಗೆ ಬಂದು—"ಹುಜೂರ್, ತ್ರಿಕಾಲಜ್ಞರಾದ ಮಹಾತ್ಮರು ತಮ್ಮ ಸೇವಕನ ಮನೆಗೆ ದೈವ ಯೋಗದಿಂದ ಬಂದಿಳಿದಿರುವರು. ಅವರ ಮಹಿಮೆಯು ಅಪಾರವಾದದ್ದು. ಅವರನುಗ್ರಹದಿಂದಲೇ ನನಗೀಪದವಿ ಸಿಕ್ಕಿತು. ತಾವೂ ಅವರ ದರ್ಶನ ಮಾಡಬೇಕು" ಎಂದು ವಿಜ್ಞಾಪಿಸಿದನು.

ಆ ಒಣಗರ್ವದ ಖಾನನು—"ಆಗಲಿ ನಾನೇ ಬಂದು ನಿಮ್ಮ ಗುರುಗಳ ಪರೀಕ್ಷೆ ಮಾಡುತ್ತೇನೆ. ಗುರುಗಳು ಸಿದ್ಧವಾಗಿರಲಿ'' ಎಂದು ಹೇಳಿ ಕಳುಹಿಸಿದನು.

ನವಾಬನ ತಿರಸ್ಕಾರದ ಮಾತು ವೆಂಕಣ್ಣನಿಗೆ ಹಿತವಾಗಲಿಲ್ಲ. ಅತೃಪ್ತನಾಗಿ ಮನೆಗೆಬಂದು, ಏಕೆ ಆ ನರರಾಕ್ಷಸನನ್ನು ಕರೆದೆನೋ ಎಂದು ಚಿಂತಿಸಿದನು. ಬರುವೆನೆಂದಮೇಲೆ ತಕ್ಕ ಸಿದ್ಧತೆಯನ್ನು ಮಾಡದಿದ್ದರೆ ತೀರದು. ಮರ್ಯಾದೆಗೆ ತಕ್ಕಂತೆ ಮನೆಯನ್ನು ಶೃಂಗರಿಸಿ, ತಕ್ಕ ನಜರನ್ನೂ ಸಿದ್ಧಪಡಿಸಿ, ಸ್ವಾಮಿಗಳಲ್ಲಿ ನಡೆದ ಸಂಗತಿಯನ್ನು ತಿಳಿಸಿದನು.

ನವಾಬನು ಸಾಯಂಕಾಲವಾಗುತ್ತಲೇ ಬೇಕೆಂದು ಒಂದು ತಟ್ಟೆಯ ತುಂಬ ಕುರಿಯ ಮಾಂಸವನ್ನು ತುಂಬಿಸಿ, ಕಿನ್‌ಖಾಬಿನ ಮುಸುಕುಹಾಕಿಸಿ ತೆಗೆಸಿಕೊಂಡು ಬಂದನು. ವೆಂಕಣ್ಣನು ತಟ್ಟೆಯನ್ನು ನೋಡಿ, ಗುರುಗಳ ಗೌರವಕ್ಕೆ ತಕ್ಕ ಕಾಣಿಕೆಯನ್ನು ತಂದಿರಬಹುದೆಂದು ಸಂತೋಷಪಟ್ಟು, ಸ್ವಾಮಿಗಳು ಕೂಡುವ ಸಿಂಹಾಸನದೆದುರಿಗೆ ಮಣೆಯಮೇಲಿಡಿಸಿದನು. ಖಾನನ ಕೃತ್ರಿಮವನ್ನರಿತ ಸ್ವಾಮಿಗಳು, ಮುಗುಳುನಗೆಯಿಂದ ಒಡ್ಡೋಲಗಕ್ಕೆ ಬಂದು ಕುಳಿತರು. ಎಲ್ಲರೂ ಎದ್ದು ಪ್ರಣಾಮಮಾಡಲು, ನವಾಬನೂ ಬಿಂಕದಿಂದ ತನ್ನ ಪದ್ಧತಿಯಂತೆ ಬಗ್ಗಿ 'ಸಲಾಂ' ಮಾಡಿದನು. ಸ್ವಾಮಿಗಳು ನವಾಬನೊಡನೆ ಕುಶಲ ಪ್ರಶ್ನೆಮಾಡಿದರು.

ಖಾನನು:—(ತಟ್ಟೆಯನ್ನು ತೋರಿಸಿ) ನನ್ನ ಬಡಸೇವೆಯನ್ನು ಸ್ವೀಕರಿಸ ಬೇಕು ಎಂದನು.

ಸ್ವಾಮಿಗಳು—ಆಹ ! ಆಗಬಹುದು, ನೀವಿರುವದೇ ನಮಗಿಂಥಾ ಸೇವೆ ಮಾಡುವುದಕ್ಕೆ (ಎಂದು ಪರಿಚಾರಕನನ್ನು ನೋಡಿದರು.)

ಪರಿಚಾರಕ:—ಮಹಾಸ್ವಾಮಿ, ಎಂದು ತಲೆಬಾಗಿಸಿ ನಿಂತನು.

ಸ್ವಾಮಿಗಳು:—ನವಾಬರು ನೈವೇದ್ಯಕ್ಕೆ ತಂದಿದ್ದಾರೆ. ನೀರು ತೆಗೆದು ಕೊಂಡುಬಾ ಎಂದರು.

ಪರಿಚಾರಕನು:—ಅಪ್ಪಣೆಯೆಂದು ಗಿಂಡಿಯನ್ನು ಸ್ವಾಮಿಗಳ ಕೈಗೆ ಬಗ್ಗಿಸಿದನು.

ಸ್ವಾಮಿಗಳು:—ಉದಕವನ್ನು ಪ್ರೋಕ್ಷಿಸಿ ನಿಮ್ಮ ಸೇವೆ ದೇವರಿಗೆ ಮುಟ್ಟಿತೆಂದು ದೀವಿಟಿಗನನ್ನು ನೋಡಿದರು ದೀವಟಿಗನು ಪರಾಕೆಂದು ಮುಂದೆ ಬಂದು ನಿಂತನು.

ಸ್ವಾಮಿಗಳು:—ತಟ್ಟೆಯ ಮುಸುಗು ತೆಗೆಯೆಂದರು. ದೀವಟಿಗನು ಮುಸುಕು ತೆಗೆದನು. ಎಲ್ಲವೂ ಫಲಪುಷ್ಪಗಳಾಗಿದ್ದುವು. ನವಾಬನಿಗೆ ಆಶ್ಚರ್ಯವಾಯಿತು. ತನ್ನ ಮೋಸ ಸ್ವಾಮಿಗಳಿಗೆ ತಿಳಿಯಿತೆಂದು ಭಯ ಪಟ್ಟನು. ಎದ್ದು 'ಸಲಾಂ'ಮಾಡಿ, ಅಹಂಕಾರದಿಂದ ಪರೀಕ್ಷಿಸಿದ ಅಪರಾಧ ವನ್ನು ಕ್ಷಮಿಸಬೇಕೆಂದು ಬೇಡಿಕೊಂಡನು.

ಸ್ವಾಮಿಗಳು ಅತೃಪ್ತಿಯನ್ನು ತೋರಿಸದೆ ನಗುತ್ತಲೇ,—"ನವಾಬರೇ ನಿಮ್ಮಂಥಾ ರಾಜರಿದ್ದರೇ ನಮ್ಮಂಥಾ ಯತಿಗಳ ತೇಜಸ್ಸು ಗೊತ್ತಾದೀತು. ನಿಮ್ಮ ತಪ್ಪೇನೂ ಇಲ್ಲ ನಿಮ್ಮ ಸ್ವಭಾವಕ್ಕೆ ತಕ್ಕಂತೆ ನೀವು ಮಾಡಿದೀರಿ. ನಮ್ಮ ಸ್ವಭಾವಕ್ಕೆ ತಕ್ಕಂತೆ ನಾವು ಮಾಡಿದೆವು. ರಾತ್ರಿ ಭೋಜನಕ್ಕೆ ವೇಳೆ ಯಾಯಿತು. ತಾವು ಬಂದದ್ದು ಬಹು ಸಂತೋಷ" ಎಂದು ಫಲಪುಷ್ಪಗ ಳನ್ನೂ ರಾಜಯೋಗ್ಯವಾದ ಶಹಲುಜೋಡಿಯನ್ನೂ ಮರ್ಯಾದೆಮಾಡಿ ಕಳುಹಿಸಿದರು.

ಅಸದುಲ್ಲನು ಸ್ವಾಮಿಗಳ ಕ್ಷಮಾಗುಣಕ್ಕೂ ತಪಃಪ್ರಭಾವಕ್ಕೂ ಪರಾ ಜಿತನಾದನು. ದಿವಾನ ವೆಂಕಣ್ಣನನ್ನೂ ಜೊತೆಯಲ್ಲಿ ಕರೆದುಕೊಂಡು ಅರಮನೆಗೆ ಹೋದನು. ಆವನಿಗೆ ಸ್ವಾಮಿಗಳಿಗೇನು ಮರ್ಯಾದೆಮಾಡಿ ತನ್ನ

ಶಾಪವನ್ನು ಕಳೆದುಕೊಳ್ಳಬೇಕೆಂಬುದರ ಯೋಚನೆ ಬಲವಾಯಿತು. ಸ್ವಾಮಿಗಳೇನು ಕೇಳಿದರೂ ಕೊಡುತ್ತೇನೆ. ಆದಮಾನಿಯನ್ನಾದರೂ ಕೊಟ್ಟು ಬಿಡುತ್ತೇನೆ. ಅವರು ಅನುಗ್ರಹಿಸಿದರೆ ಸಾಕು. ನನ್ನ ಪರವಾಗಿ ನೀನು ಮತ್ತೆ ಕ್ಷಮೆ ಬೇಡು ಅವರ ಅಪ್ಪಣೆಯನ್ನು ತಿಳಿದು ಬಾ ಎಂದು ವೆಂಕಣ್ಣ ನನ್ನು ಕಳುಹಿಸಿದನು.

ನವಾಬನಿಗೆ ಅನ್ನೋದಕಗಳು ಬೇಡವಾದವು. ಜನ್ಮ ಪ್ರಭೃತಿ ತಾನು ಮಾಡಿದ ಕ್ರೂರಕೃತ್ಯಗಳೊಂದೊಂದೂ ಅವನಿಗೆ ಬೇಸರವನ್ನುಂಟುಮಾಡಿದವು. ಸ್ವಾಮಿಗಳನ್ನು ನೋಡಿದಾಗಿನಿಂದ ಅವರ ಭಾವವೇ ಅವನ ಮನಸ್ಸಿನಲ್ಲಿ ನಿಂತಿತು.

ವೆಂಕಣ್ಣನು ನವಾಬನ ವಿಜ್ಞಾಪನೆಯನ್ನು ಸ್ವಾಮಿಗಳಿಗೆ ತಿಳಿಸಿದನು. ಸ್ವಾಮಿಗಳು ತಮಗೇನೂ ಬೇಡವೆಂದೂ, ಮಂಚಾಲೆಯ ಕಾಡುಪ್ರದೇಶವನ್ನು ಕೊಟ್ಟರೆ ಸಾಕೆಂದೂ ಹೇಳಿದರು. ವೆಂಕಣ್ಣನಿಗೆ ಮಂಚಾಲೆಯನ್ನು ಕೇಳುವು ದಕ್ಕೆ ಮನಸ್ಸೊಡಂಬಡಲಿಲ್ಲ. ಆ ಕಾಡು ಪ್ರದೇಶವನ್ನು ಬಿಟ್ಟು ಸರಿಯಾದ ಜಹಗೀರು ಕೇಳುವುದೊಳ್ಳೇದೆಂದು ಮತ್ತೆ ವಿಜ್ಞಾಪಿಸಿದನು. ಸ್ವಾಮಿಗಳು ಮಂಚಾಲೆಯೊಂದೇ ಸಾಕೆಂದರು. ಕಾರಣವೇನೆನಲು—"ಪೂರ್ವದಲ್ಲಿ ಪ್ರಹ್ಲಾದ ನಾಗಿದ್ದವನೇ ನಾನು. ಅಲ್ಲಿರುವ ಮಂಚಾಲಮ್ಮ ನಮ್ಮ ಕುಲದೇವತೆ. ಅದೇ ಸ್ಥಳದಲ್ಲಿ ಅನೇಕ ಯಜ್ಞಗಳನ್ನು ಮಾಡಿದ್ದೆನು. ನನ್ನ ಕಾಲವು ಸಮೀಪಿಸಿತು. ಯಜ್ಞಮಾಡಿದ ಬಳಿಯಲ್ಲೇ ಬೃಂದಾವನ ಪ್ರವೇಶ ಮಾಡ ಬೇಕೆಂದಿರುವೆನು. ಇದೇ ನನ್ನ ಆಶಯ"ವೆಂದು ವೆಂಕಣ್ಣನಿಗೆ ರಹಸ್ಯವಾಗಿ ತಿಳಿಸಿದರು. ಮರುಮಾತಿಗೆ ದಾರಿಯಿಲ್ಲವಾಯಿತು. ವೆಂಕಣ್ಣನು ನವಾಬ ನಿಗೆ ಸ್ವಾಮಿಗಳ ಆಶಯವನ್ನು ತಿಳಿಸಿದನು. ಅವನು ತನ್ನ ಪೂರ್ಣ ಸೇವೆ ಯಾಗಲಿಲ್ಲವೆಂದು ವ್ಯಸನಪಟ್ಟನು.

ಮಂಚಾಲೆಯು ಒಬ್ಬ ಫಕೀರನ ಜಹಗೀರಿಗೆ ಸೇರಿತ್ತು. ರಾಜಾಜ್ಞೆಯಾದ ಮೇಲೆ ಕೇಳುವುದೇನು ? ಒಡನೆಯೇ ಗ್ರಾಮವನ್ನು ಬಿಡಿಸಿ ತಕ್ಕ ಸಲಕರಣೆ ಗಳನ್ನೊದಗಿಸಿಕೊಡುವಂತೆ ನವಾಬನೇ ವೆಂಕಣ್ಣನನ್ನು ಸ್ವಾಮಿಗಳ ಜೊತೆ ಯಲ್ಲಿ ಕಳುಹಿಸಿದನು.

---

# ೧೦. ಬೃಂದಾವನ ಪ್ರವೇಶ.

ಸ್ವಾಮಿಗಳು ಮಂತ್ರಾಲಯವನ್ನು ಸೇರಿದೊಡನೆಯೇ ಕುಲದೇವತೆಯ* ದರ್ಶನಕ್ಕೆ ಬಂದರು. [ದೇವಿಯು ಚತುರ್ಯುಗ ಮೂರ್ತಿಯಾದುದರಿಂದ ಯಾವ ಯಾವ ಕಾಲದಲ್ಲಿ ಏನೇನು ಬದಲಾವಣೆಗಳಾಗಿ ಈಗ ಸಣ್ಣದೊಂದು ಗೂಡಿನಂಥಾ ಗುಡಿಯಲ್ಲಿರುವಳೋ ತಿಳಿದುಬರುವುದಿಲ್ಲ. ಸ್ವಾಮಿಗಳೇ ತಮ್ಮ ಪ್ರಹ್ಲಾದಾವತಾರದ ಕುಲದೇವತೆಯೆಂದು ಹೇಳಿರುವುದರಿಂದಲೂ ಅಲ್ಲೇ ಅನೇಕ ಯಜ್ಞಗಳು ಆ ಕಾಲದಲ್ಲಿ ನಡೆದ ಕಾರಣದಿಂದಲೂ, ದೇವಿಯ ಹೆಸರು ಸಹ 'ಮಂತ್ರಾಲಯಾ' ಎಂದಿರುವುದರಿಂದಲೂ, ಯಜ್ಞಕುಂಡವನ್ನೇ ತಮ್ಮ ಬೃಂದಾವನ ಸ್ಥಳವಾಗಿ ಸ್ವಾಮಿಗಳು ಆರಿಸಿರುವುದರಿಂದಲೂ, ಆ ಸ್ಥಳವೂ ಆ ದೇವತೆಯೂ ಅತ್ಯಂತ ಮಹತ್ವವುಳ್ಳವುಗಳೆನ್ನಲು ಯಾವ ಸಂಶಯವೂ ಇಲ್ಲ. ದೇವಿಯ ಪ್ರತಿಷ್ಠೆಯಾದರೂ ಯಾವ ಕಾಲದಲ್ಲಿ ಯಾವ ಬೀಜಾಕ್ಷರಗಳಿಂದ ಕೂಡಿದ ಯಂತ್ರಸ್ಥಾಪನೆಯಾಗಿತ್ತೋ, ಈಚೆಗೆ ಮತ್ತೇನು ಕಾರಣದಿಂದ ಈಗಿರುವ ವಿಗ್ರಹವನ್ನೇ ದೇವಿಯೆಂದು ತಿಳಿಯುವ ರೂಢಿ ಬಂದಿದೆಯೋ ಅದು ಗೊತ್ತಾಗುವುದಿಲ್ಲ. ಸ್ವಾಮಿಗಳೇನೋ ದೇವಿಯನ್ನು ಹೀಗೆ ಸ್ತೋತ್ರಮಾಡಿದರು. "ಅಂಬಾ, ಮಂತ್ರಾಲಯೆ, ಶ್ರೀಹರಿಯು ಸಕಲ ಜಗತ್ತನ್ನೂ ತನ್ನುದರಲ್ಲಿಟ್ಟುಕೊಂಡು ಪ್ರಲಯೋದಕದಲ್ಲಿ ಶಯನಮಾಡಿದಾಗ ಶ್ರೀ ರೂಪದಿಂದ ಉದಕಗಳಾಗಿ ಭೂರೂಪದಿಂದ ವಟಪತ್ರಳಾಗಿ, ದುರ್ಗಾರೂಪ ದಿಂದ ಅಂಧಕಾರಳಾಗಿ ಸೇವಿಸಿದವಳೇ ; ಸೃಷ್ಟಿಕಾಲವರಿತು ಜೀವರನ್ನುದ್ಧರಿ ಸಲು ಅಂಭೃಣಿಯಾಗಿ ಶೃತಿಗೀತೆಯಿಂದ ಸ್ತೋತ್ರಮಾಡಿ ನಾರಾಯಣನನ್ನು ಎಚ್ಚರಿಸಿದವಳೇ ; ಅನಾಲೋಚನೆಯಿಂದ ವೇದಗಳೂ ಕಾಣದ ಪರಮಾತ್ಮನ ಅನಂತ ಕಲ್ಯಾಣಗುಣಗಳನ್ನರಿತು ಪರವಶಳಾಗಿ ಉಪಾಸಿಸುವಳೇ ; ಸತ್ವ ರಜಸ್ತಮೋಗುಣ ನಿಯಾಮಕಳೇ : ನಿಖಿಲ ಭುವನದೊಡೆಯನ ರಾಣಿಯಾಗಿ ಲೀಲಾಮಾತ್ರದಿಂದ ಜಗತ್ಸೃಷ್ಟಿ ಸ್ಥಿತಿ, ಲಯ, ಜ್ಞಾನ, ಅಜ್ಞಾನ, ಬಂಧ,

---

* ದೇವಿಯ ಸ್ಥಳವು ಸ್ವಾಮಿಗಳ ಮಠದ ಪಕ್ಕದಲ್ಲಿದೆ. ಸ್ವಾಮಿಗಳು ದುರ್ಗಾ ದೇವಿಯೆಂದು ಪ್ರಾರ್ಥಿಸಿದ ದೇವತೆಯು ಈಗ ಸಾಮಾನ್ಯ ಗ್ರಾಮದೇವತೆಯಂತಾಗಿದೆ.

ಮೋಕ್ಷಕಾರ್ಯಗಳನ್ನು ನಿರ್ವಹಿಸುವ ಬಲವಂತಳೇ ; ಶ್ರೀಯೇ, ಹ್ರೀಯೇ, ಜಗದಂಬೆಯೇ, ಸರ್ವಮಂಗಳೆಯೇ ; ಮಾಯಾ, ಜಯಾ, ಕೃತಿ, ಶಾಂತಿ, ಲಕ್ಷ್ಮಿ ರೂಪಗಳಿಂದ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ, ನಾರಾಯಣರನ್ನಾರಾಧಿಸಿದವಳೇ ; ಧೀಮತಿಯೆ, ಯಶಸ್ವಿನಿಯೇ, ಕ್ಷೀರಸಾಗರ ಕನ್ನಿಕೆಯೇ, ಕಮಲವಾಸಿನಿಯೇ, ದುಷ್ಟ ದಾನವರನ್ನು ಸದೆಬಡಿಯಲು ಕಾಳಿಯೆನಿಸಿದವಳೇ, ಚಂಡಿಯೇ, ದುರ್ಗಿಯೇ, ನನ್ನ ಕುಲ ದೇವತೆಯೇ ; ನಿನ್ನ ಸನ್ನಿಧಿಯಲ್ಲಿರಬೇಕೆಂದು ಬಂದಿರುವೆನು. ನಿನ್ನನುಗ್ರಹದಿಂದ ಲಭಿಸಿದ ಪುಣ್ಯರಾಶಿಯನ್ನು ಏಳುನೂರು ವರುಷ ಪರ್ಯಂತರ ಬೃಂದಾವನದಲ್ಲಿದ್ದು ದೀನರಿಗೂ ದರಿದ್ರರಿಗೂ ರೋಗಪೀಡಿತರಿಗೂ ಧಾರೆಯೆರೆದು ಅವರನ್ನುದ್ಧರಿಸಬೇಕೆಂದಿರುವೆನು ; ಸೌಮ್ಯರೂಪದಿಂದ ದರ್ಶನವಿತ್ತು ಸಲಹು ; ಅಭಯವೀ" ಯೆಂದು ಪ್ರಣಾಮಮಾಡಿ ಪರವಶರಾಗಿ ನಿಂತರು.

ದೇವಿಯು ಸುಂದರವಾದ ದುರ್ಗಾರೂಪದಿಂದ ಪ್ರತ್ಯಕ್ಷಳಾಗಿ ಭಕ್ತನನ್ನು ಸಂತವಿಸಿ, "ಯತಿರಾಜ ! ಸಕಲ ಜಗನ್ನಿಯಾಮಕನೇ ನಿನ್ನಡಿಯಳಾಗಿ ಸ್ತಂಭದಿಂದವತರಿಸಿ ದುಷ್ಟ ಹಿರಣ್ಯಕನನ್ನು ಸದೆಬಡಿಯಲಿಲ್ಲವೇ ? ಅವನೇ ನಿನಗೆ ಬೆಂಬಲವಾಗಿ ನಿಂತಿಲ್ಲವೇ ? ನಿನ್ನಂಥ ಭಕ್ತನಿಗೆ ಕೊಡದಿರುವ ವರವಾದರೂ ಯಾವುದು ? ಭಗವಂತನು ಮತ್ತಾವ ಅವತಾರದಲ್ಲಿ ನಿನ್ನಲ್ಲಿ ತೋರಿಸಿದಷ್ಟು ದಯೆಯನ್ನು ತೋರಿಸಿರುವನು ? ನಿನ್ನಿಷ್ಟದಂತೆ ಎಲ್ಲವೂ ಸಿದ್ಧಿಸುವುದು. ಬೃಂದಾವನದಲ್ಲಿ ನೀನಿದ್ದು ಭಕ್ತಜನರ ಕೋರಿಕೆಯನ್ನು ಸಲಿಸಿ ಕೀರ್ತಿವಂತನಾಗು. ಆದರೆ ಈ ನನ್ನ ಕ್ಷೇತ್ರದ ಹೆಸರು ಮರೆಯದಂತೆ ನನ್ನ ಪ್ರಿಯಲಾಂಛನವಾದ ಮೇಷಮಸ್ತಕವನ್ನು ಮಹಾ ದ್ವಾರದಲ್ಲಿ ಪ್ರತಿಷ್ಠಿಸು ಆ ಲಾಂಛನವು ಸಕಲ ಅಸುರೀ ಶಕ್ತಿಯನ್ನೂ ಗೆಲ್ಲುವುದು" ಎಂದು ವರವಿತ್ತು ಅದೃಶ್ಯಳಾದಳು.

ವೆಂಕಣ್ಣನು ರಾಜಾಜ್ಞೆಯಂತೆ ಸಂಸ್ಥಾನವಾಸಕ್ಕೆ ತಕ್ಕ ಮಠವನ್ನು ಕಟ್ಟಿಸಿದನು. ಅಸದುಲ್ಲನು ಅಚ್ಚಿನ್ನ ಭಕ್ತನಾಗಿ ಆಗಾಗ ಬಂದು ಗುರುದರ್ಶನ ಮಾಡುತ್ತಿದ್ದನು. ಸತ್ಸಹವಾಸ ಬಲದಿಂದ ಅವನ ದುರಾಹಾರ ದುಷ್ಪ್ರವೃತ್ತಿ

ಗಳು ದೂರವಾದವು. ಸಂಸ್ಥಾನಕ್ಕೆ ಏನು ಬೇಕಾದರೂ ತನ್ನ ಖರ್ಚಿನಿಂದ ನಡೆಸುವಂತೆ ದಿವಾನರಿಗೆ ಕಟ್ಟಪ್ಪಣೆಮಾಡಿದನು.

ಸ್ವಾಮಿಗಳ ಆಜ್ಞೆಯಂತೆ ವೆಂಕಣ್ಣನು ಮುಂದಿನ ಗುರುದೇವತಾ ರಾಧನೆಗಳನ್ನು ತಕ್ಕಂತೆ ನಡೆಸುವ ವ್ಯವಸ್ಥೆಮಾಡಿದನು. ವಿವಿಧ ವಿದ್ಯಾ ವಿಶಾರದರಾದ ಅರವತ್ತು ಶ್ರೋತ್ರೀಯ ಕುಟುಂಬಗಳನ್ನು ಮಂತ್ರಾಲಯಕ್ಕೆ ಕರೆಸಿದನು. ಅವರಿಗೆ ಅಗ್ರಹಾರವನ್ನು ಕಟ್ಟಿಸಿಕೊಟ್ಟು ವೃತ್ತಿಗಳನ್ನೇರ್ಪಡಿಸಿ ದನು. ಬೃಂದಾವನದಲ್ಲಿಡಲು ಏಳುನೂರು ಸಾಲಿಗ್ರಾಮಗಳನ್ನು ಶೇಖರಿಸಿದನು.

ಸ್ವಾಮಿಗಳ ಬೃಂದಾವನ ಪ್ರವೇಶಕ್ಕೆ ಬೇಕಾದ ಸಿದ್ಧತೆಗಳಾದವು. ಶಾಲಿವಾಹನ ಶಕ ೧೫೯೩ನೇ ಶ್ರಾವಣ ಬಹುಳ ದ್ವಿತೀಯಾ ಗುರುವಾರವೇ ಶುಭದಿನವಾಯಿತು. ಮುಂದಿನ ಮಠ ರಾಜ್ಯಭಾರಕ್ಕೆ ಸ್ವಾಮಿಗಳು ಯೋಗೀಂದ್ರ ರನ್ನು ನೇಮಿಸಿದರು. ಸ್ವಾಮಿಗಳು ಸಶರೀರದಿಂದ ಬೃಂದಾವನ ಪ್ರವೇಶ ಮಾಡುವರೆಂಬುದು ಎಲ್ಲರಿಗೂ ವ್ಯಸನವನ್ನುಂಟುಮಾಡಿತು. ದಿವಾನ ವೆಂಕ ಣ್ಣನ ದುಃಖವು ಹೇಳತೀರದಾಯಿತು. ಗುರುಗಳೆದುರಿಗೆ ಬಂದು ನಿಲ್ಲುವುದು, ಕಂಬನಿದುಂಬಿ ಕಣ್ಣುಮರೆಯಾಗುವುದು ಇಷ್ಟರಲ್ಲೇ ಆಗಿಹೋಯಿತು. ಸ್ವಾಮಿಗಳು ಬೃಂದಾವನಸ್ಥರಾದಮೇಲೆ ಜೀವಿಸಿರುವುದು ಹೇಗೆಂದು ಪರಿಪರಿ ಯಾಗಿ ಚಿಂತಿಸಿದನು. ಶಿಷ್ಯರೊಬ್ಬೊಬ್ಬರೂ ಜೀವಂತರಾಗಿರುವಾಗಲೇ ಬೃಂದಾವನವೇಕೆಂದು ಕೇಳಿದರು. ನತ್ತವರನ್ನು ಬದುಕಿಸುವ ಸ್ವಾಮಿಗಳಿ ಗೆಲ್ಲಿಯ ಬೃಂದಾವನವೆಂದು ಕೆಲವರೆಂದರು. ಜ್ಯೋತಿಷ್ಕರು ಹೇಳಿದಂತೆ ಏಳುನೂರು ವರ್ಷ ಆಯುರ್ಮಾನವಿರುವಾಗ, ಈಗಲೇ ನಮ್ಮನ್ನು ಪರದೇಶಿ ಮಾಡಿ ಮುಕ್ತರಾಗುವ ಪ್ರಸಂಗವೇಕೆಂದು ಆಕ್ಷೇಪಿಸಿದರು. ಒಟ್ಟುಗೂಡಿ ನಿಂತು, ನಮ್ಮ ಅಪರಾಧಗಳೇನಿದ್ದರೂ ಕ್ಷಮಿಸಿ ಬೃಂದಾವನದ ಯೋಚನೆ ಯನ್ನು ಬಿಡಿರೆಂದು ಬೇಡಿಕೊಂಡರು.

ಸ್ವಾಮಿಗಳು ಎಲ್ಲರನ್ನೂ ಸಮುಖದಲ್ಲಿ ಕೂಡಿಸಿಕೊಂಡು,—ಕೇಳಿ, ಬೃಂದಾವನ ಪ್ರವೇಶದಿಂದ ನಮಗೆ ಬಾಧೆಯಾದೀತೆಂದು ತಿಳಿಯಬೇಡಿ. ಏಳು ನೂರು ವರ್ಷಗಳವರೆಗೂ ದೇಹಹಾನಿಯಿಲ್ಲ; ದೇಹಬಿಡುವುದು ನಮ್ಮ ಇಚ್ಛೆ ಯಲ್ಲಿದೆ. ನಿಮ್ಮ ಭಕ್ತಿಗೆ ತಕ್ಕಂತೆ ಸ್ವಪ್ನದಲ್ಲಿ ದರ್ಶನಕೊಡುವೆವು. ಕ್ಷಮೆ ಬೇಡಲು ನಿಮ್ಮಲ್ಲಾವ ಅಪರಾಧವೂ ಇಲ್ಲ. ಭಕ್ತಿಯಿಂದ ಮಾಡಿದ ಸೇವೆಗೆ

ಮುಕ್ತಿಯೇ ಫಲ. ಮುಕ್ತಿಯೋಗ್ಯರೇ ಆಗದಿದ್ದರೆ, ಮೂಲರಾಮನು ಇಷ್ಟು ಕಾಲ ನಿಮ್ಮ ಸೇವೆಯನ್ನು ತೆಗೆದುಕೊಳ್ಳುತ್ತಿರಲಿಲ್ಲ. ಲೋಕಚಿಂತೆಯನ್ನೇ ಕಟ್ಟಿಕೊಂಡು ಏಳುನೂರುವರ್ಷ ಕೂಡುವ ನಮಗೆ, ನಿಮ್ಮ ಕಲ್ಯಾಣಚಿಂತನೆ ಯಿಲ್ಲವೇ ? ನಮ್ಮನ್ನು ಸೇವಿಸಿದಂತೆ ಯೋಗೀಂದ್ರರನ್ನೂ ಸೇವಿಸಿ ಕೃತಾರ್ಥರಾಗಿರಿ. ವ್ಯಸನವನ್ನು ಬಿಡಿ ಎಂದು ಸಮಾಧಾನ ಹೇಳಿದರು.

ಸ್ವಾಮಿಗಳು ಕ್ಷೇತ್ರರಕ್ಷಣೆಗೆ ಅಷ್ಟದಿಕ್ಕುಗಳಲ್ಲೂ ಸ್ಥಾಪಿಸಬೇಕಾದ ದೇವತಾ ಮೂರ್ತಿಗಳನ್ನು ಸ್ಥಾಪಿಸಿದರು. ಬೃಂದಾವನಕ್ಕೆ ಬೇಕಾದ ಶಿಲಾ ಕೆಲಸವು ಪ್ರಮಾಣವನ್ನನುಸರಿಸಿ ಸಿದ್ಧವಾಯಿತು. ಶ್ರಾವಣ ಬ॥ ೨ ಗುರುವಾರವೂ ಎಂದಿಗಿಂತತಿಶಯವಾಗಿ ಮೂಲರಾಮನನ್ನು ಪೂಜಿಸಿ, ಯೋಗೀಂದ್ರರಿಗೆ ಸಂಸ್ಥಾನವನ್ನೊಪ್ಪಿಸಿ, ದೇವಿಯಾಜ್ಞೆಯಂತೆ ಮೇಷ ಮಸ್ತಕ ಲಾಂಛನದಿಂದ ಚಿತ್ರಿತವಾಗಿದ್ದ ಮಹಾ ದ್ವಾರವನ್ನೂ ಪ್ರತಿಷ್ಠಿಸಿ ಮೊಹರಿ ಮೃದಂಗಾದಿ ವಾದ್ಯಗಳು ಘೋರ್ಗರೆಯುತ್ತಿರಲು, ಅರವತ್ತು ಮಂದಿ ಬ್ರಾಹ್ಮಣರು ವೇದಪಾರಾಯಣಮಾಡುತ್ತಿರಲು, ವೆಂಕಣ್ಣನೇ ಮೊದಲಾದ ವರು ಕೈವಾರಿಸುತ್ತಿರಲು, ಯೋಗೀಂದ್ರರೇ ಹಸ್ತಲಾಘವ ಕೊಡುತ್ತಿರಲು ಸಕಲ ರಾಜಮರ್ಯಾದೆಗಳಿಂದ, ಪ್ರತಿಷ್ಠಿತವಾಗಿದ್ದ ಶಿಲಾವರಣದಲ್ಲಿ ಜಪಸರ ವನ್ನು ಕೈಕೊಂಡು, ಪೂರ್ವಾಭಿಮುಖರಾಗಿ, ಭಕ್ತಾಗ್ರಣಿಯಾದ ಮಾರುತಿ ಯನ್ನು ನೋಡುತ್ತ, ಚಿನ್ಮುದ್ರಾದಿಗಳಾಗಿ ಶ್ವಾಸಗತಿಯನ್ನು ನಿರೋಧಿಸಿ, ಅರೆದೆರೆದ ಕಣ್ಣುಗಳುಳ್ಳವರಾಗಿ, **ಶ್ರೀರಾಘವೇಂದ್ರತೀರ್ಥ ಶ್ರೀಪಾದಂಗಳ ವರು ಸಮಾಧಿಸ್ಥರಾದರು.**

ಯೋಗೀಂದ್ರತೀರ್ಥ ಶ್ರೀಪಾದಂಗಳವರು ಪಟ್ಟಾಭಿಷಕ್ತರಾಗಿ ಪೀಠಾ ರೋಹಣಮಾಡಿದ ದಿನವೇ, ತಂಜಾವೂರು ಮಹಾರಾಜರಿಗೂ, ಆದವಾನಿಯ ನವಾಬರಿಗೂ ಲೌಕಿಕಪದ್ಧತಿಗನುಸಾರವಾಗಿ ತಕ್ಕ ರಾಜಮರ್ಯಾದೆಗಳ ಸಹಿತ ರಾಯಸಗಳನ್ನು ಕಳುಹಿಸಿದರು. ಆ ರಾಜರುಗಳು ಪದ್ಧತಿಗನುಸಾರವಾಗಿ ಗುರುಕಾಣಿಕೆಗಳನ್ನು ಕಳುಹಿಸಿದರು. "ಆದರ್ಶನಂ ತಸ್ಯಮೃತೇರ್ನಿದರ್ಶನಂ" ಎಂಬ ಆಚಾರ್ಯ ಸಂಪ್ರದಾಯದಂತೆ ರಾಘವೇಂದ್ರ ಸ್ವಾಮಿಗಳ ಮಹಾ ಸಮಾರಾಧನೆ ನಡೆಯಿತು. ಯೋಗೀಂದ್ರರು, ಯಾವ ಸಮಯದಲ್ಲಿ ಸಂಪುಟ ಶಿಲೆಯನ್ನಿಡಬೇಕೆಂದು ಗುರ್ವಾಜ್ಞೆಯಾಗಿತ್ತೋ ಅದರಂತೆ ನಡೆಸಿ

ಮೇಲೆ ಏಳುನೂರು ವರ್ಷ ಮಹಿಮೆ ನಡೆಯುವುದೆಂಬ ಸಂಕೇತಾನುಸಾರವಾಗಿ, ಸಮಾನ ಸಂಖ್ಯಾಕ ಸಾಲಿಗ್ರಾಮಗಳನ್ನಿಟ್ಟು ಶಿಲಾವರಣಮಾಡಿ ಮೇಲ್ಮುಖವನ್ನು ಮೃತ್ತಿಕೆಯಿಂದ ಮರೆಮಾಡಿದರು. ದಿವಾನ ವೆಂಕಣ್ಣನು ತನ್ನ ಸರಸ್ವವನ್ನೂ ಗುರುಸೇವೆಗೆ ವಿನಿಯೋಗಿಸಿ ಮಹಾ ಪುಣ್ಯಕ್ಕೆ ಪಾತ್ರನಾದನು. ಬೃಂದಾವನ ಪ್ರವೇಶವಾದ ದಿನದಿಂದ ನೂತನ ಮಹಿಮೆಗೇ ಪ್ರಾರಂಭವಾಯಿತು. ಮಧ್ವಮತದ ಇತಿಹಾಸದಲ್ಲಿ ಸಶರೀರರಾಗಿ ಬೃಂದಾವನ ಪ್ರವೇಶಮಾಡಿದ ಯತಿಗಳೆಂದರೆ ಮೊದಲನೆಯವರು ವಾದಿರಾಜರು, ಎರಡನೆಯವರೇ ರಾಘವೇಂದ್ರರು. ಇವರು ಕಾಮರೂಪಿಗಳಾದ ದೇವತೆಗಳೇ ಆಗಿರದಿದ್ದರೆ ಸದೇಹ ಸಮಾಧಿಯು ಸಾಧ್ಯವಾಗುತ್ತಿರಲಿಲ್ಲ. ಪರಕಾಯ ಪ್ರವೇಶವೂ ಇಂಥ ಮಹನೀಯರಿಗಲ್ಲದೆ ಸಾಮಾನ್ಯರಿಗೆ ಸಾಧ್ಯವಾಗುವಂಥಾದ್ದಲ್ಲ. ಯೋಗ ವಿದ್ಯೆಯೇ ಮರೆತುಹೋಗುತ್ತಿರುವ ಈ ಕಾಲದಲ್ಲಿ, ಯೋಗಸಾಮರ್ಥ್ಯದ ಕಲ್ಪನೆ ಸಹ ಜನರಿಗಾಗುವಂತಿಲ್ಲ. ಆಂಗ್ಲೇಯರು ಭರತಖಂಡವನ್ನು ಪ್ರವೇಶಿಸಿದಾಗ, ಸರ್ ವಿಲಿಯಂ ಟೆಂಪಲ್ ಎಂಬಾತನು—ಅಂಗುಷ್ಠ ಮಾತ್ರ ಭೂಸ್ಪರ್ಶದಿಂದ ಪಂಚಾಗ್ನಿ ಮಧ್ಯೆ ತಪಸ್ಸುಮಾಡುವವರನೇಕರು ಭರತಖಂಡದಲ್ಲಿದ್ದಾರೆ. ಐನೂರು ಆರುನೂರು ವರ್ಷಗಳಾಗಿದ್ದರೂ ಮರಣವನ್ನು ಜೈಸಿ ಕೇವಲ ಕುಮಾರಾವಸ್ಥೆಯಲ್ಲಿರುವ ಯೋಗಿಗಳು ಗಂಗಾತೀರದಲ್ಲಿ ಹೇರಳವಾಗಿದ್ದಾರೆ. ಭರತಖಂಡವು ಮರಣವನ್ನು ಜೈಸಿದ ಪುಣ್ಯಾತ್ಮರ ದೇಶ. ಈ ದೇಶಕ್ಕೆ ಮಿಷನರಿಗಳು ಬಂದು ಮಾಡುವದೇನಿದೆ?" ಎಂದು ಬರೆದಿಟ್ಟಿದ್ದಾನೆ. ಆಂಗ್ಲೆಯರು ಭರತಖಂಡದಲ್ಲಿ ಕಾಲಿಟ್ಟ ದಿನದಿಂದ ಈವರೆಗೆ ಆಗಿರುವ ವ್ಯತ್ಯಾಸವನ್ನು ನೋಡಿದರೆ, ಸ್ವರ್ಗ ನರಕಗಳಷ್ಟಾಗಿದೆ ಎಂದು ಹೇಳಬೇಕಾಗಿದೆ. ಇದೇ ವೇಗದಲ್ಲಿ ಇನ್ನೊಂದು ಶತಮಾನ ಕಳೆದರೆ, ಭರತಖಂಡದ ಕಥೆಯೂ ಐಗುಪ್ತ (Egypt)ದ ಮಮ್ಮಿಗಳ ಕಥೆಯಂತಾಗುವದೋ ಏನೋ ?

## ಶ್ರೀರಾಘವೇಂದ್ರಸ್ತೋತ್ರಂ

ಬಿಚ್ಚಾಲೆಯ (ಭಿಕ್ಷಾಲಯ ; ಮಂತ್ರಾಲಯಕ್ಕೆ ೬ ಮೈಲಿ ದೂರದಲ್ಲಿ ತುಂಗಭದ್ರೆಯ ತೀರದಲ್ಲಿದೆ.) ಅಪ್ಪಣಾಚಾರ್ಯರೆಂಬ ಸ್ವಾಮಿಗಳ ಶಿಷ್ಯರು,

ತಮ್ಮ ಗುರುಗಳು ಬೃಂದಾವನಸ್ಥರಾದಾಗ ಊರಲ್ಲಿರಲಿಲ್ಲ. ದೇಶಸಂಚಾರ ಹೋಗಿದ್ದವರು ಊರಿಗೆ ಬರುತ್ತಲೇ ಅವರಿಗೀಸಮಾಚಾರ ತಿಳಿಯಿತು. ಕಡೆಗಾಲದಲ್ಲಿ ತಮಗೆ ಮತ್ತೆ ಗುರುದರ್ಶನವಾಗಲಿಲ್ಲವೆಂದು ಆಚಾರ್ಯರ ಮನಸ್ಸಿಗೆ ಬಹಳ ಪರಿತಾಪವಾಯಿತು. ಒಡನೆಯೇ ತುಂಗಭದ್ರೆಯಲ್ಲಿ ಮಿಂದು, ಮಂತ್ರಾಲಯಕ್ಕೆ ನದೀ ಮಾರ್ಗದಿಂದಲೇ ಬಂದು ರಾಯರಿಗೆ ನಮಸ್ಕರಿಸಿ ಧಾರೆಯಾಗಿ ಹರಿದು ಬರುವ ವಾಕ್ಯಸರಣಿಯಿಂದ ಸ್ತೋತ್ರ ವನ್ನು ರಚಿಸಿದರು.

ಆ ಸ್ತೋತ್ರವಾದರೋ—

ಶ್ರೀಪೂರ್ಣಬೋಧಗುರುತೀರ್ಥಪಯೋಬ್ಧಿಪಾರಾ
ಕಾಮಾರಿಮಾಕ್ಷ ವಿಷಮಾಕ್ಷ ಶಿರಃಸ್ಪೃಶಂತೀ
ಪೂರ್ವೋತ್ತರಾಮಿತ ತರಂಗ ಚರತ್ಸುಹಂಸಾ
ದೇವಾಲಿಸೇವಿತ ಪರಾಂಘ್ರಿಪಯೋಜಲಗ್ನಾ ||೧||
ಜೀವೇಶಭೇದಗುಣಪೂರ್ತಿಜಗತ್ಸುಸತ್ವ
ನೀಚೋಚ್ಚಭಾವಮುಖನಕ್ರಗಣೈಸ್ಸಮೇತಾ ||
ದುರ್ವಾದ್ಯಜಾಪತಿಗಿಲೈರ್ಗುರುರಾಘವೇಂದ್ರ
ವಾಗ್ದೇವತಾಸರಿದಮುಂವಿಮಲೀಕರೋತು ||೨||
ಶ್ರೀರಾಘವೇಂದ್ರಸ್ಸಕಲಪ್ರದಾತಾ
ಸ್ವಪಾದಕಂಜದ್ವಯಭಕ್ತಿಮದ್ಭ್ಯಃ
ಅಘಾದ್ರಿಸಂಭೇದನದೃಷ್ಟಿವಜ್ರಃ
ಕ್ಷಮಾಸುರೇಂದ್ರೋಽವತುಮಾಂಸದಾಯಂ ||೩||
ಶ್ರೀರಾಘವೇಂದ್ರೋಹರಿಪಾದಕಂಜ
ನಿಷೇವಣಾಲ್ಲಬ್ಧಸಮಸ್ತ ಸಂಪತ್
ದೇವಸ್ವಭಾವೋದಿವಿಜದ್ರುಮೋಽಯ
ಮಿಷ್ಟಪ್ರದೋಮೇ ಸತತಂಸಭೂಯಾತ್ ||೪||
ಭವ್ಯಸ್ವರೂಪೋ ಭವದುಃಖತೂಲ
ಸಂಘಾಗ್ನಿಚರ್ಯಸ್ಸುಖ ಧೈರ್ಯಶಾಲೀ

ಸಮಸ್ತ ದುಷ್ಟಗ್ರಹನಿಗ್ರಹೇಶೋ
ದುರತ್ಯಯೋಪಪ್ಲವಸಿಂಧುಸೇತುಃ ||೫||
ನಿರಸ್ತದೋಷೋನಿರವದ್ಯವೇಷಃ
ಪ್ರತ್ಯರ್ಥಿಮೂಕತ್ವನಿದಾನಭಾಷಃ
ವಿದ್ವತ್ಪರಿಜ್ಞೇಯಮಹಾವಿಶೇಷಃ
ವಾಗ್ವೈಖರೀ ನಿರ್ಜಿತಭವ್ಯಶೇಷಃ ||೬||
ಸಂತಾನಸಂಪತ್ಪರಿಶುದ್ಧಭಕ್ತಿ
ವಿಜ್ಞಾನ ವಾಗ್ದೇಹಸುಪಾಟವಾದೀನ್
ದತ್ವಾಶರೀರೋತ್ಥ ಸಮಸ್ತದೋಷಾನ್
ಹತ್ವಾಸನೋವ್ಯಾದ್ಗುರು ರಾಘವೇಂದ್ರಃ ||೭||
ಯತ್ಪಾದೋದಕಸಂಚಯಸ್ಸುರನದೀ ಮುಖ್ಯಾಪಗಾಸಾದಿತಾ
ಸಂಖ್ಯಾನುತ್ತಮಪುಣ್ಯಸಂಘವಿಲಸತ್ಪ್ರಖ್ಯಾತಪುಣ್ಯಾವಹಃ
ದುಸ್ತಾಪತ್ರಯನಾಶನೋಭುವಿಮಹಾವಂಧ್ಯಾಸುಪುತ್ರಪ್ರದೋ
ವ್ಯಂಗಸ್ವಾಂಗಸಮೃದ್ಧಿದೋಗ್ರಹಮಹಾಪಾಪಾಪಹಸ್ತಂಶ್ರಯೇ ||೮||
ಯತ್ಪಾದಕಂಜರಜಸಾಪರಿಭೂಷಿತಾಂಗಾಃ
ಯತ್ಪಾದಪದ್ಮಮಧುಪಾಯಿತಮಾನಸಾಯೇ
ಯತ್ಪಾದಪದ್ಮಪರಿಕೀರ್ತನಜೀರ್ಣವಾಚಃ
ತದ್ದರ್ಶನಂದುರಿತಕಾನನದಾವಭೂತಂ ||೯||
ಸರ್ವತಂತ್ರಸ್ವತಂತ್ರೋಸೌಶ್ರೀಮಧ್ವಮತವರ್ಧನಃ
ವಿಜಯೀಂದ್ರಕರಾಬ್ಜೋತ್ಥಸುಧೀಂದ್ರವರಪುತ್ರಕಃ। ||೧೦||
ಶ್ರೀರಾಘವೇಂದ್ರೋಯತಿರಾಟ್ ಗುರುರ್ಮೇಸ್ಯಾದ್ಭಯಾಪಹಃ
ಜ್ಞಾನಭಕ್ತಿಸುಪುತ್ರಾಯುರ್ಯಶ ಶ್ರೀಪುಣ್ಯವರ್ಧನಃ ||೧೧||
ಪ್ರತಿವಾದಿಜಯಸ್ವಾಂತ ಭೇದಚಿಹ್ನಾಧರೋಗುರುಃ
ಸರ್ವವಿದ್ಯಾಪ್ರವೀಣೋನ್ಯೋ ರಾಘವೇಂದ್ರಾನ್ನವಿದ್ಯತೇ ||೧೨||
ಅಪರೋಕ್ಷೀಕೃತ ಶ್ರೀಶಃ ಸಮುಪೇಕ್ಷಿತಭಾವಜಃ
ಅಪೇಕ್ಷಿತಪ್ರದಾತಾನ್ಯೋ ರಾಘವೇಂದ್ರಾನ್ನವಿದ್ಯತೆ ||೧೩||

ದಯಾದಾಕ್ಷಿಣ್ಯವೈರಾಗ್ಯವಾಕ್ಪಾಟವಮುಖಾಂಕಿತಃ
ಶಾಪಾನುಗ್ರಹಶಕ್ತೋನ್ಯೋರಾಘವೇಂದ್ರಾನ್ನವಿದ್ಯತೆ ||೧೪||
ಅಜ್ಞಾನವಿಸ್ಮೃತಿಭ್ರಾಂತಿಸಂಶಯಾಪಸ್ಮೃತಿಕ್ಷಯಾಃ
ತಂದ್ರಾಕಂಪವಚಃಕೌಂಠ್ಯಮುಖಾಯೇ ಚೇಂದ್ರಿಯೋದ್ಭವಾಃ ||೧೫||
ದೋಷಾಸ್ತೇನಾಶಮಾಯಾಂತಿರಾಘವೇಂದ್ರಪ್ರಸಾದತಃ
ಶ್ರೀರಾಘವೇಂದ್ರಾಯನಮಃ ಇತ್ಯಷ್ಟಾಕ್ಷರಮಂತ್ರತಃ ||೧೬||
ಜಪಿತಾದ್ಭಾವಿತಾನ್ನಿತ್ಯ ಮಿಷ್ಟಾರ್ಥಾಸ್ಸ್ಯುರ್ನಸಂಶಯಃ
ಹಂತುನಃಕಾಯಜಾರ್ದೋಷಾನಾತ್ಮಾತ್ಮೀಯಸಮುದ್ಭವಾನ್ ||೧೭||
ಸರ್ವಾನಪಿಪುಮರ್ಥಾಂಶ್ಚದದಾತುಗುರುರಾತ್ಮವಿತ್
ಇತಿಕಾಲತ್ರಯೇ ನಿತ್ಯಂ ಪ್ರಾರ್ಥನಾಂ ಯಃಕರೋತಿಸಃ ||೧೮||
ಇಹಾಮುತ್ರಾಪ್ತಸರ್ವೇಷ್ಟೋ ಮೋದತೇನಾತ್ರಸಂಶಯಃ
ಅಗಮ್ಯಮಹಿಮಾಲೋಕೇ ರಾಘವೇಂದ್ರೋಮಹಾಯಶಾಃ ||೧೯||
ಶ್ರೀಮಧ್ವಮತದುಗ್ಧಾಬ್ಧಿ ಚಂದ್ರೋವತುಸದಾನಘಃ
ಸರ್ವಯಾತ್ರಾಫಲಾವಾಪ್ತ್ಯೈಯಥಾಶಕ್ತಿಪ್ರದಕ್ಷಿಣಂ ||೨೦||
ಕರೋಮಿತವಸಿದ್ಧ್ಯರ್ಥಂವೃಂದಾವನಗತಂಜಲಂ
ಶಿರಸಾಧಾರಯಾಮ್ಯದ್ಯಸರ್ವತೀರ್ಥಫಲಾಪ್ತಯೇ ||೨೧||
ಸರ್ವಾಭೀಷ್ಟಸ್ಯಸಿದ್ಧ್ಯರ್ಥಂ ನಮಸ್ಕಾರಂ ಕರೋಮ್ಯಹಂ
ತವಸಂಕೀರ್ತನಂವೇದಶಾಸ್ತ್ರಾರ್ಥಜ್ಞಾನಸಿದ್ಧಯೇ || ೨೨ ||
ಸಂಸಾರೇಽಕ್ಷಯಸಾಗರೇ ಪ್ರಕೃತಿತೋಽಗಾಧೇಸದಾದುಸ್ತರೆ
ಸರ್ವಾವದ್ಯಜಲಗ್ರಹೈರನುಪಮೈಃಕಾಮಾದಿಭಂಗಾಕುಲೇ
ನಾನಾವಿಭ್ರಮದುರ್ಭ್ರಮೇಮಿತಭಯಸ್ತೋಮಾದಿಫೇನೋತ್ಕಟೇ
ದುಃಖೋತ್ಕೃಷ್ಟವಿಷೇಸಮುದ್ಧರಗುರೋಮಾಂಮಗ್ನರೂಪಂಸದಾ ||೨೩||
ರಾಘವೇಂದ್ರಗುರುಸ್ತೋತ್ರಂ ಯಃಪಠೇದ್ಭಕ್ತಿಪೂರ್ವಕಂ
ತಸ್ಯಕುಷ್ಠಾದಿರೋಗಾಣಾಂ ನಿವೃತ್ತಿಸ್ತ್ವರಯಾಭವೇತ್ ||೨೪||
ಅಂಧೋಪಿ ದಿವ್ಯದೃಷ್ಟಿಸ್ಸ್ಯಾದೇಡ ಮೂಕೋಪಿವಾಕ್ಪತಿಃ
ಪೂರ್ಣಾಯುಃಪೂರ್ಣಸಂಪತ್ತಿಃಸ್ತೋತ್ರಸ್ಯಾಸ್ಯಜಪಾದ್ಭವೇತ್ ||೨೫||

ಯಃಪಿಬೇಜ್ಜಲಮೇತೇನಸ್ತೋತ್ರೇಣೈವಾಭಿಮಂತ್ರಿತಂ
ತಸ್ಯಕುಕ್ಷಿಗತಾದೋಷಾಸರ್ವೇನಶ್ಯಂತಿ ತತ್‌ಕ್ಷಣಾತ್ ||೨೬||

ಯದ್ವೃಂದಾವನಮಾಸಾದ್ಯಪಂಗುಃ ಖಂಜೋಽಪಿವಾಜನಃ
ಸ್ತೋತ್ರೇಣಾನೇನಯಃ ಕುರ್ಯಾತ್‌ಪ್ರದಕ್ಷಿಣನಮಸ್ಕೃತೀ ||೨೭||

ಸಜಂಘಾಲೋಭವೇದೇವ ಗುರುರಾಜಪ್ರಸಾದತಃ
ಸೋಮಸೂರ್ಯೋಪರಾಗೇ ಚ ಪುಷ್ಯಾರ್ಕಾದಿಸಮಾಗಮೇ ||೨೮||

ಯೋಽನುತ್ತಮ ಮಿದಂಸ್ತೋತ್ರ ಮಷ್ಟೋತ್ತರಶತಂಜಪೇತ್
ಭೂತಪ್ರೇತಪಿಶಾಚಾದಿ ಪೀಡಾತಸ್ಯನಜಾಯತೇ ||೨೯||

ಏತತ್‌ಸ್ತೋತ್ರಂ ಸಮುಚ್ಚಾರ್ಯ ಗುರುವೃಂದಾವನಾಂತಿಕೇ
ದೀಪಸಂಯೋಜನಾತ್ ಜ್ಞಾನಂಪುತ್ರಲಾಭೋಭವೇದ್ಧ್ರುವಂ ||೩೦||

ಪ್ರತಿವಾದಿಜಯೋದಿವ್ಯಜ್ಞಾನ ಭಕ್ತ್ಯಾದಿವರ್ಧನಂ
ಸರ್ವಾಭೀಷ್ಟಪ್ರವೃದ್ಧಿಸ್ಸ್ಯಾತ್‌ನಾತ್ರಕಾರ್ಯಾ ವಿಚಾರಣಾ ||೩೧||

ರಾಜಚೋರ ಮಹಾವ್ಯಾಘ್ರ ಸರ್ಪನಕ್ರಾದಿ ಪೀಡನಂ
ನಜಾಯತೇಽಸ್ಯ ಸ್ತೋತ್ರಸ್ಯ ಪ್ರಭಾವಾನ್ನಾತ್ರಸಂಶಯಃ ||೩೨||

ಯೋಭಕ್ತ್ಯಾ ಗುರುರಾಘವೇಂದ್ರ ಚರಣದ್ವಂದ್ವಂ ಸ್ಮರನ್ಯಃ ಪಠೇತ್
ಸ್ತೋತ್ರಂದಿವ್ಯಮಿದಂ ಸದಾನಹಿಭವೇತ್ ತಸ್ಯಾಽಸುಖಂಕಿಂಚನ
ಕಿಂತ್ವಿಷ್ಟಾರ್ಥಸಮೃದ್ಧಿರೇವ ಕಮಲಾನಾಥ ಪ್ರಸಾದೋದಯಾತ್
ಕೀರ್ತಿರ್ದಿಗ್ವಿಜಿತಾ ವಿಭೂತಿರತುಲಾ **"ಸಾಕ್ಷೀಹಯಾಸ್ಯೋಽತ್ರ ಹಿ"** ||೩೩||

ಇತಿ ಶ್ರೀರಾಘವೇಂದ್ರಾರ್ಯ ಗುರುರಾಜಪ್ರಸಾದತಃ
ಕೃತಂ ಸ್ತೋತ್ರಮಿದಂ ಪುಣ್ಯಂ ಶ್ರೀಮದ್ಭಿರಪ್ಪಣಾಭಿಧೈಃ ||೩೪||

ಪೂಜ್ಯಾಯ ರಾಘವೇಂದ್ರಾಯ ಸತ್ಯಧರ್ಮರತಾಯಚ
ಭಜತಾಂ ಕಲ್ಪವೃಕ್ಷಾಯ ನಮತಾಂ ಕಾಮಧೇನವೇ ||೩೫||

ಎಂಬಂತಿದೆ.



ಸ್ತೋತ್ರದ ಕಡೆಕಡೆಯ ಯೋಭಕ್ತ್ಯಾ ಎಂಬ ಶ್ಲೋಕವನ್ನು ವಿಭೂತಿ ರತುಲಾ ಎನ್ನುವವರಿಗೆ ಬರೆಯುತ್ತಾ, ನಾನು ಮಾಡಿದ ಸ್ತೋತ್ರವು ಗುರುಗಳಿಂದ ಅನುಗೃಹೀತವಾಗಿದೆಯೇ ಎಂದು ಬೃಂದಾವನದ ಕಡೆಗೆ ನೋಡಿದರು. ಬೃಂದಾವನಸ್ಥ ಯತಿಗಳು "ಸಾಕ್ಷೀಹಯಾಸ್ತ್ಯೋತ್ರಹಿ" ಎಂದು ಗಂಭೀರವಾಣಿಯಿಂದ ನುಡಿದು ಆಚಾರ್ಯರಿಗೆ ನಿಜರೂಪದಿಂದ ದರ್ಶನ ವನ್ನಿತ್ತರು. ಆಚಾರ್ಯರು ಜಗ್ಗನೆದ್ದು ನಮಸ್ಕರಿಸಿ "ಧನ್ಯೋಽಸ್ಮಿ, ಅನುಗೃಹೀತೋಽಸ್ಮಿ" ಎನ್ನುತ್ತಾ ಕಂಬನಿಗರೆಯುತ್ತಾ ಮನದಣಿಯುವ ತನಕ ಕಾಲು ತಾನಾಗಿ ನಡೆಯುವತನಕ ಪ್ರದಕ್ಷಿಣೆಮಾಡಿ ಸ್ಮೃತಿ ತಪ್ಪಿದವರಂತೆ ಪ್ರಣಾಮ ಮಾಡಿದರು ಮನಸ್ಸು ಸಮಸ್ಥಿತಿಗೆ ಬಂದಮೇಲೆ ದೇಹೇಂದ್ರಿಯಗಳ ಜ್ಞಾನವಾದಮೇಲೆ ವ್ಯಾಸಪೀಠದ ಮುಂದೆ ಕುಳಿತು ಶ್ರೀರಾಯರ ಮುಖಾರವಿಂದದಿಂದ ಹೊರಟು ಅಮೃತವಾಕ್ಯವಾದ "ಸಾಕ್ಷೀಹಯಾಸ್ತ್ಯೋತ್ರಹಿ" ಎಂಬ ಮಾತನ್ನು ಶ್ಲೋಕದ ಕಡೆಗೆ ಸೇರಿಸಿದರು. ಅದು ಶ್ಲೋಕಕ್ಕೆ ಬಲು ಹೊಂದಿಕೆಯಾಯಿತು. ಅನಂತರ ಗುರ್ವನುಗೃಹೀತವಾದ ಸ್ತೋತ್ರವಿದೆಂದು ಮುಂದಿನ ಎರಡು ಶ್ಲೋಕಗಳನ್ನು ರಚಿಸಿ ಸ್ತೋತ್ರವನ್ನು ಪೂರ್ಣಗೊಳಿಸಿದರು.

ರಾಘವೇಂದ್ರಸ್ವಾಮಿಗಳನ್ನು ಇನ್ನೂ ಅನೇಕ ಭಕ್ತರು ಅನೇಕ ವಿಧವಾಗಿ ಸ್ತೋತ್ರಮಾಡಿದ್ದರೂ, ಈ ಸ್ತೋತ್ರಕ್ಕಿರುವಷ್ಟು ಜನಾನುರಾಗವು ಮಿಕ್ಕ ಸ್ತೋತ್ರಗಳಿಗಿರುವುದಿಲ್ಲ. ಉಡುಪಿಯ ಅಷ್ಟಮಠಾಧಿಪತಿಗಳು ಸಹ, ಸ್ನಾನವಾದಕೂಡಲೇ ಮೊದಲು ಈ ಸ್ತೋತ್ರವನ್ನು ಪಾರಾಯಣಮಾಡಿ, ಅನಂತರ ತಮ್ಮ ಆಹ್ನಿಕವನ್ನು ಪ್ರಾರಂಭಿಸುವರು. ಶ್ರೀ ಸ್ವಾಮಿಗಳಿಂದಲೇ ಅನುಗೃಹೀತವಾಗಿರುವುದರಿಂದ ಈ ಸ್ತೋತ್ರವು ಅಕ್ಷರಶಃ ಸತ್ಯವಾಗಿರುವುದು. ಈ ಸ್ತೋತ್ರವನ್ನು ತ್ರಿಸಂಧ್ಯೆಯಲ್ಲೂ ಪಾರಾಯಣಮಾಡಿ ಅನೇಕ ಭಕ್ತರು ಇಷ್ಟಾರ್ಥಗಳನ್ನು ಪಡೆಯುತ್ತಿರುವರು. ಈ ಸ್ತೋತ್ರ ಪುರಶ್ಚರಣೆಯಿಂದ ಸಕಲ ಆಪತ್ತುಗಳೂ ನಿವಾರಣೆಯಾಗುವುವು. ಸಂಸ್ಕೃತ ತಿಳಿಯದವರಿಗೆ ಈ ಸ್ತೋತ್ರವು ಸುಲಭವಾಗಿ ಅರ್ಥವಾಗುವಂತೆ ಕನ್ನಡದಲ್ಲಿ ಹಾಡಾಗಿ ರಚಿಸಿರುವುದನ್ನು ಮುಂದೆ ಕೊಟ್ಟಿರುತ್ತದೆ. ಗದ್ಯವಾಗಿ ಬರೆದಿಡುವ ಅರ್ಥಕ್ಕಿಂತ ಪದ್ಯರೂಪದಲ್ಲಿದ್ದರೆ ಬಾಯಿಪಾಠಮಾಡುವವರಿಗನುಕೂಲವೆಂದು ಈ ರೀತಿ ರಚಿಸಲಾಗಿದೆ.

## ಕನ್ನಡ ರಾಘವೇಂದ್ರ ಸ್ತೋತ್ರ

ಶ್ರೀ ರಘುರಾಮಪಾದಾಂಬುಜ ಭೃಂಗನೆ
ಶ್ರೀ ರಾಘವೇಂದ್ರ ಸದ್ಗುರುವರನೆ
ಸಾರಿದೆ ನಿನ್ನ ಪಾದಾರವಿಂದ ಯುಗ
ಳಾರಾಧನೆಯಿತ್ತು ಸಲಹೆನ್ನನು ||ಪ||
ಶ್ರೀಮಧ್ವಶಾಸ್ತ್ರ ಸುಧಾಂಬುಧಿಯೊಳು ಪುಟ್ಟಿ
ಕಾಮಾರಿಶಿರ ಮುಟ್ಟಿ ಪೂರ್ವೋತ್ತರ
ಆ ಮಹಾ ಅಲೆಯೊಳು ಚರಿಸಿ ದೇವಾಳಿಯಿಂ
ಪ್ರೇಮದಿ ಸೇವ್ಯವಾಗಿರುತಿರುವ ||೧||
ಹರಿಪಾದಾಂಬುಜದಲ್ಲಿ ಬೆರೆದು ಪಂಚ-ಭೇದ
ವರತಾರತಮ್ಯದಿ ದುರ್ವಾದವ
ತರಿದ ಶ್ರೀ ಗುರುವಾಗ್ದೇವತಾನದಿಯೆಮ್ಮ
ನಿರುತ ನಿರ್ಮಲಗೈಸಿ ಕರುಣಿಸಲಿ ||೨||
ಗುರುರಾಘವೇಂದ್ರನೆ ಸಕಲ ಪ್ರದಾತನೆ
ನಿರುತ ನಿನ್ನಡಿಯಲ್ಲಿ ಭಕ್ತಿಯೊಳು
ಇರುವರ ಪಾಪ ಪರ್ವತವನ್ನು ಛೇದಿಪೆ
ವರದೃಷ್ಟಿಯೆಂಬ ವಜ್ರಾಯುಧದಿ ||೩||
ಭೂವಿಬುಧೇಂದ್ರನೆ ಸೇವಿಸಿ ಹರಿಯ ಮ
ಹಾವಿಭವವನೆಲ್ಲ ಪಡೆದವನೆ
ದೇವಸ್ವಭಾವನೆ ಯಾವಾಗಲೆಮ್ಮಿಷ್ಟ
ದೇವ ತರುವಿನಂತೆ ನೀಡುವುದು ||೪||
ಶೀಲಸ್ವರೂಪನೆ ಸಂಸಾರದುಃಖದ
ತೂಲರಾಶಿಗೆ ಕಾಲಾನಲನೆ
ಮೇಲೆನಿಸುವ ಸುಖೈಶ್ವರ್ಯಶಾಲಿಯೆ ಗ್ರ
ಹಾಳಿಗಳನು ನಾಶಗೈಸುವನೆ ||೫||
ಭವಶರಧಿಗೆ ಸೇತುವೆಯೆನಿಸಿರುವನೆ
ಭುವಿಯೊಳು ದ್ವೇಷಿಗಳಿಲ್ಲದಿಹ

ಸುವಿಮಲರೂಪನೆ ತವಕದಿ ಪರವಾದಿ
ನಿವಹಕೆ ವಾಗ್ಬಂಧಗೈಸುವನೆ ||೬||
ವರವಿದ್ವಜ್ಜನರುಗಳರಿಯಲತ್ಯಧಿಕವಾ
ಗಿರುವ ಜ್ಞಾನವು ವಾಗ್ವೈಖರಿಯಿಂದಲಿ
ಪರವಾದಿಗಳ ಗೆದ್ದ ಶ್ರೀರಾಘವೇಂದ್ರ ಸ
ದ್ಗುರುವೆ ನಮ್ಮಿಷ್ಟವ ಸಲಿಸುವುದು ||೭||
ಸಂತಾನ ಸಂಪತ್ತು ಭಕ್ತಿವಿಜ್ಞಾನವು
ಮುಂತಾದ ವಾಗ್ದೇಹಪಾಟವವ
ಸಂತೋಷದಿಂದಿತ್ತು ನಮ್ಮ ಶರೀರದ
ಸಂತಾಪರುಜೆಯ ನಿಗ್ರಹಿಸುವನೆ ||೮||
ಮೇದಿನಿಯೊಳು ಗಂಗಾದಿತೀರ್ಥಾಧಿಕ
ವಾದ ನಿನ್ನಯ ಪಾದೋದಕವು
ಮೋದವು ಬ್ರಹ್ಮಹತ್ಯಾದಿ ತ್ರೈತಾಪವ
ಭೇದಿಸಿ ಸುಕೃತವ ಕೊಡುತಿಹುದು ||೯||
ಭುವಿಯೊಳು ಬಂಜೆಗೆ ಮಕ್ಕಳ ಕೊಡುವುದು
ಅವಯವದಖಿಳವೈಕಲ್ಯವನು
ತವಕದಿ ಸಕಲಗ್ರಹವ ನಿಗ್ರಹಿಸುತ
ವಿವಿಧಪಾತಕ ಪರಿಹರಿಸುವುದು ||೧೦||
ನಿನ್ನಪಾದಾಬ್ಜದ ರಜ ಧರಿಸಿರುವರ
ನಿನ್ನ ಪಾದಾಂಬುಜ ಕೀರ್ತಿಪರ
ಉನ್ನತ ಪರಿಪಕ್ವವಾದ ವಾಗ್ಮಿಗಳ
ನಿನ್ನು ಸಂದರ್ಶಿಸೆ ದುರಿತಹರ ||೧೧||
ಜಯ ಸರ್ವತಂತ್ರ ಸ್ವತಂತ್ರನೆ ಜಯ ಜಯ
ಜಯ ಜಯ ಶ್ರೀಮಧ್ವಮತವರ್ಧನ
ಜಯ ವಿಜಯೀಂದ್ರರ ಕರಕಮಲ ಸಂಜಾತ
ಜಯತು ಸುಧೀಂದ್ರರ ವರಪುತ್ರನೆ ||೧೨||

ಪರಮ ಹಂಸೋತ್ತಮ ಪೂರ್ಣಾಯು ಜ್ಞಾನವು
ನಿರುತಯಶವು ಪುಣ್ಯಭಕ್ತಿಯನು
ಸಿರಿಯ ಸುಪುತ್ರರ ವೃದ್ಧಿಯಗೊಳಿಸೆನ್ನ
ಪರಿಪರಿ ಭಯವೆಲ್ಲ ಪರಿಹರಿಸೊ ||೧೩||
ದುರುಳ ದುರ್ವಾದಿಗಳನು ನಿಗ್ರಹಿಸುವ
ದುರುಳರ ಹೃದಯ ಪ್ರಭೇದಿಸುವ
ಎರಡೆಂಬ ಚಿಹ್ನೆಯ ಧರಿಸಿದ ವಿದ್ಯಾ
ಪರಿಪೂರ್ಣ ಗುರುವನ್ಯರಿನ್ನಿಲ್ಲವೋ ||೧೪||
ಹರಿಯ ಪ್ರಸನ್ನತೆ ಪಡೆದು ಪ್ರಸಿದ್ಧನಾ
ಗಿರುತ ಸ್ಮರನಗೆಲಿದಿಷ್ಟಗಳ
ತ್ವರಿತದಿ ಕೊಡುವ ಶ್ರೀಗುರು ರಾಘವೇಂದ್ರನ
ಹೊರತನ್ಯ ಗುರುವಿಲ್ಲ ಧರೆಯೊಳಗೆ ||೧೫||
ಮರೆವು ಮೂರ್ಛಾಕ್ಷಯ ಅಜ್ಞಾನ ಭ್ರಾಂತಿಯು
ಉರುತರ ಮೂಕತ್ವ ಸಂದೇಹವು
ಕರಚರಣದ ಕಂಪ ಮೊದಲಾದ ಇಂದ್ರಿಯ
ಪರದುಷ್ಟದೋಷವ ಪರಿಹರಿಸೋ ||೧೬||
ಶ್ರೀರಾಘವೇಂದ್ರಾಯನಮಃ ಎಂಬುವ ದಿವ್ಯ
ಸಾರಾಷ್ಟಾಕ್ಷರ ಜಪಿಸುತಲಿ
ಆರಾಧಿಸುವರ ಇಷ್ಟಾರ್ಥಕೊಡುವೆ
ಯಾದರದಿಂದಲಿ ಅನವರತ ||೧೭||
ತನ್ನ ದೇಹದಿಂದ ಉತ್ಪನ್ನವಾಗುವ
ತನ್ನಿಂದ ತನ್ನ ಬಂಧುಗಳಿಂದಾದ
ಉನ್ನತದೋಷಗಳನ್ನು ನಿವರ್ತಿಸಿ
ಮುನ್ನ ಕೊಡುವೆ ಸಕಲೇಷ್ಟಗಳ ||೧೮||
ಸ್ವಾರ್ಥಸಿದ್ಧಿಗೆ ಈ ಸ್ತೋತ್ರ ತ್ರಿಕಾಲದಿ
ಪ್ರಾರ್ಥಿಸಲಿಹಪರದಿಷ್ಟಗಳ

ಅರ್ಥಿಯಿಂಪಡೆದು ಕೃತಾರ್ಥನಾಗುವ
ಯಥಾರ್ಥವು ಇದಕೆ ಸಂದೇಹವಿಲ್ಲ ||೧೯||
ಈ ಮಹಿಯೊಳಗೆ ಆಗಮ್ಯ ಮಹಿಮೆ ಉ
ದ್ದಾಮಸುಕೀರ್ತಿವಿಶಾರದನೆ
ಶ್ರೀಮಧ್ವಮತದುಗ್ಧಾಬ್ಧಿಗೆ ಚಂದ್ರನೆ
ಸ್ವಾಮಿನಿರ್ದೋಷಿ ನೀನೆನ್ನ ಕಾಯೊ ||೨೦||
ವೃಂದಾವನದ ಪ್ರದಕ್ಷಿಣೆಮಾಡಲು
ಪೊಂದುವ ಸಕಲ ಯಾತ್ರಾಫಲವ
ವೃಂದಾವನದಉದುಬಿಂದುವ ಧರಿಸಲು
ಸಕಲ ತೀರ್ಥದ ಫಲ ಲಭಿಸುವುದು ||೨೧||
ನಮಿಸುವೆ ಸರ್ವಾಭೀಷ್ಟಸಿದ್ಧಿಗೆ ನಾನು
ವಿಮಲ ಶಾಸ್ತ್ರಾರ್ಥ ಜ್ಞಾನಗಳು
ಕ್ರಮದಿ ಲಭಿಸೆ ನಿನ್ನ ನಾಮೋಚ್ಚಾರಣೆ
ಅಮಿತ ಹರುಷದಿಂದ ಮಾಡುವೆನು ||೨೨||
ಪರಿಪರಿದುಃಖದಿ ಪರಿಪೂರ್ಣವಾಗಿಹ
ಉರುತರಗಂಭೀರವಾಗಿರುವ
ಅರಿಯಲಸದಳ ಪಾತಾಳವು ಉ
ತ್ತರಿಸಲಸಾಧ್ಯವು ಸಮವಿಲ್ಲವು ||೨೩||
ನಿರುತದೋಷಗಳೆಂಬ ಜಲಪಿಶಾಚಿಗಳಿಂದ
ಬೆರೆದರಿಷಡ್ವರ್ಗತರಂಗದಿ
ಪರಿಮಿತಿಯಿಲ್ಲದ ಭಯಸಮೂಹವೆ ಬಿಳಿ
ನೊರೆಯು ವ್ಯಸನವಗಾಧವಾದ ||೨೪||
ಎಂದಿಗು ಹಿಂಗದ ವಿಷಜಲವಿರುತಿಹ
ಬಂಧಕವಾದ ಸಂಸಾರವೆಂಬ
ಸಿಂಧುವಿನೊಳು ಬಿದ್ದು ಮಗ್ನನಾದೆ ರಾಘ
ವೇಂದ್ರ ಗುರುವೆ ಎನ್ನನುದ್ಧರಿಸೋ ||೨೫||

ನಿಷ್ಠೆಯಿಂದಲಿ ಸ್ತೋತ್ರಮಾಡಲಷ್ಟಾದಶ
ಕುಷ್ಟಾಂಧಮೂಕಬಧಿರತ್ವಹರ
ಸೃಷ್ಟಿಯೊಳಗೆ ಪೂರ್ಣಾಯು ಸಂಪತ್ತಿಯು
ತೃಷ್ಟ ಸುಖಗಳನಿತ್ತು ಸಲಹುವೆಯೊ ||೨೬||
ಮುದದಿ ಈ ಸ್ತೋತ್ರದಿಂದಭಿಮಂತ್ರಿತವಾದ
ಉದಕ ಪ್ರಾಶನದಿಂದ ಉದುರದೊಳು
ಉದುಭವಿಸಿದ ಮಹಾರೋಗಗಳೆಲ್ಲವು
ಅಧಿಕ ಶೀಘ್ರದಿ ನಾಶವಾಗುವವು ||೨೭||
ವೃಂದಾವನದ ಬಳಿ ಸ್ತೋತ್ರ ಪ್ರದಕ್ಷಿಣೆ
ಯಿಂದವಂದಿಸೆ ಕುಂಟನಾದವನು
ಚೆಂದದಿ ನಡೆಯುವ ಶಕ್ತಿಯ ಕಾಲೊಳು
ಪೊಂದುವ ಗುರುವಿನನುಗ್ರಹದಿ ||೨೮||
ರವಿಶಶಿಗ್ರಹಣಪುಷ್ಯಾರ್ಕಾದಿ ದಿನದಲ್ಲಿ
ಸ್ತವನವ ನೂರೆಂಟು ಸಲ ಮಾಡಲು
ತವಕದಿಂದ ಭೂತ ಪ್ರೇತ ಪಿಶಾಚಿಯ
ವಿವಿಧ ಬಾಧೆಗಳೆಲ್ಲ ಪರಿಹರವು ||೨೯||
ವಿಮಲವೃಂದಾವನದೆಡೆಯೊಳು ಸ್ತೋತ್ರದಿ
ನಮಿಸುತ್ತ ದೀಪವನಿಡುವವರು
ಶ್ರಮವಿಲ್ಲದೆ ಸುಜ್ಞಾನ ಸತ್ಪುತ್ರರ
ಮಮತೆಯಿಂದಲಿ ಹೊಂದಿ ಸುಖಿಸುವರು ||೩೦||
ಪರವಾದಿಗಳ ದಿಗ್ವಿಜಯ ದಿವ್ಯಜ್ಞಾನ
ಪರಿಪೂರ್ಣಭಕ್ತಿಯ ವರ್ಧಿಸುತ
ನಿರುತದಿ ಸಕಲೇಷ್ಟ ದೊರಕಿಪ ವಿಷಯದಿ
ಬರಿದಾದ ಯೋಚನೆ ಫಲವಿಲ್ಲವು ||೩೧||
ಚೋರಮಹೋರಗನೃಪನಕ್ರವ್ಯಾಘ್ರಾದಿ
ಘೋರ ಭಯವ ಪರಿಹರಿಸುವುದು

ಧಾರುಣಿಯೊಳಗೀ ಸ್ತೋತ್ರ ಪ್ರಭಾವವೆ
ಸಾರುತಲಿಹದು ಸಂದೇಹವಿಲ್ಲ ||೩೨||
ಪರಿಶುದ್ಧ ಭಕ್ತಿಯಿಂ ಗುರುರಾಘವೇಂದ್ರರ
ಚರಣವ ಸ್ಮರಿಸಿ ಸಂಸ್ತುತಿಸುವರು
ಅರಿಯರು ಲವಲೇಶ ದುಃಖವ ಸ್ವಪ್ನದಿ
ಹರಿಯ ಅನುಗ್ರಹ ಬಲದಿಂದಲಿ ||೩೩||
ವಸುಧೆಯೊಳಗೆ ಸಕಲೇಷ್ಟ ಸಮೃದ್ಧಿಯ
ದಿಶಿದಿಶಿಯೊಳು ಕೀರ್ತಿಸಮವಿಲ್ಲದ
ಎಸೆವ ಐಶ್ವರ್ಯವು ದೊರಕಿವುದಿದಕೆ ಹ
ಯಾಸ್ಯನೆ ಸಾಕ್ಷಿಯಾಗಿರುತಿಹನು ||೩೪||
ಧರೆಯೊಳಗತಿಪೂಜ್ಯ ಗುರುರಾಘವೇಂದ್ರನೆ
ನಿರುತವು ಸತ್ಯಧರ್ಮದಿರತನೆ
ಸ್ಮರಿಸುವರಿಗೆ ಸುರತರುವೆ ನಮಿಪರಿಗೆ
ಸುರಭಿಯೆನಿಸಿ ನಿತ್ಯ ಪೊರೆಯುವನೆ ||೩೫||
ಮಂಗಳಮಂತ್ರಾಲಯಪುರಕಧಿಪನೆ,
ಮಂಗಳ ತುಂಗಾತೀರದೊಳು
ಹಿಂಗದೆವಿಹರಿಸಿ ಶ್ರೀರಾಮಚಂದ್ರನ
ಮಂಗಳಮೂರ್ತಿಯ ಪಾಡುವನೇ ||೩೬||

—0—

ಶ್ರೀಕ್ಷೇತ್ರ ಮಂತ್ರಾಲಯದಲ್ಲಿ ಪ್ರತಿರಾತ್ರಿ ಮಹಾಮಂಗಳಾರತಿಯ ಕಾಲದಲ್ಲಿ ಸ್ವಸ್ತಿವಾಚನಗಳಾಗುತ್ತಲೇ, ಅಪ್ಪಣ್ಣಾಚಾರ್ಯರವರು ಮಾಡಿರುವ ಮಂಗಳಾಷ್ಟಕಗಳನ್ನು ಬಹು ಭಕ್ತಜನರು ಏಕಕಾಲದಲ್ಲಿ ಹೇಳುವುದನ್ನು ಕೇಳಿದ ಯಾವ ಕಠಿಣ ಚಿತ್ತನ ಮನಸ್ಸಾದರೂ ಕರಗದಿರುವುದಿಲ್ಲ. ಆದುದ ರಿಂದ ಭಕ್ತಜನರು ದಿನಕ್ಕೆ ಒಂದು ಸಲವಾದರೂ ರಾಘವೇಂದ್ರ ಸ್ತೋತ ವನ್ನೂ ಮಂಗಳಾಷ್ಟಕವನ್ನೂ ಪಠಿಸಿ ಪುನೀತರಾಗಲೆಂದು ಆ ಅಷ್ಟಕವನ್ನು ಕೆಳಗೆ ಕೊಡಲಾಗಿದೆ.

## ಶ್ರೀಮದ್ಗುರುರಾಘವೇಂದ್ರಾಷ್ಟಕ

ಶ್ರೀಮದ್ರಾಮಪದಾರವಿಂದ ಮಧುಪಃ ಶ್ರೀಮಧ್ವವಂಶಾಧಿಪಃ |
ಸಚ್ಛಿಷ್ಯೋಡುಗಣೋಡುಪಃ ಶ್ರಿತ ಜಗದ್ಗೀರ್ವಾಣ ಸತ್ಪಾದಪಃ ||
ಅತ್ಯರ್ಥಂ ಮನಸಾಕೃತಾಚ್ಯುತಜಪಃ ಪಾಪಾಂಧಕಾರಾತಪಃ |
ಶ್ರೀಮತ್ಸದ್ಗುರು ರಾಘವೇಂದ್ರಯತಿರಾಟ್ ಕುರ್ಯಾದ್ಧ್ರುವಂ ಮಂಗಳಂ ||೧||
ಕರ್ಮಂದೀಂದ್ರ ಸುಧೀಂದ್ರ ಸದ್ಗುರುಕರಾಂಭೋಜೋದ್ಭವಃ ಸಂತತಂ |
ಪ್ರಾಜ್ಯಧ್ಯಾನವಶೀಕೃತಾಖಿಲ ಜಗದ್ವಾಸ್ತವ್ಯ ಲಕ್ಷ್ಮೀಧವಃ ||
ಸಚ್ಛಾಸ್ತ್ರಾತಿ ವಿದೂಷಕಾಖಿಲ ಮೃಷಾವಾದೀಭ ಕಂಠೀರವಃ |
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ ಮಂಗಳಂ ||೨||
ಸಾಲಂಕಾರಕ ಕಾವ್ಯನಾಟಕ ಕಲಾಕಾಣಾದ ಪಾತಂಜಲ–
ತ್ರೈಯರ್ಥಸ್ಮೃತಿ ಜೈಮಿನೀಯ ಕವಿತಾ ಸಂಗೀತ ಪಾರಂಗತಾಃ |
ವಿಪ್ರಕ್ಷತ್ರವಿಡಂಘ್ರಿ ಜಾತಮುಖರಾನೇಕ ಪ್ರಜಾಸೇವಿತಃ
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ ಮಂಗಳಂ ||೩||
ರಂಗೋತ್ತುಂಗ ತರಂಗ ಮಂಗಳಕರ ಶ್ರೀತುಂಗಭದ್ರಾ ತಟೆ |
ಪ್ರತ್ಯಸ್ಥ ದ್ವಿಜಪುಂಗವಾಲಯಲಸ ಮಂತ್ರಾಲಯಾಖ್ಯೇಪುರೇ ||
ನವ್ಯೇಂದ್ರೋಪಲ ನೀಲಭವ್ಯಕರ ಸದ್ವೃಂದಾವನಾಂತರ್ಗತಃ |
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ ಮಂಗಳಂ ||೪||
ವಿದ್ವದ್ರಾಜಶಿರಃ ಕಿರೀಟಖಚಿತಾನರ್ಘ್ಯೋರು ರತ್ನಪ್ರಭಾ |
ರಾಗಾಘೌಘಹ ಪಾದಕದ್ವಯಚರಃ ಪದ್ಮಾಕ್ಷಮಾಲಾಧರಃ ||
ಭಾಸ್ವದ್ದಂಡ ಕಮಂಡಲೂಜ್ವಲಕರಃ ರಕ್ತಾಂಬರಾಡಂಬರಃ |
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ ಮಂಗಳಂ ||೫||
ಯದ್ವೃಂದಾವನ ಸಪ್ರದಕ್ಷಿಣ ನಮಸ್ಕಾರಾಭಿಷೇಕ ಸ್ತುತಿ |
ಧ್ಯಾನಾರಾಧನ ಮೃದ್ವಿಲೇಪನ ಮುಖಾನೇಕೋಪ ಚಾರಾನ್ ಸದಾ ||
ಕಾರಂಕಾರ ಮಭಿ ಪ್ರಯಾಂತಿ ಚತುರೋಲೋಕಾಃ ಪುಮರ್ಥಾನ್ ಸದಾ |
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ ಮಂಗಳಂ ||೬||
ವೇದವ್ಯಾಸಮುನೀಶ ಮಧ್ವಯತಿರಾಟ್ ಟೀಕಾರ್ಯ ವಾಕ್ಯಾಮೃತಂ |
ಜ್ಞಾತ್ವಾದ್ವೈತಮತಂ ಹಲಾಹಲಸಮಂ ತ್ಯಕ್ತ್ವಾ ಸಮಾಖ್ಯಾಪ್ತಯೆ ||

ಸಂಖ್ಯಾವತ್ಸುಖದಾಂ ದಶೋಪನಿಷದಾಂ ವ್ಯಾಖ್ಯಾಂ ಸಮಾಖ್ಯಾಮುದಾ ।
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ ಮಂಗಳಂ ॥೭॥
ಶ್ರೀಮದ್ವೈಷ್ಣವ ಲೋಕ ಜಾಲಕಗುರುಃ ಶ್ರೀಮತ್ಪರಿವ್ರಾಟ್ ಭರುಃ ।
ಶಾಸ್ತ್ರೇ ದೇವಗುರುಃ ಶ್ರಿತಾಮರತರುಃ ಪ್ರತ್ಯೂಹ ಗೋತ್ರಸ್ವರುಃ ॥
ಚೇತೋತೀತ ಶಿರುಃ ತಥಾಜಿತವರುಃ ಸತ್ಸೌಖ್ಯಸಂಪತ್ಕರುಃ ।
ಶ್ರೀಮತ್ಸದ್ಗುರು ರಾಘವೇಂದ್ರ ಯತಿರಾಟ್ ಕುರ್ಯಾದ್ಧ್ರುವಂ ಮಂಗಳಂ ॥೮॥
ಯಃಸಂಧ್ಯಾಸ್ವನಿಶಂ ಗುರೋರ್ವ್ರತಿಪತೇಃ ಸನ್ಮಂಗಳಾನ್ಯಾಷ್ಟಕಂ ।
ಸದ್ಯಃಪಾಪಹರಂ ತ್ವಸೇವಿವಿದುಷಾಂ ಭಕ್ತ್ಯೈವ ಬಾಭಾಷಿತಂ ॥
ಭಕ್ತ್ಯಾವಕ್ತಿ ಸುಸಂಪದಂ ಶುಭಪದಂ ದೀರ್ಘಾಯುರಾರೋಗ್ಯಕಂ ।
ಕೀರ್ತಿಂ ಪುತ್ರಕಳತ್ರಬಾಂಧವ ಸುಹೃನ್ಮೂರ್ತೀಃ ಪ್ರಯಾತಿ ಧ್ರುವಂ ॥೯॥

ಇತಿ ಶ್ರೀ ಅಪ್ಪಣಾಚಾರ್ಯ ಕೃತ ಗುರುರಾಜಾಷ್ಟಕಂ ಸಂಪೂರ್ಣಂ

**ಶ್ರೀ ಕೃಷ್ಣಾರ್ಪಣಮಸ್ತು.**

---

## ಮಠದ ಜಹಗೀರುಗಳು

ಶ್ರೀಮಠಕ್ಕೆ ವಿಜಯೀಂದ್ರ, ಸುಧೀಂದ್ರ, ಶ್ರೀ ರಾಘವೇಂದ್ರಸ್ವಾಮಿಗಳ ಕಾಲದಲ್ಲಿ ಬಂದ ಜಹಗೀರುಗಳು ಈಗಿನವರ ಅನುಭವದಲ್ಲಿದ್ದರೆ, ಅದೊಂದು ಪುಟ್ಟ ಪುದುಕೋಟೆಯಂಥಾ ಸಂಸ್ಥಾನವೇ ಆಗಿರುತ್ತಿತ್ತು. ಈಚೆಗೆ ಬಂದ ಸುಮತೀಂದ್ರರೂ ಅನೇಕ ಗ್ರಾಮಗಳನ್ನು ಸಂಪಾದಿಸಿದ್ದರು. ಅನಂತರ ಮೈಸೂರರಸರೂ ಶ್ರೀಮಠಕ್ಕೆ ನಂಜನಗೂಡಿನಲ್ಲಿ ವಸತಿಯನ್ನು ಕಲ್ಪಿಸಿ ಗ್ರಾಮಗಳನ್ನು ಕೊಟ್ಟರು.

ಹಿಂದೂ ರಾಜರ ಪರಸ್ಪರ ಯುದ್ಧ, ಹಿಂದೂ ಮಹಮ್ಮದೀಯರ ಯುದ್ಧ, ಇಬ್ಬರನ್ನೂ ಮೂಲೆಗೆ ಕೂಡಿಸಿದ ಇಂಗ್ಲೀಷರ ಯುದ್ಧ ಇವುಗಳಲ್ಲಿ ಗೆದ್ದವರು ಸೋತವರ ಧರ್ಮಗಳನ್ನು ಬಹುಮಟ್ಟಿಗೆ ನಡೆಸದ ಕಾರಣ, ಮಠದ ಗ್ರಾಮಗಳೆಲ್ಲಾ ಕೈಬಿಟ್ಟು ಹೋದವು. ವಿಜಯನಗರದರಸರು ಸುರೇಂದ್ರರಿಗೂ ಸುಧೀಂದ್ರರಿಗೂ ಬಹಳವಾಗಿ ಗ್ರಾಮ ಭೂಮಿಗಳನ್ನು ಕೊಟ್ಟಿದ್ದರು. ಆ ಧರ್ಮವನ್ನು ಬಿಜಾಪುರದ ಬಾದಷಹರು ನಡೆಸಲಿಲ್ಲ. ಸವಣೂರು ನವಾಬರ ಧರ್ಮವನ್ನು ಟಿಪ್ಪೂ ಸುಲ್ತಾನನು ನಡೆಸಲಿಲ್ಲ. ತಂಜಾವೂರಿನ ನಾಯಕರೂ

ಮಹಾರಾಷ್ಟ್ರರೂ ಮಾಡಿದ ಧರ್ಮವನ್ನು ಕಂಪೆನಿಯ ಅಧಿಕಾರಿಗಳು ನಡೆಸಲಿಲ್ಲ. ಇಷ್ಟರಮೇಲೆ ಮಠದ ಸಂಚಾರದಲ್ಲಿ ಈಕಾಲದಹಾಗೆ ಪ್ರಯಾಣ ಸೌಕರ್ಯಗಳಿಲ್ಲದಿದ್ದುದರಿಂದ, ಅಲ್ಲಲ್ಲಿ ನಿಯಮಿತರಾದ ಗುತ್ತಿಗೆದಾರರು ಗ್ರಾಮಗಳ ಉತ್ಪತ್ತಿಯನ್ನು ಮಠಕ್ಕೆ ಸಲ್ಲಿಸದೆ, ತಮಗೆ ಅನುಕೂಲವಾಗುವಂತೆ ಆಯಾ ಕಾಲದಲ್ಲಿದ್ದ ಸ್ವಾಮಿಗಳಿಂದ ಕಾಗದಪತ್ರಗಳನ್ನು ಬರೆಸಿಕೊಂಡು ಅನೇಕ ಗ್ರಾಮಗಳನ್ನಪಹರಿಸಿದರು. ಇದರಂತೆ ಮಠದ ಜವಾಹೀರುಗಳದೂ ಒಂದು ಕರ್ಮಕಥೆಯಾಯಿತು.

ಇಷ್ಟೆಲ್ಲಾ ಕಳೆದುಳಿದು ಈಗ ಮಠಕ್ಕೆ ಐವತ್ತುಸಹಸ್ರ ರೂಪಾಯಿ ಮಾತ್ರ ಉತ್ಪತ್ತಿ ಇರುತ್ತದೆ.

## ಮೇಜರ್ ಮನ್ರೋ

ಮೂರನೇ ಮೈಸೂರು ಯುದ್ಧದಲ್ಲಿ ಇಂಗ್ಲೀಷರೂ, ಮರಾಟಿಗರೂ, ಹೈದರಾಬಾದಿನವರೂ ಸೇರಿ ಟಿಪ್ಪುವನ್ನು ಗೆದ್ದು ಮೂರುಕೋಟಿ ಮೂವತ್ತು ಲಕ್ಷ ರೂಪಾಯಿಗಳ ಸಹಿತ ಅರ್ಧರಾಜ್ಯವನ್ನು ಕಸುಕೊಂಡಾಗ, ಹೈದರಾಬಾದಿನ ನಿಜಾಮನಿಗೆ ಬಳ್ಳಾರಿ, ಕಡಪ, ಕರ್ನೂಲು ಪ್ರಾಂತಗಳು ಹಂಚಿಕೆಯಾಗಿದ್ದುವು. ಮತ್ತೆ ಕ್ರಿ. ೧೮೦೦ ರಲ್ಲಿ ರಾಜತಂತ್ರ ವಿಶಾರದರಾದ ಕಂಪೆನಿಯ ಅಧಿಕಾರಿಗಳು ನಿಜಾಮನಿಂದ ತಾವೇ ಆ ಪ್ರಾಂತಗಳನ್ನು ತೆಗೆದುಕೊಂಡುಬಿಟ್ಟರು. ಆಗ ಅನಂತಪುರ ಬಳ್ಳಾರಿ ಜಿಲ್ಲೆಗಳೆರಡೂ ಸೇರಿ ಬಳ್ಳಾರೀ ಜಿಲ್ಲೆಯಾಗಿತ್ತು. ಮೇಜರ್ ಮನ್ರೋ ಎಂಬುವನು ಬಳ್ಳಾರಿಗೆ ಪ್ರಿನ್ಸಿಪಲ್ ಕಲೆಕ್ಟರಾಗಿ ಬಂದನು. ಇವನು ದೇವಾದಾಯ ಬ್ರಹ್ಮಾದಾಯಗಳಲ್ಲಿ ತನ್ನ ಮನಸ್ಸಿಗೆ ಸಮರ್ಪಕವಲ್ಲದವುಗಳನ್ನು ಸರ್ಕಾರಕ್ಕೆ ಸೇರಿಸಿಕೊಳ್ಳುತ್ತಾ ಮಂತ್ರಾಲಯಕ್ಕೂ ಬಂದನು. ಒಂದು ಸಮಾಧಿಯ ದೀಪಾರಾಧನೆಗೆ ಒಂದು ಗ್ರಾಮದ ಉತ್ಪತ್ತಿಯೇಕೆಂದು ಕೇಳಿದನು. ಜನರು ಇದು ಮಹಾಸ್ಥಳವೆಂದೂ, ಸಾವಿರಾರು ಜನ ಯಾತ್ರಿಕರು ಬರುವರೆಂದೂ, ಜಹಗೀರನ್ನು ಸರ್ಕಾರಕ್ಕೆ ಸೇರಿಸಬಾರದೆಂದೂ ಕೇಳಿಕೊಂಡರು. ಆ ಸಮಾಧಿಯಲ್ಲಿ ಏನು ಮಹತ್ವವಿರುವದೋ ನಾನೇ ನೋಡಿ ತೀರ್ಮಾನಿಸುತ್ತೇನೆಂದು ಸಾಹೇಬನು ಹೇಳಿದನು. ಈ ಪರಂಗಿಯವನಿಗೇನು ಮಹತ್ವ ಗೊತ್ತಾದೀತೆಂದು ಜನರು ಸಂಶಯ

ಪಟ್ಟರು. ಮೇಜರನು ತಾನೇ ಹುಜೂರು ಸಿರಸ್ತೆದಾರರನ್ನು ಜೊತೆಯಲ್ಲಿ ಕರೆದುಕೊಂಡು, ಕಾಲಿನ ಮೋಜವನ್ನು ತೆಗೆದು, ಬೃಂದಾವನದ ಎದುರಿಗೆ ಬಂದು ನಿಂತನು. ಅವನ ಕಣ್ಣಿಗೆ ಸುಕೃತ ವಿಶೇಷದಿಂದ ಭವ್ಯಸ್ವರೂಪರಾದ ಯತಿಗಳ ದರ್ಶನವಾಯಿತು, ಪರಸ್ಪರ ಇಂಗ್ಲೀಷಿನಲ್ಲಿ ಭಾಷಣವಾಯಿತು. ಮನ್ರೋವು ಹುಜೂರು ಸಿರಸ್ತೆದಾರರನ್ನು ಹತ್ತಿರ ಕರೆದು 'ಅವರೋ ! ಸಮಾಧಿಯಲ್ಲಿರುವ ಯತಿಗಳು ?' ಎಂದು ಕೇಳಿದನು. ಸಿರಸ್ತೆದಾರನು ಬರೀ ಬೃಂದಾವನ ಕಾಣುತ್ತದೆ; ಅಲ್ಲಿ ಈಗ ಯತಿಗಳ್ಯಾರೂ ಇಲ್ಲವೆಂದನು. ಉತ್ತರಕ್ಷಣದಲ್ಲಿ ಸಾಹೇಬನಿಗೂ ಯತಿಗಳ ದರ್ಶನವಾಗಲಿಲ್ಲ. ಬೃಂದಾವನ ಮಾತ್ರವೇ ಕಾಣಿಸಿತು. ಇದನ್ನು ನೋಡಿದ ಸಾಹೇಬನಿಗೆ ವಿಲಕ್ಷಣಭಾವನೆಯುಂಟಾಯಿತು. ಭಕ್ತಿಯಿಂದ ತನ್ನ ಪದ್ಧತಿಯಂತೆ ಸ್ವಾಮಿಗಳಿಗೆ ವಂದನೆಮಾಡಿ, ಮಠದ ತೀರ್ಥಪ್ರಸಾದಗಳನ್ನು ಸ್ವೀಕರಿಸಿ, ಜಹಗೀರಿಯ ಗೊಡವೆಗೆ ಹೋಗದೆ ಬಳ್ಳಾರಿಗೆ ಪ್ರಯಾಣಮಾಡಿದನು. ಮನ್ರೋವು ಬರೆದಿಟ್ಟ ವಿಷಯವನ್ನೇ ಬಳ್ಳಾರಿ ಡಿಸ್ಟ್ರಿಕ್ಟು ಗೆಜೆಟಿಯರಿನಲ್ಲಿ ಒಂದು ರೀತಿಯಲ್ಲಿ ಬರೆದಿದ್ದಾರೆ.

## Reprint 1916 by the Superintendent Govt. Press, MADRAS.

Chapter XV—Adoni Taluk—Page No. 213

MANTSALA·—A Shortriem village with a population of 1212 on the bank of the Tungabhadra in the extreme north of the Taluk. The village widely known as containing the tomb of the Madhva saint Sri Raghavendra Swami, the annual festival in August connected with which is attended by large numbers of pilgrims including even Lingayats from Bombay, the Nizam's Dominions and even Mysore The Brindavan (tomb) itself is not of architectural interest. The grant of the landed endowment attended to it, is said in one of the Mackenzie MSS to have been made by Venkanna Pant, the well known Devan of Sidi Masand Khan, Governor of Adoni from 1662 to 1687.

A quaint story of Munro, is told about the place The endowment being threatened with resumption, Munro, it is said, *came to enquiries After removing his boots and taking off his hat he approached the grave. The saint there upon emerged from his tomb and met him. They conversed together for some time regarding the resumption, but though the saint was visible and audible to Munro—who was himself the people declare, semi-devine none of the others who were there could either see him or hear what he said. The discussion ended, Munro returned to his tent and quashed the proposal to resume the endowment. Being offered some consecrated rice, he accepted it and ordered it to be used in the preparation of his meals for that day.

*Madras Review, VIII, 280

ಅದ್ಯಾಪಿ ಮಂತ್ರಾಲಯದಲ್ಲಿ ವಿಚಿತ್ರಮಹಿಮೆಗಳೇ ನಡೆಯುತ್ತಿವೆ. ನಿರಂತರ ಸೇವಾಮಾಡಿ ಇಷ್ಟಾರ್ಥಪಡೆಯಲು ಜನರು ಬರುತ್ತಾರೆ. ಬಂದವರೆಲ್ಲಾ ತಮತಮಗಾದ ಅನುಭವಗಳನ್ನು ಹೇಳುತ್ತಾರೆ. ಅಪರಿಹಾರ್ಯವಾದ ಕುಷ್ಠಾದಿರೋಗಗಳು ಸೇವೆಯಿಂದ ಪರಿಹಾರವಾಗುತ್ತಲಿವೆ. ಬೃಂದಾವನದ ಮೂಲಮೃತ್ತಿಕೆಯನ್ನು ತೆಗೆದುಕೊಂಡು, ಬೇರೆಬೇರೆ ಸ್ಥಳಗಳಲ್ಲಿ ಅನೇಕರು ಬೃಂದಾವನ ಪ್ರತಿಷ್ಠೆಮಾಡಿದ್ದಾರೆ. ಅಲ್ಲಿ ಸಹ ಇಂಥಾ ಮಹಿಮೆಗಳೇ ನಡೆಯುತ್ತಿವೆ. ಭಕ್ತಜನರು ಮೂಲಮೃತ್ತಿಕೆಯನ್ನು ಚಿಕ್ಕ ಚಿಕ್ಕ ಬೆಳ್ಳಿಯ ಬೃಂದಾವನಗಳಲ್ಲಿಟ್ಟು ತಮ್ಮ ಮನೆಗಳಲ್ಲೆಲ್ಲಾ ಪೂಜೆ ಮಾಡುತ್ತಾರೆ. ಸೇವೆಗೆ ಹೋದ ಜನರ ಅನುಭವಗಳನ್ನೇ ಶೇಖರಿಸಿ ಬರೆಯುತ್ತಾ ಬಂದರೆ, ದೊಡ್ಡ ದೊಡ್ಡ ವಹಿಗಳೂ ಸಾಲುವದಿಲ್ಲ. ಎಲ್ಲ ಜಾತಿಯವರೂ ಸ್ವಾಮಿಗಳ ಸೇವೆ ಮಾಡುತ್ತಾರೆ ಮುಖ್ಯವೇನು ? ಸ್ವಾಮಿಗಳ ಮಹಿಮೆಯು ಅಗಮ್ಯವು. ಅಲ್ಲಿ ಹೋಗಿ ನೋಡಿದರೇ ಅವರ ಮಹಿಮೆಯು ತಿಳಿದೀತು. ಆ ಮಹನೀಯರ ಕಥಾಶ್ರವಣದಿಂದ ಭಕ್ತರ ಭಕ್ತಿಯು ಹೆಚ್ಚುವುದು. ಭಕ್ತಿಯೇ ಮುಕ್ತಿಗೆ ದಾರಿಯಾಗುವುದು.



## ೧೧. ಬೆಂಗಳೂರಿನಲ್ಲಿ ಶಾಖಾ ಬೃಂದಾವನ.

ಮಂತ್ರಾಲಯದಲ್ಲಿ ಶ್ರೀ ರಾಘವೇಂದ್ರ ಸ್ವಾಮಿಗಳವರು ಬೃಂದಾವನ ಪ್ರವೇಶಮಾಡಿದ ದಿನದಿಂದ, ವಾಚಕರು ಮುಂದಿನ ಪುಟಗಳಲ್ಲಿ ಓದಬಹುದಾದ ಸುಳಾದಿಯಲ್ಲಿ ಹೇಳಿರುವಂತೆ ದಿನವೂ ಸೇವಿಸುವವರ, ಪೂಜಿಸಿ ಇಷ್ಟಾರ್ಥ ಪಡೆಯುವವರ, ಸಂಖ್ಯೆ ಬಹಳವಾಯಿತು. ಭಕ್ತಜನರು ಶ್ರೀ ಕ್ಷೇತ್ರದಲ್ಲಿ ಸೇವಿಸಿ ಇಷ್ಟಾರ್ಥ ಪಡೆಯುವುದು ಮಾತ್ರವಲ್ಲದೆ ತಾವಿದ್ದ ಸ್ಥಳಗಳಲ್ಲೂ ಮೂಲಮೃತ್ತಿಕೆಯನ್ನು ಶ್ರೀಮಠದಿಂದ ಪಡೆದು ಬೃಂದಾವನಗಳನ್ನು ಪ್ರತಿಷ್ಠಿಸಲಾರಂಭಿಸಿದರು. ಹೀಗೆ ಶಾಖಾ ಬೃಂದಾವನವನ್ನು ಪ್ರತಿಷ್ಠಿಸಿದ ಮೊದಲನೇ ಸ್ಥಳ ಶಿವಪ್ಪನಾಯಕನು ಆಳುತ್ತಿದ್ದ ನಗರವೆಂದು ಪುರಾತನ ಇತಿಹಾಸದಿಂದ ಗೊತ್ತಾಗುತ್ತದೆ ಶಿವಪ್ಪನಾಯಕನು ಧರ್ಮಾತ್ಮನಾಗಿದ್ದ ನೆಂಬುದಕ್ಕೂ, ಪರಮತ ಸಹಿಷ್ಣುವಾಗಿದ್ದನೆಂಬುದಕ್ಕೂ, ಶ್ರೀರಾಯರ ಬೃಂದಾವನ ಸೇವೆಗೆಂದು ಮಾನ್ಯಕೊಟ್ಟಿರುವ ಭೂಮಿಗಿಂತ ಹೆಚ್ಚಿನ ಪ್ರಮಾಣ ಬೇಕಾಗಿಲ್ಲ ಆ ಭೂಮಿಯ ಆಡಳಿತವು ನಗರದ ಉಡುಪರ ವಶದಲ್ಲಿದ್ದು ಅದ್ಯಾಪಿ ಬೃಂದಾವನ ಸೇವೆಗೆ ಅನುಕೂಲವಾಗುತ್ತಿದೆ. ಲಕ್ಷಗೃಹಗಳಿದ್ದ ನಗರವು ಹೈದರನ ಹಾವಳಿಯಿಂದ ಹಾಳಾಗಿ, ನಗರವಾಸಿಗಳು ಜೀವನಾರ್ಥ ವಲಸೆ ಹೋಗಿ ಆ ಪ್ರಾಂತ್ಯವು ವಿಜಯನಗರದಂತೆ ಪಾಳಾಗಿದ್ದರೂ, ಇನ್ನೂ ಇಪ್ಪತ್ತು ಮೂವತ್ತು ಸಂತಾನದವರು ಆ ನಗರದಲ್ಲಿ ವಾಸವಾಗಿದ್ದು ಮಾರ್ಗ ತ್ಥೀನ ಪ್ರಯಾಣಮಾಡುವವರಿಗೆ ಆಶ್ರಯದಾತರಾಗಿದ್ದಾರೆ. ಇತ್ತೀಚಿನ ಕಾಲದಲ್ಲೂ ೩೦-೪೦ ವೈಷ್ಣವ ಬ್ರಾಹ್ಮಣರ ಕುಟುಂಬಗಳು ವಾಸವಾಗಿದ್ದ ಅವಶೇಷಗಳು ಕಂಡುಬರುತ್ತಿವೆ ರಾಯರ ಬೃಂದಾವನ ಮಾತ್ರ ಈಗಿನ ನಗರಕ್ಕೆ ಒಂದು ಮೈಲಿಯಷ್ಟು ದೂರದಲ್ಲಿ ಹಳೇಸರ ಎಂದು ಕರೆಸಿಕೊಳ್ಳುವ ಶರಾವತಿಯ ಉಪನದಿಯೊಂದರ ತೀರದಲ್ಲಿದೆ. ಆ ಕಾಲದಲ್ಲಿ ಕಟ್ಟಿದ್ದ ಸೋಪಾನವು ಶಿಥಿಲವಾಗಿದೆ. ಈಗ ವಾರಕ್ಕೊಂದು ದಿನ ಮಾತ್ರ ರಾಯರ ಪೂಜಾ ನಡೆಯುತ್ತಿದೆ.

ನಗರದ ನಂತರ ಹೊನ್ನಾಳಿ ಈರೋಡು ಮಧುಗಿರಿ, ತುಮಕೂರು, ಚಿತ್ರದುರ್ಗ, ಶಿವಮೊಗ್ಗಾ ಮೊದಲಾದ ಎಷ್ಟೋ ಸ್ಥಳಗಳಲ್ಲಿ ರಾಯರ

ಬೃಂದಾವನ ಪ್ರತಿಷ್ಠೆಯಾಗಿದೆ. ಹೊನ್ನಾಳಿಯ ಬೃಂದಾವನ ಸೇವೆಗೆ ಮುಮ್ಮಡಿ ಕೃಷ್ಣರಾಜ ಒಡೆಯರು ಹಾಕಿಕೊಟ್ಟ ತಸ್ತೀಕು ತಪ್ಪದೆ ನಡೆದು ಕೊಂಡು ಬರುತ್ತಿದೆ.

ಕರ್ಣಾಟಕಕ್ಕೇ ಕೇಂದ್ರವಾದ ಬಹುಜನ ಭರಿತವಾದ ಬೆಂಗಳೂರಂಥಾ ಕಲ್ಯಾಣನಗರಿಯಲ್ಲಿ ಶ್ರೀರಾಯರ ಬೃಂದಾವನ ಪ್ರತಿಷ್ಠೆಯಾಗಿರುವುದೂ, ತಿರುಪತಿ ಮಂತ್ರಾಲಯಗಳಂಥಾ ಕ್ಷೇತ್ರಗಳಲ್ಲಿ ನಡೆಯುವಂತೆ ಸೇವೆ ನಡೆಯು ತ್ತಿರುವುದೂ, ನವನಾಗರಿಕತೆಯು ಪರಮಾವಧಿಗೇರಿ, ನಾಸ್ತಿಕವಾದ ಸ್ವೇಚ್ಛಾ ಪ್ರವರ್ತನೆಗಳು ತಾನೇತಾನಾಗಿ ತಾಂಡವಾಡುತ್ತಿರುವ ಈ ಇಪ್ಪತ್ತನೇ ಶತಮಾನದಲ್ಲಿ ಅತ್ಯಾಶ್ಚರ್ಯವನ್ನುಂಟುಮಾಡುತ್ತಿದೆ.

ಬೃಂದಾವನ ಪ್ರತಿಷ್ಠೆಯಾಗಿರುವುದು ಆಕರ್ಷಣೀಯ ಸ್ಥಳದಲ್ಲಿ ಸಹ ಅಲ್ಲ. ಬಲಗಡೆ ನಾಲ್ಕು ಹೆಜ್ಜೆ ನಡೆದರೆ ಕ್ರೈಸ್ತ ದೇವಾಲಯ, ಎದುರಿಗೆ ನೋಡಿದರೆ ಕ್ರೈಸ್ತರ ಗೋರಿಗಳು. ಎಡಗಡೆ ನೋಡಿದರೆ ಬಡ ಮುಸಲ್ಮಾನ ರಿರುವ ಕೊಳಕು ಪ್ರದೇಶ, ಹಿಂದೆ ತಿರುಗಿದರೆ ಕಿಕ್ಕಿರಿಯುವ ತರಗುಪೇಟೆ! ಈ ಮಧ್ಯದಲ್ಲಿದೆ ರಾಯರ ದೇವಾಲಯ, ಅಗ್ರಹಾರದ ಹೆಸರು ಸೀತಾಪತಿ ಅಗ್ರಹಾರ. ಅದು ಹುಟ್ಟಿ ಕಟ್ಟಿ ಇನ್ನೂ ಮೂವತ್ತು ವರ್ಷವಾಗಿಲ್ಲ. ಗುರುವಾರ ಬಂತೆಂದರೆ, ಮೋಟಾರುಗಳಲ್ಲಿ ,ಟಾಂಗೆಗಳಲ್ಲಿ ಬೈಸಕಲ್ಲುಗಳಲ್ಲಿ ಬರುವ ಸೇವಾಜನರ ಸಂದಣಿ! ಕಾಲಿನಿಂದ ನಡೆದುಬರುವ ಸ್ತ್ರೀಪುರುಷರ ದಟ್ಟಣಿ! ವೈಷ್ಣವ ಸ್ಮಾರ್ತ ಭೇದವಿಲ್ಲ! ಬ್ರಾಹ್ಮಣ ಬ್ರಾಹ್ಮಣೇತರ ಭೇದ ವಿಲ್ಲ! ಮೊದಲಿಯಾರರು, ವೀರಶೈವರು, ವೈಶ್ಯರು, ಬ್ರಾಹ್ಮಣರು ಎಲ್ಲಾ ಕಿಕ್ಕಿರಿಯುವಂತೆ ದರ್ಶನಕ್ಕೆ ಬರುತ್ತಾರೆ. ಬೆಂಗಳೂರಂಥಾ ಸ್ಥಳದಲ್ಲಿ ಮತ ಮತ ಜಾತಿ ಯಾವ ಭಾವವನ್ನೂ ಎಣಿಸದೆ ಏಕತ್ರ ಸೇರುವ ಸ್ಥಳ ರಾಘವೇಂದ್ರ ಸ್ವಾಮಿಗಳ ದೇವಾಲಯವೆಂಭರೆ ಅತಿಶಯೋಕ್ತಿಯೆನಿಸುವುದಿಲ್ಲ. ಸೇವೆಗೆ ಬಂದವರ ಬಾಯಿನಿಂದ ನನಗೆ ಮಂತ್ರಾಕ್ಷತೆಯಾಯಿತು. ನನಗೆ ಸ್ವಪ್ನ ಸೂಚನೆಯಾಯಿತು, ನನಗೆ ನೌಕರಿಸಿಕ್ಕಿತು, ನನ್ನ ಪರಿಣಾಮ ಶೂಲೆ ವಾಸಿಯಾಯಿತು, ನನ್ನ ದುಃಖ ಪರಿಹಾರವಾಯಿತು, ನನಗೆ ಸಂತತಿಯಾ ಯಿತು, ನನಗೆ ಕಣ್ಣು ಬಂತು; ಎಂಬ ಮಾತುಗಳೇ! ಇಂತಹ ಸುದ್ದಿಗಳನ್ನು

ಕೇಳಿದರೆ, ಭಕ್ತಿಯಿಂದ ಕೈಜೋಡಿಸಿ ನಿಲ್ಲುವ ಬಡವ ಶ್ರೀಮಂತಧೀಮಂತ ಸ್ತ್ರೀಪುರುಷರುಗಳನ್ನು ನೋಡಿದರೆ, ಯಾವ ಪಾಪಾತ್ಮನ ಹೃದಯವಿದಾರಣ ವಾಗುವುದಿಲ್ಲ ? ಯಾವನ ಹೃದಯದಲ್ಲಿ ಭಕ್ತಿಯಂಕುರಿಸುವುದಿಲ್ಲ ?

ಬೆಂಗಳೂರಲ್ಲಿ ಶಾಖಾಬೃಂದಾವನ ಪ್ರತಿಷ್ಠೆಯಾದದ್ದು ಮೊನ್ನೆತಾನೇ ಶ್ರೀಮುಖ ಸಂವತ್ಸರ ಜ್ಯೇಷ್ಠ ಬಹುಳ ನವಮಿಯ ದಿನದಲ್ಲಿ. ಅಂದರೆ ಇಂಗ್ಲಿಷ್ ಸಂವತ್ಸರ ೧೯೩೩ರಲ್ಲಿ ವಿದ್ವಾನ್ ಗುಂಡಾಚಾರ್ಯರೆಂಬ ಏಕಾಂತ ಭಕ್ತರು ಮಂತ್ರಾಲಯದಿಂದ ಮೂಲಮೃತ್ತಿಕಾ ಮಂತ್ರಾಕ್ಷತಾ ಶ್ರೀ ಗಂಧ ಪ್ರಸಾದಗಳನ್ನು ಪಾದಚಾರಿಗಳಾಗಿ ಬಹು ನಿಯಮದಿಂದಲೂ, ಆಹಾರ ಶುದ್ಧಿಯಿಂದಲೂ ಕಲ್ಯಾಣ ನಗರಿಗೆ ತೆಗೆದುಕೊಂಡು ಬಂದರು. ಭಕ್ತಜನರು ಮಹೋತ್ಸವದಿಂದ ಮಹಾಪ್ರಸಾದವನ್ನು ಸ್ವಾಗತಿಸಿ, ಯೋಗ್ಯರಾದ ಋತ್ವಿಕ್ಕು ಗಳ ಸಹಾಯದಿಂದ ಪ್ರತಿಷ್ಠಿಸಿದರು. ಅಂದಿನಿಂದಲೇ ಪ್ರಾರಂಭವಾಯಿತು ಮಹಿಮೆಗೆ.

ಮಹಿಮೆಗಳು ಸಾವಿರಗಟ್ಟಲೆ ನಡೆದಿದ್ದರೂ ಒಂದೆರಡನ್ನು ಮಾದರಿ ಗಾಗಿ ನನ್ನ ವಾಕ್ಶುದ್ಧಿಗಾಗಿ ವಿವರಿಸುವೆನು.

## ವಿಜಾಪುರಪ್ರಾಂತದ ಹನುಮಂತರಾಯ

ಹನುಮಂತರಾಯನು ವೃತ್ತಿಯಿಂದ ಕುಲಕರಣಿ. ಮಧ್ಯಕಾಲದಲ್ಲಿ ಕಣ್ಣು ಕಾಣದಂತಾಯಿತು. ಮಂತ್ರಾಲಯದಲ್ಲಿ ಸೇವೆಮಾಡಿದ. ಬೆಂಗಳೂರಿಗೆ ಹೋಗೆಂದು ಸ್ವಪ್ನವಾಯಿತು ಅವನು ಆಸ್ಪತ್ರೆಗೆ ಹೋಗಿ ನೇತ್ರಚಿಕಿತ್ಸೆಮಾಡಿಸಿ ಕೊಳ್ಳಬೇಕೆಂದು ಸ್ವಪ್ನ ಸೂಚನೆಗೆ ಅರ್ಥಮಾಡಿಕೊಂಡ. ಅಂತೂ ಆಸ್ಪತ್ರೆಗೆ ಹೋದ. ಡಾಕ್ಟರು ನೋಡಿದರು. ಕಣ್ಣು ಬರುವುದಿಲ್ಲವೆಂದರು. ಆಪರೇಷನ್ ಮಾಡಿದರೂ ಫಲವಿಲ್ಲವೆಂದರು. ರಾಯನು ದಿಕ್ಕು ತೋರದೆ, ಬಡವ ಎಲ್ಲಿ ಹೋಗಲಿ, ಯಾರು ಕೈಹಿಡಿದು ನನ್ನನ್ನು ಕಾಪಾಡುವರು ಎಂದು ವ್ಯಥೆಪಟ್ಟ. ಚಿಕಿತ್ಸೆಗೆ ಬಂದಿದ್ದವರಲ್ಲಿ ಯಾರೋ ಸೀತಾಪತಿ ಅಗ್ರಹಾರದಲ್ಲಿ ರಾಘವೇಂದ್ರ ಸ್ವಾಮಿಗಳ ಬೃಂದಾವನವಿದೆ ; ಅಲ್ಲಿ ಹೋಗಿ ಸೇವೆಯಾದರೂ ಮಾಡಿರೆಂದು ಹೇಳಿದರು. ಮಠಕ್ಕೆ ಬಂದ. ತನ್ನ ಕಷ್ಟವನ್ನು ಮುಖ್ಯಾಧಿಕಾರಿಗಳಲ್ಲಿ ಹೇಳಿ ಕೊಂಡ. ಅವರು - ಒಪ್ಪತ್ತು ಮಠದಲ್ಲಿ ಪ್ರಸಾದ ತೆಗೆದುಕೊಂಡು ಸೇವಾ ಮಾಡು, ಅಂದರು. ಸ್ನಾನಕ್ಕೆ ಪರಾಧೀನ, ಊಟದ ಮನೆಗೆ ಹೋಗಲು

ಪರಾಧೀನ, ಎಲ್ಲಾ ಪರಾಧೀನ. ಹೀಗೆ ಆರು ತಿಂಗಳು ಸೇವೆಮಾಡಿದ. ಕೋಲೂರಿಕೊಂಡು ನೆಪ್ಪಿನ ಮೇಲೆ ಪ್ರದಕ್ಷಿಣೆ ಮಾಡಿದ. ಛಾಯಾ ಮಾತ್ರ ಕಾಣಿಸುವಂತಾಯಿತು. ಮಧ್ಯಾಹ್ನವೆಲ್ಲಾ ಮಠದಲ್ಲಿದ್ದು ಯಾರಾದರೂ ಕಾಸು ದುಡ್ಡು ಕೊಟ್ಟಿದ್ದನ್ನು ಡಬ್ಬಿಗೆ ಹಾಕಿ, ತೀರ್ಥ ಪಾದೋದಕಗಳಿಂದ ಕಣ್ಣನ್ನು ತೊಳೆಯುತ್ತ ಬಂದ. ಯಾರೋ ಬಂದು ಒಂದು ಮಣಿಯನ್ನು ಕೊಟ್ಟು ಪಾದೋದಕದಲ್ಲಿ ನಿತ್ಯವೂ ತೊಳೆಯುತ್ತ ಬಂದರು. ರಾಯನಿಗೆ ಒಂದು ಕಣ್ಣು ಚೆನ್ನಾಗಿ ಕಾಣಿಸಿತು. ನಿನಗೆ ಕೊಡುವುದು ಒಂದೇ ಕಣ್ಣು, ನೀನು ಊರಿಗೆ ಹೋಗು ಎಂದು ಸ್ವಪ್ನವಾಯಿತು. ರಾಯನಿಗೆ ರೈಲ್ ಛಾರ್ಜಿಗೆ ಸಹ ಗತಿಯಿರಲಿಲ್ಲ. ಮ್ಯಾನೇಜರು ಟಿಕೆಟ್ಟಿನ ದುಡ್ಡುಕೊಟ್ಟು ಪ್ರಯಾಣ ಮಾಡಿಸಿದರು.

## ಪೂರ್ಣಾಚಾರ್ಯ (೧೯೩೭-೩೮)

ಪೂರ್ಣಾಚಾರ್ಯನು ಬಂದದ್ದು ಮಿಂಟೋ ಆಸ್ಪತ್ರೆಯಲ್ಲಿ ನೇತ್ರಚಿಕಿತ್ಸೆಗಾಗಿ. ಈತನು ಜಿ. ಐ. ಪಿ. ರೈಲಿನಲ್ಲಿ ನಾಗರಿ ಸ್ಟೇಷನ್ನಿನಲ್ಲಿ ಅಸಿಸ್ಟೆಂಟ್ ಮಾಸ್ಟರು. ಡಾಕ್ಟರು ಆಪರೇಷನ್ನಿಗೆ ಅವಕಾಶವಿಲ್ಲ, ಬರೀ ಔಷಧಿ ಹಾಕುತ್ತೇನೆಂದರು. ಮೂರು ತಿಂಗಳು ಔಷಧಿ ಹಾಕಿದರು. ಗುಣ ಕಾಣಲಿಲ್ಲ. ಮಠದ ಎದುರು ಛತ್ರದಲ್ಲೇ ವಾಸವಾಗಿದ್ದಕಾರಣ ರಾಯರ ಸೇವೆಗೆ ಪ್ರಾರಂಭಿಸಿದ. ಆರು ತಿಂಗಳ ಸೇವೆಯಾಯಿತು. ಒಂದು ರಾತ್ರಿ ಸ್ವಪ್ನದಲ್ಲಿ ಬ್ರಾಹ್ಮಣ ರೂಪಿನಿಂದ ಒಬ್ಬ ಬಂದು, ನಿನ್ನ ಕಣ್ಣಿಗೆ ಚಿಕಿತ್ಸೆ ಮಾಡುತ್ತೇನೆಂದ ಹಾಗಾಯಿತು. ಕಣ್ಣಿಗೆ ಔಷಧಿ ಹಾಕಿದಂತಾಯಿತು. ಕಣ್ಣು ಸ್ವಲ್ಪ ನೊಂದಂತಾಯಿತು. ಬೆಳಗಾಗುತ್ತಲೆ ಅರ್ಚಕರಿಗೆ ಸಂಗತಿ ತಿಳಿಸಿದ. ಅರ್ಚಕರು ಹಾಗಿದ್ದರೆ ನಿಮಗೆ ರಾಯರ ಕೃಪೆಯಾಯಿತೆಂದರು. ಕಣ್ಣು ನೊಂದಂತಾಗಿದ್ದರೆ ಅದೇನಾದರೂ ಆಪರೇಷರ್ ಆಗಿರಬೇಕು, ನಿಮ್ಮ ಹಾಸಿಗೆಯನ್ನು ನೋಡೋಣವೆಂದರು. ಅಲ್ಲಿ ನೋಡಿದರೆ ದಿಂಬಿನ ಮೇಲೆ ಹಾಸಿಕೊಂಡಿದ್ದ ಟವಲಿನ ಮೇಲೆ ರಕ್ತಚಿಹ್ನೆಯಿತ್ತು. ಕೆಂಪುರಕ್ತದ ಕಲೆಯ ಮಧ್ಯೆ ಕಪ್ಪು ಗುರುತೊಂದಿತ್ತು.

ಕ್ರಮೇಣ ಪೂರ್ಣಾಚಾರ್ಯನಿಗೆ ಕಣ್ಣು ವಾಸಿಯಾಯಿತು. ಆರು ತಿಂಗಳ ಸೇವೆಯಿಂದ ಕೃತಕೃತ್ಯನಾದನು. ೧೯೩೮ನೇ ವರ್ಷದ ಆರಾಧನೆಯ ಕಾಲದಲ್ಲಿ ಬಹುವಾಗಿ ಸೇವೆಯನ್ನೊಪ್ಪಿಸಿದನು. ತನ್ನ ಜ್ಞಾಪಕಕ್ಕಿರಲೆಂದು ಬೆಳ್ಳಿಯ ದಂಡವನ್ನು ಮಾಡಿಸಿ ಸಮರ್ಪಿಸಿ ತನ್ನ ನೌಕರಿಗೆ ಸೇರಿಕೊಂಡನು.

## ಆರ್ಕಾಟ್ ಶೇಷಗಿರಿರಾಯರ ಮೊಮ್ಮಗಳು ದುರ್ದೈವಿ ನರ್ಮದಾಬಾಯಿ.

ಈ ತಾಯಿಗೆ ೨೮-೩೦ ವಯಸ್ಸು. ಬಡವನಾಗಲಿ ಬಲ್ಲಿದನಾಗಲಿ, ಬುದ್ಧಿವಂತನಾಗಲಿ ದಡ್ಡನಾಗಲಿ, ಯಾವನೊಬ್ಬನ ಆಶ್ರಯವಿದ್ದರೆ ಮಡದಿಯು ಸರ್ವಮಂಗಳೆಯೋ, ಅದಿಲ್ಲದಿದ್ದರೆ ಅವಳ ಬಾಳೇ ಗೋಳೋ, ಆ ಗೋಳಿನ ಬಾಳಿನವಳು ಈ ತಾಯಿ. ಚಿಕ್ಕಮಗಳೂರಿನಲ್ಲಿ ಮಾವನ ಮನೆ ಯಲ್ಲಿದ್ದಳು. ರಾಯರೆಂದರೆ ಬಲು ಭಕ್ತಿ. ರಾಯರ ಪಠವಿಟ್ಟುಕೊಂಡು ನಮಸ್ಕರಿಸುವುದೇ ಇವಳಿಗೆ ಮುಕ್ತಿ. ಮಾವನಿಗೆ ಬಲು ಖಾಯಿಲೆಯಾಯಿತು. ಔಷಧಗಳು ಕೆಲಸಕ್ಕೆ ಬಾರದಾದವು. ಹೆಂಗಳೆಯ ಗೋಳು ಕಂಗಳೊಡೆಯು ವಂತಾಯಿತು. ಒಪ್ಪತ್ತೂಟಕ್ಕೂ ಅಂಡಲೆಯುವ ಕಾಲಬಂತೇ ಗುರುವೇ ಎಂದು ಮೊರೆಯಿಟ್ಟಳು. ರಾತ್ರಿ ಸ್ವಪ್ನದಲ್ಲಿ ಗುರುಗಳು ಮಂತ್ರಾಕ್ಷತೆ ಉತ್ತತ್ತಿ ಕೊಟ್ಟರು. ಉತ್ತತ್ತಿಯನ್ನು ಮಾವನಿಗೆ ಅರೆದು ಕುಡಿಸೆಂದರು. ಬೆಳಗಾಗಿ ಎದ್ದರೆ ಕೈಯಲ್ಲಿ ಅದೇ ಉತ್ತತ್ತಿ ! ಮಾವನಿಗೆ ತಿಳಿಸಿದಳು. ಉತ್ತತ್ತಿಯನ್ನು ಅರೆದು ಕುಡಿಸಿದಳು, ಗುಣವಾಯಿತು. ಮಾವನಿಗೆ ಬೆಂಗಳೂರಿಗೆ ವರ್ಗವಾಯಿತು. ಬಸವನಗುಡಿಯಲ್ಲಿ ಮನೆಮಾಡಿದ ಮಾವ ಹೆಂಗಳೆಯು ನಿತ್ಯ ರಾಯರ ದರ್ಶನಕ್ಕೆ ಬಂದು ಬಾಗಿಲಲ್ಲಿ ನಿಂತೇ ನಮಿಸಿ ದಳು. ಯಾರಾದರೂ ಒಳಗೆ ಬಾರೆಂದರೆ ಹಿಂತೆಗೆದಳು. ತನ್ನನ್ನು ನೋಡಿ ಯಾರು ಏನೆನ್ನುವರೋ ಎಂಬ ಭಯ ಆ ಪ್ರಾಣಿಗೆ. ನಿವೃತ್ತ ಇಂಜಿನಿಯರು ಮ|| ಲಕ್ಷ್ಮೀನರಸಪ್ಪನವರ ಕುಟುಂಬ ಸೌ|| ತುಳಸಮ್ಮನವರು ಒಳಗೆ ಬಂದು ನಮಸ್ಕಾರಮಾಡಮ್ಮಾ ಚಿಂತೆಯಿಲ್ಲ, ಎಲ್ಲರೂ ಬರುತ್ತಾರೆ ಎಂದರು. ಅಂಗಳದ ನಲ್ಲಿಯ ಬಳಿ ನಿಂತಳು ತಾಯಿ. ಅಲ್ಲಿಂದ ಎಡಗಡೆಯ ಗೋಡೆಯ ಬಳಿ ನಿಂತು ನಮಸ್ಕರಿಸಿದಳು ಆಕೆ. ನಮಸ್ಕಾರಮಾಡುತ್ತಾ ಜಗ್ಗನೆದ್ದಳು

ವಃಹಿಳೆ. ಆಕೆಯ ಗಾಬರಿನೋಡಿ ಏನಮ್ಮಾ ಯಾಕಮ್ಮಾ ಎಂದು ಕೇಳಿದಳು ಪಕ್ಕದಲ್ಲಿ ನಿಂತಿದ್ದ ಸುವಾಸಿನಿ. ಏನೂ ಇಲ್ಲ ಇದು ನೋಡಿ ಪ್ರಸಾದವೆಂದಳು ತಾಯಿ! ಕೈಯಲ್ಲಿ ಹಸೀಮೃತ್ತಿಕೆ. ಹಳದಿ ಮಂತ್ರಾಕ್ಷತೆ! ಎಡಬಲದವರೆಲ್ಲಾ ಪಾಲಿಗೆ ಬಂದರು ಗಡಿಬಿಡಿಯಾಯಿತು. ಮಹಂತ ಮ್ಯಾನೇಜರೂ ಬಂದರು. ಪಾರುಪತ್ತೆಗಾರನೂ ಪಾರುಪತ್ಯಕ್ಕೆ ಬಂದ. ಎಲ್ಲರಿಗೂ ತಾಯಿಕೊಟ್ಟಳು ಮೃತ್ತಿಕೆ ಮಂತ್ರಾಕ್ಷತೆ! ಮ್ಯಾನೇಜರೂ ಮೃತ್ತಿಕೆ ಹಣೆಗೆ ಹಚ್ಚಿದರು. ಹೊಟ್ಟೆಗೂ ಒಂದು ಗುಳಿಗೆ ನುಂಗಿದರು. ಸಿಸಿ, ಮಿಕ್ಕ ಮಂತ್ರಾಕ್ಷತೆ ಒಂದೇ ಕಾಳು ರಾಯರು ಡಬ್ಬಿಗೂ ಸೇರಿಸಿಬಿಟ್ಟರು. ಇಷ್ಟಾದಮೇಲೆ ಪಾರುಪತ್ಯಗಾರನಿಗಿಲ್ಲವೇ, ಅವನಿಗೂ ಸಿಕ್ಕಿತು ಎರಡಕ್ಷತೆ ಕಾಳು, ಒಂದು ಗುಳಿಗೆ ಮೃತ್ತಿಕೆ.

ಈಗ ಯಾರಿಗೆ ನಮಸ್ಕಾರ ಮಾಡೋಣ! ಯಾರು ದೊಡ್ಡವರೆನ್ನೋಣ! ರಾಘವೇಂದ್ರರಿಗೆ ಮಾಡೋಣವೋ, ಆ ತಾಯಿಗೆ ಮಾಡೋಣವೋ ಇಲ್ಲದಿದ್ದರೆ ಆಕೆಗೆ ಪ್ರಸಾದದೊರೆತ ಸ್ಥಳಕ್ಕೆ ಹೊದ್ದಿಸಿರುವ ಕಲ್ಲಿಗೆ ಮಾಡೋಣವೋ? ಇದೆಂದರೆ ಮಹಿಮೆ, ಇವರೆಂದರೆ ಗುರುಗಳು, ದೇವರಿದ್ದರೂ ಹೀಗೇ ಇರಬೇಕು, ಬರಬೇಕು. ಹಾಗಿಲ್ಲದಿದ್ದರೆ–ಇರದಿದ್ದರೆ–ನಮ್ಮನೊಲ್ಲದ ಹಯವದನ ಎಲ್ಲಿದ್ದರೇನು ?

## ಕಾವಳಿ ರಾಮರಾಯರು (23–1–41)

ಇವರು ನಿವೃತ್ತ ಸೂಪರಿಂಟೆಂಡಿಂಗ್ ಇಂಜಿನಿಯರ್ ಸಿ. ಮಾಧವರಾಯರ ಮಕ್ಕಳು. ಒಂದು ಬಗೆಯ ವಿಚಿತ್ರ ಹೊಟ್ಟೆಶೂಲೆ, ಪಾದೋದಕ ಸೇವನೆಯಿಂದ ಗುಣವಾಯಿತು. ಇವರ ತಮ್ಮನಿಗೆ ನ್ಯೂಮೋನಿಯಾ ಆಗಿದ್ದು ಅದೂ ರಾಯರ ಅನುಗ್ರಹದಿಂದ ಗುಣವಾಯಿತು ರಾಮರಾಯರು ನಿತ್ಯವೂ ಗುರುಗಳ ದರ್ಶನಕ್ಕೆ ಬರುತ್ತಾರೆ. ಪುಷ್ಯ ಬಹುಳ ದಶಮಿ ರಾತ್ರೆ ಮಲಗುವಾಗ ಇಲ್ಲಸ್ಟ್ರೇಟೆಡ್ ವೀಕ್ಲಿ ಓದುತ್ತಾ ಮಲಗಿದರು. ಬೆಳಗಿನ ಝಾವ ಸ್ವಪ್ನ! ಏನಯ್ಯಾ ಸರ್ವಸೇವೆ ಮಾಡಿಸುವೆನೆಂದು ನೀನೂ ಮಾಡಿದಿ ಹರಕೆ, ನಿನ್ನ ತಮ್ಮನೂ ಮಾಡಿದ, ಎಲ್ಲಿ ? ಚಿಂತೆಯಿಲ್ಲ, ತೆಗೆದುಕೋ ಎಂದು ಪ್ರಸಾದವಿತ್ತರು ಗುರುಗಳು! ರಾಯರಿಗೆ ಎಚ್ಚರವಾಯಿತು. ಗಡಿಯಾರ

ನೋಡಿದರು. 5.5 ತೋರಿಸಿತು ಗಡಿಯಾರ. ಪಕ್ಕದಲ್ಲಿ ನೋಡಿದರು. ವರ್ತಮಾನಪತ್ರದ ಮೇಲಿದ್ದ ಆರು ಮೊಳದ ಶೇಷವಸ್ತ್ರ! ಬೆರಗಾದರು! ತಂದೆಗೂ ತೋರಿಸಿದರು ಅದೇ ಶೇಷವಸ್ತ್ರ! ಹಿಂದೆ ಸೇವೆಮಾಡಿಸಿದಾಗ ಮಠದಿಂದ ಕೊಟ್ಟ ಆಶೀರ್ವಾದ ವಸ್ತ್ರ ತಾನೇ ಇಲ್ಲಿಗೆ ಬಂತೇ ಎಂದು ದೇವರ ಮನೆಯಲ್ಲಿ ನೋಡಿದರು. ಅದು ಅಲ್ಲೇ! ಇದು ಮಾತ್ರ ಇಲ್ಲೇ! ಮಠ ದಲ್ಲಿ ಕೊಡುವ ವಸ್ತ್ರದ ಬಣ್ಣ ಹೊಸದಾದ್ದರಿಂದ ಗಟ್ಟಿ! ಇದಾದರೋ ಧರಿಸಿದ್ದು, ಬಣ್ಣ ಕಮ್ಮಿ! ಪ್ರಸಾದ ವಸ್ತ್ರ! ಏಕಾದಶೀ ದಿನ ಮಠದಲ್ಲಿ ತಿಳಿ ಯಿತು ಸುದ್ದಿ! ಅರ್ಚಕರೂ ಪಾರುಪತ್ತೆಗಾರರೂ ರಾಮರಾಯರ ಮನೆಗೆ ಹೋಗಿ ನೋಡಿದರು. ಬೆರಗಾದರು, ಮೇಜದ ಮೇಲಿದ್ದ ಒಂದು ಕಾಳು ಮಂತ್ರಾಕ್ಷತೆಯೂ ಸಿಕ್ಕಿತು. ಅದು ಮ್ಯಾನೇಜರ್ ಡಬ್ಬಿಯನ್ನೂ ಸೇರಿತು.

ಮುನ್ನೂರು ವರ್ಷಗಳಷ್ಟು ಕಾಲದಿಂದ ನಡೆದು ಬರುತ್ತಿರುವ ಇಂಥಾ ಮಹಿಮೆಗಳನ್ನೇ ಶೇಖರಿಸಿ ಬರೆದಿಟ್ಟಿರುವವರ್ಯಾರು? ಇಲ್ಲೇ ಸಾವಿರ ದಲ್ಲೊಂದೆರಡು ಮಹಿಮೆ ಹೀಗಿದ್ದರೆ, ಮೂಲ ಮಂತ್ರಾಲಯದಲ್ಲಿ ಎಷ್ಟು ನಡೆದಿರಬೇಕು, ನಡೆಯುತ್ತಿರಬೇಕು?

ರಾಜಸ ತಾಮಸ ಸಿದ್ಧಿಗಳನ್ನು ಪಡೆದು ಮಹಿಮಾ ಪ್ರದರ್ಶನಮಾಡಿ ದವರೂ ಮಾಡುತ್ತಿರುವವರೂ ಅನೇಕರಿದ್ದಾರೆ ಈ ಬಗೆಯ ಸಿದ್ಧಿಗಳಿಂದ ಸಿದ್ಧ ಪುರುಷರೆನಿಸಿದವರಿಗಾಗಲಿ, ಸಾಧಕರಿಗಾಗಲಿ ಪರಿಣಾಮದಲ್ಲಿ ಶ್ರೇಯ ಸ್ಸಾಗುವುದಿಲ್ಲವೆಂಬದನ್ನು ಗ್ರಂಥಗಳು ಸಾರುತ್ತಿವೆ, ಅನುಭವದಿಂದ ಕಂಡು ಬರುತ್ತಿದೆ. ಕ್ಷುದ್ರಸಿದ್ಧಿಗಳು ಬಹುಕಾಲ ನಿಲ್ಲುವವಲ್ಲ.

ಮಹಾನುಭಾವರಾದ ರಾಘವೇಂದ್ರ ಸ್ವಾಮಿಗಳಾದರೋ ಹಿಂದಿನ ಜನ್ಮಗಳಲ್ಲೆಲ್ಲಾ ಪ್ರಹ್ಲಾದನಾಗಿ ಬಾಹ್ಲೀಕನಾಗಿ ವ್ಯಾಸರಾಯರಾಗಿ, ಮಾಡಿರುವ ಭಗವದುಪಾಸನೆಯು ಅಪಾರವಾದುದು. ಸಂಪಾದಿಸಿರುವ ಪುಣ್ಯ ಅಗಾಧವಾದುದು. ಸಂಪಾದಿಸಿದ ಪುಣ್ಯವನ್ನು ಉಚಿತ ವಾಗಿ ಕಲಿಯುಗದಲ್ಲಿ ಜನ್ಮತಾಳಿಬರುವ ಭಕ್ತಜನರ ಉದ್ಧಾರಕ್ಕೆ ವಿನಿಯೋಗಮಾಡುವೆವೆಂದು ಏಳುನೂರು ವರ್ಷ ಬೃಂದಾವನದಲ್ಲಿರಲು ಸಂಕಲ್ಪಮಾಡಿರುವವರು. ಇನ್ನು ನಾಲ್ಕುನೂರು ವರ್ಷಗಳವರೆಗೆ

ಬೃಂದಾವನದಲ್ಲಿ ಮಹಿಮೆ ದಿನದಿನಕ್ಕೆ ಹೆಚ್ಚುತ್ತಲೇ ಬರುವುದು. ಬಲು ಜನರು ಭಕ್ತರಾಗುವರು, ಉದ್ಧಾರವಾಗುವರು.

## ಮೂಗೂರು ವೃತ್ತಾಂತ.

ಒಂದೇ ವರ್ಷದ ಹಿಂದೆ ಮೈಸೂರು ಜಿಲ್ಲೆಗೆ ಸೇರಿದ ಮೂಗೂರಲ್ಲಿ ರಾಯರು ವಿಚಿತ್ರ ಮಹಿಮಾ ಪ್ರದರ್ಶನ ಮಾಡುತ್ತಿರುವರೆಂಬ ವಾರ್ತೆ ಬರಲು ಪ್ರಾರಂಭವಾಯಿತು. ಅವರು ಹೋಗಿದ್ದರು, ಇವರು ಹೋಗಿದ್ದರು, ಅರಮನೆಯ ಸಂಗೀತ ವಿದ್ವನ್ಮಣಿಗಳೆಲ್ಲಾ ಹೋಗಿದ್ದರು, ಎಂಬ ತರಂಗ ತರಂಗ ವಾರ್ತೆಗಳನ್ನು ಕೇಳಿ ನನಗೆ ಆಶ್ಚರ್ಯವಾಯಿತು ; ಸಂಶಯ ವಾಯಿತು ; ನೋಡೋಣ, ಕಾಲಬರಲಿ, ಎನ್ನುತ್ತಿದ್ದೆ. ಮೊನ್ನೆ ಜೂನ್ ೨೧ನೇ ತಾರೀಖು ಪ್ರಾತಃಕಾಲ ಆಸ್ಥಾನ ವಿದ್ವಾನ್ ಸೋಸಲೆ ರಾಮದಾಸರು ಕೃಪೆಮಾಡಿ ನಮ್ಮ ಮನೆಗೆ ಬಂದರು ಆ ಈ ಮಾತನಾಡುತ್ತಾ ಮೂಗೂರು ಸಮಾಚಾರವೇನೆಂದು ಕೇಳಿದೆ ಮೂಗೂರು ಮಾತೆಂದ ಕೂಡಲೇ ಅವರ ಪ್ರಕೃತಿ ಬದಲಾಯಿತು. ನಂಬುವೆಯಾದರೆ ಹೇಳುವೆನೆಂದರು. ನಂಬಿಸಿದ ವಿನಾ ನಾನು ನಂಬುವವನಲ್ಲವೆಂದೆನು ನಾನು. ಅಲ್ಲಿನ ಕಥೆಯಾದರೋ ಹೀಗಿದೆ :—

ಪ ॥ ಕೃಷ್ಣಮೂರ್ತಿಯೆಂಬುವರು ಮೂಗೂರಲ್ಲಿರುವ ರೇಷ್ಮೆ ಇಲಾಖೆಯ ಇನ್ಸ್‌ಪೆಕ್ಟರು. ಬಿ.ಎ., ಪ್ಯಾಸ್ ಮಾಡಿದವರು. ವೇಣುಗಾನದಲ್ಲಿ ನಿಪುಣರು. ಮೇಲಾಗಿ ಶ್ರೀವೈಷ್ಣವ ಬ್ರಾಹ್ಮಣರು. ಶ್ರೀವೈಷ್ಣವರಲ್ಲಿ ಶಿಷ್ಟಸಂಪ್ರದಾಯಸ್ಥರು ನಲ್ಲಿಯ ನೀರನ್ನುಪಯೋಗಿಸುವುದಿಲ್ಲ. ಭಾಷ್ಯಕಾರರು ಕೊಂಡಾಡಿದ ದಿವ್ಯದೇಶಗಳ ಭಗವನ್ಮೂರ್ತಿಗಳನ್ನು ಸಂದರ್ಶಿಸುವರಲ್ಲದೆ ಅನ್ಯಕ್ಷೇತ್ರಗಳ ಯಾತ್ರೆ ಮಾಡುವುದಿಲ್ಲ. ಅನ್ಯ ಗುರುಗಳಿಗೆ ಮನಸಾವಂದಿಸುವುದೂ ಇಲ್ಲ. ಅವರ ಗುರುದೇವತಾ ಭಕ್ತಿ ಅಷ್ಟು ಬಲಿಷ್ಠವಾದದ್ದು.

ಇಂತಹ ಪೂರ್ವಾಚಾರವಿದ್ದರೂ ಕೃಷ್ಣಮೂರ್ತಿಗಳು ಉದಾರಮನಸ್ಕರು. ಇವರ ಬಳಿ ಶಿಕ್ಷಣಕ್ಕಾಗಿ ಅಗರದ ನರಸಿಂಹಮೂರ್ತಿಯೆಂಬ ಬಾಲಕನೊಬ್ಬನಿದ್ದು, ಶಿಕ್ಷಣಪಡೆದು ಈಗ ಅಗರದಲ್ಲೇ ಒಂದು ಉದ್ಯೋಗದಲ್ಲಿದ್ದಾನೆ. ಈ ಬಾಲಕನಾದರೊ ಮಾಧ್ವ ಬ್ರಾಹ್ಮಣ. ಇವನಿಗೆ ಸಂಸ್ಕೃತದ ಗಂಧವೇ

ತಿಳಿಯದು. ಅಷ್ಟಿಷ್ಟು ಇಂಗ್ಲೀಷ್ ಅಭ್ಯಾಸ, ಅದೂ ಕಾಗದಗಳ ಮೇಲೆ ವಿಳಾಸ ಬರೆಯುವವುಟ್ಟಿಗೆ. ಹೆಚ್ಚಿನ ವಿದ್ಯಾವಂತನಾಗಿದ್ದರೆ ರೇಷ್ಮೆಗೂಡು ಸಾಕುವುದನ್ನು ಕಲಿಯಲು ಬರುತ್ತಿದ್ದನೆ ?

ಮನೆಯ ಮಗನಂತಿದ್ದ ಈ ಬಾಲಕನು ರಾತ್ರೆ ನಿದ್ರೆಯ ಕಾಲದಲ್ಲಿ ಕನವರಿಸಲಾರಂಭಿಸಿದನಂತೆ ! ಆ ಕನವರಿಕೆ ವಿಪರೀತಕ್ಕಿಟ್ಟಿತಂತೆ ! ಮಾತಾಡಿದ ಸಂಗತಿಗಳು ಬಲು ದೊಡ್ಡ ತರಗತಿಯವುಗಳಾಗಿದ್ದವಂತೆ ! ಮಾತು ಸಂಸ್ಕೃತದಲ್ಲಿ, ತಮಿಳಿನಲ್ಲಿ, ಇಂಗ್ಲೀಷಿನಲ್ಲಿ, ನಾನಾಭಾಷೆಗಳಲ್ಲಂತೆ ! ಕೃಷ್ಣಮೂರ್ತಿಯವರು ಇದು ನರಸಿಂಹಮೂರ್ತಿಯ ಯೋಗ್ಯತೆಗೆ ಮೀರಿದ ಭಾಷೆಭಾಷಣಗಳೆಂದು ನಿರ್ಣಯಿಸಿದರಂತೆ ! ಅನುಮಾನದಿಂದ ಪ್ರತಿ ಆವೇಶ (Trans) ಸಮಯದಲ್ಲೂ ಪರೀಕ್ಷಿಸಿದರಂತೆ !

ಆವೇಶದಲ್ಲಿ "ನಾನು ರಾಘವೇಂದ್ರಸ್ವಾಮಿ, ಬಡಸನ್ಯಾಸಿ, ಶೇಷಚಂದ್ರಿಕಾರಾಯರ ಬಳಿಯಿದ್ದೇನೆ. ಕಾವೇರೀ ಕಪಿಲಾ ಸ್ಫಟಿಕ ಸರೋವರಗಳ ತ್ರಿವೇಣೀಸಂಗಮದಲ್ಲಿದ್ದೇನೆ. ಕೃಷ್ಣಮೂರ್ತಿಯೆಂಬ ಶ್ರೀವೈಷ್ಣವ ಕುಟುಂಬಕ್ಕೆ ಪ್ರಸನ್ನನಾಗಿದ್ದೇನೆ. ಗಾನಕೇಳಲು ಬಂದಿದ್ದೇನೆ. ಪ್ರತಿ ಗುರುವಾರ ನನ್ನ ಸೇವೆಮಾಡಿ, ಭಜನೆಮಾಡಿ, ಗಾನಮಾಡಿ" ಎಂಬ ಮಾತುಗಳೇ ಬಲವಾದವು.

ಬಲು ಪರೀಕ್ಷೆಮಾಡಿ ಕೃಷ್ಣಮೂರ್ತಿಯವರು ಗುರುವಾರ ಭಜನೆಗಾರಂಭಿಸಿದರು. ಅನೇಕ ಸೂಚನೆಗಳಿಂದ ಅನೇಕ ಅನುಭವಗಳಿಂದ ರಾಘವೇಂದ್ರಸ್ವಾಮಿಗಳೇ ಅನುಗ್ರಹಿಸಿರುವರೆಂದು ನಿಶ್ಚಯಿಸಿದರು. ಜನಸಂದಣಿ ಬಲವಾಯಿತು, ಬಂದವರು ಪರೀಕ್ಷಿಸಿದರು. ಬೇಡಿಕೆಗಳನ್ನು ಬೇಡಿದರು, ಉತ್ತರಗಳನ್ನು ಪಡೆದರು. ವೇದವೇತ್ತರು ವೇದಪಾರಾಯಣಮಾಡಿದಾಗ ತಪ್ಪಿದ್ದುದನ್ನು ತಿದ್ದಿಸಿಕೊಂಡರು. ಗಾಯನ ಕೀರ್ತನ ಪರೀಕ್ಷೆಗಳು ನಡೆದವು. ಒಂದೊಂದೂ ಆಶ್ಚರ್ಯ, ಅದ್ಭುತ, ಎಂದು ಬಂದವರೆಲ್ಲರ ಅಭಿಪ್ರಾಯವಾಯಿತು.

ಈ ವಿವರವನ್ನು ಕೃಷ್ಣಮೂರ್ತಿಯವರು ಪುಸ್ತಕರೂಪದಲ್ಲಿ ಮುದ್ರಣಮಾಡಿಸುತ್ತಿರುವುದರಿಂದ ನಾನಿಲ್ಲಿ ಏನನ್ನೂ ಬರೆಯುವುದಿಲ್ಲ. ಸ್ವಾನುಭವಮಾತ್ರ ತಿಳಿಸುತ್ತೇನೆ.

ನಾನು ಮೂಗೂರಿಗೆ ಜ್ಯೇಷ್ಠ ಶುದ್ಧ ಏಕಾದಶೀ ಗುರುವಾರ (25-6-42) ಹೋದೆ. ಬರಹೇಳಿದ್ದ ನೋಸಲೆ ರಾಮದಾಸರೂ ಬಂದರು. ಅಪರಿಚಿತ ಕೃಷ್ಣಮೂರ್ತಿಯವರ ಪರಿಚಯವಾಯಿತು ಅವರು ನನ್ನನ್ನು ಕರೆತರಲು ಮೈಸೂರಿಗೆ ಒಬ್ಬರನ್ನು ಕಳುಹಿಸಿದ್ದೆನೆಂದರು. ರಾತ್ರಿ ಪದ್ಮನಾಭ ರಾಯರ ಗಾನವಾಯಿತು. ರಾಮದಾಸರ ಖಂಜರಿ, ಮೂಗಯ್ಯನವರ ಮೃದಂಗ, ವೆಂಕಟಸುಬ್ಬಯ್ಯನವರ ಪಿಟೀಲು, ಎಲ್ಲವೂ ಒಂದಕ್ಕೊಂದು ಗಂಧಕ್ಕಿಂತ ಪರಿಮಳವೆನ್ನುವಂತಿತ್ತು. ನನ್ನನ್ನು ಕೀರ್ತನೆ ಮಾಡೆಂದರು. ಗಂಟಲು ಸರಿಯಿಲ್ಲದಿದ್ದುದರಿಂದ ಪ್ರವಚನ ಮಾಡಿದೆ. ನೂರಾರು ಜನ ಸೇರಿದ್ದರು. ಪರಸ್ಥಳಗಳಿಂದ ಬಂದಿದ್ದ ೨೦-೩೦ ಜನರು ಕೃಷ್ಣಮೂರ್ತಿಗಳ ಅತಿಥಿಗಳಾದರು. ಅಲ್ಲೇ ಊಟ, ಅಲ್ಲೇ ನಿದ್ರೆ, ಎಲ್ಲಾ ಗದ್ದಲ, ಆ ರಾತ್ರಿ ಆವೇಶ ಬರಲಿಲ್ಲ. ನನಗೆ ನಿದ್ರೆಯೂ ಬರಲಿಲ್ಲ. ಬೆಳಗಾಯಿತು. ನನಗೆ ಪ್ರಯಾಣಕ್ಕೆ ಅಪ್ಪಣೆ ಕೊಡಿರೆಂದೆ. ಕೃಷ್ಣಮೂರ್ತಿಯವರು ಗುರುಗಳನ್ನು ಕೇಳಿ, ಅಂದರು. ಆಗಿದ್ದ ನನ್ನ ನಿರಾಶೆ, ನನ್ನ ಮನಸ್ಸಿನ ಸ್ಥಿತಿ, ನನಗೆ ಹೇಳುವುದಕ್ಕೆ ಶಬ್ದಸಿಗುವುದಿಲ್ಲ, ಬರೆಯುವುದಕ್ಕಂತೂ ಬರುವುದೇ ಇಲ್ಲ. ನಾನಿದ್ದ ಕಡೆ ಗುರುಗಳು ಬರುವುದಿಲ್ಲ, ದೇವರೂ ಇರುವುದಿಲ್ಲ, ನನಗೆ ಕೆಲಸ ವಿದೆ ಅಪ್ಪಣೆಕೊಡಿರಿ ಎಂದೆ. ಕೃಷ್ಣಮೂರ್ತಿಯವರು "ನಿರಾಶರಾಗಬೇಡಿ ಶುಕ್ರವಾರವೂ ಆವೇಶಬರುವುದುಂಟು, ನಮ್ಮ ಸಾಹೇಬರೂ ನಿರಾಶರಾಗಿದ್ದು ಅನಂತರ ತೃಪ್ತಿಯಿಂದ ಪ್ರಯಾಣಮಾಡಿದರು. ಇವತ್ತು ಒಂದು ದಿನವಿದ್ದು ಹೋಗಿ" ಎಂದರು. ಆ ರಾತ್ರಿ ವೇಣುಗಾನವಾಯಿತು. ಅದೇ ಪಕ್ಕಮೇಳ. ಸ್ವರ್ಗೀಯ ಗಾನಕೇಳಿದಂತಾಯಿತು. ಆ ರಾತ್ರಿಯೂ ನಿದ್ರೆ ಬರಲಿಲ್ಲ. ನರಸಿಂಹಮೂರ್ತಿಯೂ ಅವನ ಸ್ನೇಹಿತರೂ ಸಾಲಾಗಿ ಒಂದು ಕೊಠಡಿಯಲ್ಲಿ ಮಲಗಿದ್ದರು. 12½ ಘಂಟೆಗೆ ನರಸಿಂಹಮೂರ್ತಿಯ ದೀರ್ಘಶ್ವಾಸಕ್ಕಾರಂಭ ವಾಯಿತು. ಕೃಷ್ಣಮೂರ್ತಿಯವರನ್ನು ಅವರ ತಾಯಿ ಎಬ್ಬಿಸಿದರು. ಅವರು ನನ್ನ ಮಂಚದ ಬಳಿ ನಿಂತು ತಟ್ಟಿ ದಾಸರೇ, ಏಳಿ ನಿಮ್ಮ ಪುಣ್ಯ ಅಂದರು. ಎದ್ದು ಕುಳಿತೆ. ನರಸಿಂಹಮೂರ್ತಿಯ ಪಕ್ಕದಲ್ಲಿ ಮಲಗಿದ್ದ ಅವನ ಸ್ನೇಹಿತರೆಲ್ಲಾ ಸ್ಥಳಬಿಟ್ಟು ಹೊರಗೆಬಂದರು. ಶ್ವಾಸವಡಗಿ ಭಾಷಣಕ್ಕಾರಂಭವಾಯಿತು. ಸಂಸ್ಕೃತವೂ ಅಲ್ಲ ಪ್ರಾಕೃತವೂ ಅಲ್ಲ ಬೃಜಭಾಷೆ ಮೊದಲೇ ಅಲ್ಲ.

ಒಂದೂವರೆ ಘಂಟೆ ಆವೇಶದ ಮಾತಿನಲ್ಲಿ ಧರ್ಮದ ಉಪದೇಶವಿತ್ತು, ಒಂದು ಹಾಡಿತ್ತು. ಶೇಷಚಂದ್ರಿಕಾಚಾರ್ಯರ ಮಾತು, ತ್ರಿವೇಣೀ ಸಂಗಮದ ಮಾತು, ತಾನು ಬಡಸನ್ಯಾಸಿ, ಎಂಬ ಮಾತು ರಾಮಾಯಣ ಭಾರತಗಳ ಮಾತು, ಕೃಷ್ಣಮೂರ್ತಿಯವರಿಗೆ ಪ್ರಸನ್ನರಾಗಿ ಮೂಗೂರಿಗೆ ಬಂದಿರುವೆನೆಂಬ ಮಾತು ಎಲ್ಲಾ ಇತ್ತು, ಎಲ್ಲಾ ಬಂತು. ಕೃಷ್ಣಮೂರ್ತಿಯವರು ದೂರದಲ್ಲಿ ನಿಂತು "ಮಹಾಸ್ವಾಮಿ, ದರ್ಶನಕ್ಕೆ ಪದ್ಮನಾಭರಾಯರು ಬಂದಿದ್ದಾರೆ, ರಾಮ ದಾಸರು ಬಂದಿದ್ದಾರ, ಬೇಲೂರು ಕೇಶವದಾಸರು ಬಂದಿದ್ದಾರೆ" ಎಂದು ತಿಳಿಸಿದರು. ಪದ್ಮನಾಭರಾಯರಿಗೆ ಕರೆಬಂತು. ಅವರು ನಮ್ರರಾಗಿ ಅವರ ಮಾತಾಡಿಕೊಂಡರು. ಕೈಚಾಚಿ ಅನುಗ್ರಹೋಸ್ತು ಎಂದು ಮಂತ್ರಾಕ್ಷತೆ ಯನ್ನು ಕೊಟ್ಟರು ಗುರುಗಳು. ಅದನ್ನು ನೋಡಿ ನನಗೆ ಅಚ್ಚರಿ ಯಾಯಿತು. ಅನಂತರ ತಾಳಬ್ರಹ್ಮ! ದಾಸ್! ಎಂದರು. ರಾಮದಾಸರು ಪ್ರಣಾಮಮಾಡಿ ಕಣ್ಣೀರಿನಿಂದಲೇ ಮಹಾಸ್ವಾಮಿ ಎಂದರು. "ನಿನ್ನ ವಿಪತ್ತು ನಿವಾರಣೆಯಾಯಿತೋ, ತಿರುಪತಿ ಯಾತ್ರೆಯಾಯಿತೋ, ಮಾತಾಪಿತೃಗಳ ದರ್ಶನವಾಯಿತೋ, ತುಲಸೀ ಮಣಿಯನ್ನು ಅಣುಮಂತ್ರಾಲಯದಲ್ಲಿ ಒಪ್ಪಿಸುವಿಯೋ, ತಾಳಬ್ರಹ್ಮ, ದಾಸ್" ಎಂದರು. "ಆಯಿತು, ಸಂತೋಷ ವಾಯಿತು. ಚರಣಾನುಗ್ರಹದಿಂದ ತಿರುಪತಿ ಯಾತ್ರೆಯಾಯಿತು. ಮಾತಾ ಪಿತೃಗಳ ದರ್ಶನವಾಯಿತು. ತುಲಸೀ ಮಣಿಯನ್ನು ಒಪ್ಪಿಸುವೆನು" ಎಂದು ಮೊದಲಾಗಿ ರಾಮದಾಸರೆಂದರು. ಆವಿಷ್ಟ ಸ್ವಾಮಿಗಳು ಕೈಚಾಚಿದರು. ದಾಸರು ಕೈಯೊಡ್ಡಿದರು. ಬೆರಳುಗಳಿಂದ ಉದುರಿದವು ಮಂತ್ರಾಕ್ಷತೆಯ ಕಾಳುಗಳು. ದಾಸರು ಹಿಂದಿರುಗಿದರು ನನ್ನ ಪಕ್ಕದಲ್ಲಿ ಕುಳಿತರು. ನಾನು ನಿರಾಶನಾದೆ. ಇಷ್ಟನ್ನಾದರೂ ನೋಡುವ ಭಾಗ್ಯ ದೊರೆಯಿತೆಂದು ಅಂದು ಕೊಂಡೆ. ಆದರೂ ಮನಸ್ಸಿಗೆ ಅವಮಾನ ನಿರಾಶೆಗಳು ತಪ್ಪಲಿಲ್ಲ. ಆವಿಷ್ಟ ಸ್ವಾಮಿಗಳು, ಕೃಷ್ಣಾ ಎಂದರು. ಕೃಷ್ಣಮೂರ್ತಿಯವರು ಮಹಾಸ್ವಾಮಿ ಎಂದು ಎದುರಿನಲ್ಲಿ ನಿಂತರು. "ಗುರುಭಕ್ತದಾಸ ಏಕೋಽವರ್ತತೆ, ತಮಾ ನಯ," ಎಂಬ ಉದ್ಗಾರ ಹೊರಟಿತು. ಈ ಕರೆಗೆ ದಾಸ ಶಬ್ದದವರು ಮತ್ತೊಬ್ಬರಿರಲಿಲ್ಲ. ನನ್ನ ಹೃದಯ ಬಡಿಯುವುದಕ್ಕಾರಂಭ ವಾಯಿತು. ಕೃಷ್ಣಮೂರ್ತಿಯವರು ಗುರುಗಳು ಕರೆಯುತ್ತಾರೆ ನಡೆಯಿರಿ,

ನಡೆಯಿರಿ, ಎಂದು ನನ್ನ ಬೆನ್ನು ತಟ್ಟಿದರು. ಆ ಶಬ್ದಗಳು ಒಂದೂ ನನ್ನದಲ್ಲ ವೆಂದುಕೊಳ್ಳುತ್ತಲೇ ಪ್ರಣಾಮಮಾಡಿದೆ. ಕೈಜೋಡಿಸಿ ನಿಂತುಕೊಂಡೆ. ಗ್ರಂಥರಚನಾ ಕಾರ್ಯದಲ್ಲಿ ನಾನು ಮಾಡಿಕೊಂಡಿದ್ದ ಯೋಚನೆಗಳೇ ಗುರುಗಳ ಬಾಯಿಂದ ಬಂದವು. ಗ್ರಂಥರಚನೆಮಾಡು, ಧರ್ಮಬೋಧೆಮಾಡು, ಪ್ರಚಾರಮಾಡು, ಸಂಕೀರ್ತನಮಾಡು, ಗೀತೆಯ ಹಾಡೊಂದನ್ನು ಹಾಡು, ಎಂದರು ಗುರುಗಳು. ನಾನು ಗೀತೆಯ ಪ್ರಥಮ ಷಟ್ಕದ ಹಾಡೊಂದನ್ನು ಹಾಡಿದೆ. ಮತ್ತೆ ಕೆಲವು ಉಪದೇಶ ವಾಕ್ಯಗಳ ಉದ್ಗಾರವಾಯಿತು. ಅನುಗ್ರಹೋಸ್ತಿ ಎಂದರು. ನಾನು ಮಂತ್ರಾಕ್ಷತೆ ಕೊಡಲಿಲ್ಲವಲ್ಲಾ ಎಂದು ಅಂದುಕೊಂಡೆ ಮತ್ತೆ "ಅಪೇಕ್ಷಿತ ಪ್ರದಾತಾನ್ಯೋ ರಾಘವೇಂದ್ರಾನ್ನ ವಿದ್ಯತೆ" ಎಂದು ಕೈಮುಗಿದೆ. ಸ್ವಾಮಿಗಳು ಕೈಚಾಚಿದರು. ಕೆಳಗೆ ಕೈಯೊಡ್ಡಿದೆ. ನನ್ನ ಕೈಮುಟ್ಟಿ ಮಂತ್ರಾಕ್ಷತೆಯನ್ನು ಕೊಟ್ಟರು ಗುರುಗಳು. ನನ್ನ ಮನಸ್ಸು ತುಂಬಿತುಳುಕಿತು ಜನ್ಮತಾಳಿ ಇಷ್ಟುದಿನಕ್ಕೆ ಇಂಥಾ ಆನಂದ ದೊರೆಯಿ ತೆಂದುಕೊಂಡೆ. ಮನಸ್ಸಿನೊಳಗಿನ ಕಳ್ಳಮನಸ್ಸಿನಲ್ಲಿ ಈ ಅಯ್ಯಂಗಾರ್ಯನ ಪುಣ್ಯ ನನಗಿಲ್ಲವೇ, ನಾನು ಮಾಧ್ವನಲ್ಲವೇ, ನಾನೇನು ಮಾಡಿದ್ದೆ ರಾಯರಿಗೆ, ಅಯ್ಯಂಗಾರ್ಯನ ಮನೆಗೆ ಬರುವುದರ ಬದಲು ನನ್ನ ಮನೆಗೇ ಬಂದಿದ್ದರೆ ನಾನು ಬೇಡವೆನ್ನುತ್ತಿದ್ದೆನೇ ಎಂದುಕೊಂಡೆ. ಹೂ, ಹೋಗಲಿ ಎಂದು ನನಗೆ ನಾನೇ ನ್ಯಾಯಾಧೀಶನಾಗಿ ಕ್ಷಮಿಸಿಕೊಂಡೆ. ಕೃಷ್ಣಮೂರ್ತಿಯವರ ಗುಣವೊಂದೂ ನನ್ನಲ್ಲಿ ಇಲ್ಲದಿರುವಾಗ ಇಷ್ಟೇ ನನ್ನ ಯೋಗ್ಯತೆಗೆ ಹೆಚ್ಚಾಯಿ ತೆಂದೂ ನನಗೆ ನಾನೇ ವಿವೇಕ ಹೇಳಿಕೊಂಡೆ.

ರಾಯರ ಆವೇಶ ಇಳಿಯಿತು. ನರಸಿಂಹಮೂರ್ತಿ ಗೊರಕೆಹಾಕುತ್ತ ಗಾಢನಿದ್ರೆಮಾಡುತ್ತಿರುವುದು ಕಾಣಿಸಿತು. ಮನೆತುಂಬ ಗದ್ದಲವಾಗಿದ್ದರೂ ಅದರ ಅರಿವೇ ಅವನಿಗಿಲ್ಲ. ನನಗೆ ನಿದ್ರೆ ಬರಲಿಲ್ಲ. ಬೆಳಗಾಯಿತು. ನರಸಿಂಹಮೂರ್ತಿಯಂಥಾ ಹುಡುಗನ ಶರೀರವನ್ನು ವಾಹನವಾಗಿ ಮಾಡಿ ಕೊಂಡು ರಾಘವೇಂದ್ರಸ್ವಾಮಿಗಳು ಇಂಥಾ ಮಹಿಮಾ ಪ್ರದರ್ಶನ ಮಾಡು ತ್ತಿರುವರಲ್ಲಾ ಎಂಬ ಆಶ್ಚರ್ಯವಾಯಿತು.

ಎಲ್ಲರೂ ಎದ್ದು ಶುದ್ಧರಾಗಿ ಬಂದರು. ನರಸಿಂಹಮೂರ್ತಿ ತಾ ಬೇದಾರನೇ, ಕೃಷ್ಣಮೂರ್ತಿಯವರು ಆಫೀಸರೇ. ನಾನಾಗಿ ನರಸಿಂಹಮೂರ್ತಿಯನ್ನು

ಮಾತಾಡಿಸಿದೆ. ಬಲು ವಿನೀತನಾಗಿ ಉತ್ತರವಾಡಿದ ! ನೀನು ನಮ್ಮ ಕಮಲೂ ಮಗನೇನೋ ಎಂದೆ, ಹೌದು ಅಂದ. ಕಮಲಮ್ಮನವರು ನನ್ನ ಮಿತ್ರ ಮೂರ್ತಿರಾಯರ ಮಗಳು. ಪಕ್ಕಪಕ್ಕದ ಮನೆಯಲ್ಲಿ ದಿವಾನರ ಅಗ್ರಹಾರದಲ್ಲಿ ನಾನು ವಾಸಿಸುತ್ತಿದ್ದಾಗ ಕಮಲಮ್ಮನು ಇನ್ನೂ ಚಿಕ್ಕ ಹುಡುಗಿಯಾಗಿದ್ದಾಗ, ನನ್ನ ಮಕ್ಕಳು ಆ ಮಗಳು ಸ್ನೇಹಿತರಾಗಿದ್ದಾಗ, ನನಗೆ ಕಮಲೂ ಎಂದು ಕರೆದೇ ಅಭ್ಯಾಸ. ಈಗ ಆಕೆ ಕಮಲಮ್ಮನವರು.

ನರಸಿಂಹಮೂರ್ತಿ ಸೊಗನಾಗಿ ಕ್ರಾಪ್ ಬಿಟ್ಟುಕೊಂಡಿದ್ದಾನೆ. ಕಪ್ಪಗಿದ್ದರೂ ಲಕ್ಷಣವಾಗಿದ್ದಾನೆ. ಅವನನ್ನು ನೋಡುವುದಕ್ಕಿಂತ ಅವನ ಕಣ್ಣುಗಳನ್ನು ನೋಡುವುದೇ ನನಗೆ ಹಬ್ಬವಾಯಿತು. ಅವನ ಕಂಠಸ್ವರ ಅದಕ್ಕಿಂತ ಸುಂದರ. ರಿಸ್ಟ್‌ವಾಚ್ ಕಟ್ಟಿಕೊಂಡು ಅವನು ಓಡಾಡಿದ್ದು ಈಗಲೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಮನಸ್ಸಿನಲ್ಲಿರುವ ಚಿತ್ರವನ್ನು ರೇಖಿಸುವ ಶಕ್ತಿಮಾತ್ರ ನನಗಿಲ್ಲ.

ಅಪರೋಕ್ಷ ಜ್ಞಾನಿಗಳಾದ ಗೋಪಾಲದಾಸರು ಸ್ವಾಮಿಗಳನ್ನು ಹೀಗೆಂದು ಒಂದು ಸುಳಾದಿಯಲ್ಲಿ ವರ್ಣಿಸಿರುವರು.

### ಶ್ರೀ ರಾಘವೇಂದ್ರ ಸುಳಾದಿ

ರಾಗ ಶಂಕರಾಭರಣ ಧ್ರುವತಾಳ

ಧರೆಯೊಳಗೆ ನಮ್ಮ | ಗುರು ರಾಘವೇಂದ್ರರಿನ್ನು
ಇರುತಿಪ್ಪ ವಿವರವ | ಅರಿತಷ್ಟು ವರ್ಣಿಸುವೆ
ಸ್ಥಿರವಾಗಿ ಮಂತ್ರಾಲಯ | ಪುರ ತುಂಗಾತೀರದಿ
ಹರಿಭಕ್ತ ಪ್ರಹ್ಲಾದ | ವರಯಾಗ ಇಲ್ಲಿ ಮಾಡಿ
ಸುರರಿಗಮೃತ ಉಣಿಸಿ | ಪರಿಪರಿ ಕ್ರಿಯಾಮಾಡಿ
ಪರಿಶುದ್ಧನಾದನೆಂದು | ಅರಿತು ಈ ಸ್ಥಳದಲ್ಲಿ
ಗುರು ರಾಘವೇಂದ್ರರಾಯ | ಶರೀರ ಪೋಗಾಡಿಸಿಲ್ಲಿ
ಪರಲೋಕ ಸಾಧನ | ಪರಿಪೂರ್ತಿ ಮಾಡಿಕೊಂಡು
ಸಿರಿಕೃಷ್ಣನ ಚರಣ | ಕ್ಕೆರಗಿ ಸಂತೋಷದಲ್ಲಿ
ಧರೆಯ ಮೇಲಿದ್ದ ಜನರ | ಪೊರೆಯಬೇಕೆಂದೆನಲು

ಹರಿನೋಡಿದ ನಿವರ । ಪರಮುದಯಾಳು ತನವ
ಗುರುವಂತರ್ಯಾಮಿಯಾಗಿ । ವರನೀಡಲು ಜನಕೆ
ನರಹರಿ ತಾನೇ ನಿಂದು । ನಿರುತ ಪೂಜೆಯಗೊಂಬ
ಸಿರಿಯುಳ್ಳ ಕೀರುತಿಯು । ಸುರರಪಾಲಕ ಚಕ್ರ
ಧರ ನಾರೇಯಣತಾನು । ವರಸನ್ನಿಧಾನನಾಗಿ
ಇವರಿಗೆ ಫಲವೀವ । ಇಹಪರದಲಿ ಇನ್ನು
ಕರುಣಾಕರರಂಗ । ಗೋಪಾಲ ವಿಠಲ ತನ್ನ
ಶರಣರ ಪೊರೆವಂಥ । ಚರಿಯ ಪರಿಪರಿವುಂಟು. ೧.

ಮಟ್ಟ ತಾಳ.

ನರಹರಿ ರಾಮಕೃಷ್ಣ । ಶಿರಿ ವೇದವ್ಯಾಸ
ಎರಡೆರಡಿವರಲ್ಲಿ । ಹರಿಮೂರುತಿಗಳು
ಪರಿವಾರ ಸಹಿತಾಗಿ । ಸಿರಿಸಹಿತ ನಿಂದು
ಸುರರು ಗುರು ಮಧ್ವಾ । ಚಾರ್ಯರು ಮೊದಲಾಗಿ
ತರುವಾಯದಲ್ಲಿನ್ನು । ತಾರತಮ್ಯಾನುಸಾರ
ಪರಿಪರಿಯಿಪ್ಪರು । ಗರುಡವಾಹನ ರಂಗ
ಗೋಪಾಲವಿಠಲ ಇರುತಿಪ್ಪನಿಲ್ಲಿ ಶರಣರ ಪಾಲಿಸುತ ೨

ತ್ರಿಪುಟ ತಾಳ

ನರಹರಿರೂಪದಿ ವಾಸವಾಗಿ ಇಲ್ಲಿ
ದುರಿತದುಷ್ಕೃತ ಬ್ರಹ್ಮಹತ್ಯಗಳೋಡಿಸುವ
ಸಿರಿರಾಮನಾಗೀ ವಾಸವಾಗಿ ಇಲ್ಲಿ
ಪರಿಪರಿಯಿಂದ ಅನ್ನವ ಕಳಕೊಂಡ
ನರರಿಲ್ಲಿ ಬಂದರೆ ಸ್ಥಿರಪಟ್ಟ ಕಟ್ಟುವ
ಸಿರಿಕೃಷ್ಣನಾಗಿ ವಾಸವಾಗಿ ಇಲ್ಲಿ
ತರಹರಿಸುತ ಬಂದ ಪರಮಾತುರರಿಗೆ
ವರಗಳನೀವ ಸತ್ಪುತ್ರರನಿತ್ತು
ಹರಕೆಗಳ ಕೈಕೊಂಡು ಹರುಷವಪಡಿಸುವ

ಶಿರಿವೇದವ್ಯಾಸನು ವಾಸವಾಗಿ ಇಲ್ಲಿ.
ಭರದಿಂದ ಬಂದ ದುರ್ವಾದಿಗಳನೆಲ್ಲ
ದೂರಓಡಿಸಿ ಮುರಿದು ಅವರ ಕುತರ್ಕವ
ಹರಿಸರ್ವೋತ್ತಮನೆಂಬ ಇರವನಿಲ್ಲಿ ತೋರಿ
ಶರಣಜನಕೆ ಇನ್ನು ವರಜ್ಞಾನ ಸುಧೆಯ
ಕರೆದುಕೊಡುತ ಇರುತಿಪ್ಪನು ಸರ್ವದಾ
ಸಿರಿವಂದಿತವಾದ ಗೋಪಾಲ ವಿಠ್ಠಲ
ಪರಿಪರಿಯಿಂದ ವಾಲಗ ಕೈಕೊಂಬ ೩.

ಅಟ್ಟ ತಾಳ.

ರಾಘವೇಂದ್ರನೆಂಬ ರೂಪವೆ ತಾನಾಗಿ
ರಾಘವೇಂದ್ರನೆಂಬ ನಾಮಾ ಇರಿಸಿಕೊಂಡು
ರಾಘವೇಂದ್ರರಿನ್ನು ಮಾಡಿದಂಥಾಪುಣ್ಯ
ಭೋಗವರಿತು ತನ್ನ ಭಾಗವತರಿಗಿತ್ತು
ಸಾಗಿಸಿಸಲಹಿನ್ನು ಜಗದೊಳಗೆಲ್ಲಾ
ಮೋಘಸೂರ್ಯನಂತಾಮೋಘಕೀರುತಿಯನ್ನು
ರಾಘವ ಇವರಿಗೆ ರಾಜ್ಯದಿ ತಂದೀವ
ರಾಘವೇಂದ್ರ ಮೂರ್ತಿ ಗೋಪಾಲ ವಿಠಲ
ಭಾಗವತರಲ್ಲಿ ಬಹುಪೂಜೆಕೈಗೊಂಬ ೪.

ಆದಿತಾಳ.

ದಿನದಿನಕಿಲ್ಲಿ ನೂತದ ಪೂಜೆಗಳು
ದಿನದಿನಕಿಲ್ಲಿ ನೂತನೋತ್ಸವಗಳು
ದಿನದಿನಕಿಲ್ಲಿ ನೂತನ ಕೀರ್ತಿಗಳು
ದಿನದಿನಕಿಲ್ಲಿ ನೂತನ ವಾರ್ತೆಗಳು
ಜನರಸಂದಣಿಗಳು ವಿಪ್ರಭೋಜನಗಳು
ಜನರಕೈಯಿಂದ ಗೈಸಿ ಈಪ್ಸಿತವೀವರು
ಜನುಮ ಸಫಲಮಾಡಿ ಜನನ ನೀಗುವರು

ದಿನಸಪ್ತ ಶತವರುಷ ದಿನಪರಿಯಂತರ
ದಿನಕರ ಶತತೇಜ ಜನನಾಥತಾನಿಲ್ಲಿ
ಅನುವಾಗಿ ತಾನಿಂದು ಜನರಪಾಲಿಪುದ
ಕ್ಕನುಮಾನ ಸಲ್ಲದು ಸಲ್ಲದು ಸಲ್ಲದು
ಗುಣಗಣ ಪರಿಪೂರ್ಣ ಗೋಪಾಲವಿಠ್ಠಲ
ಅಣೋರಣೀಯೆಂಬವಗೆ ಎಣೆಯಾರೊ ಜಗದೊಳಗೆ ೫.

ಜೊತೆ

ಮಂತ್ರಸಿದ್ಧಿಕ್ಷೇತ್ರ ಇದುನೋಡಿಕೋ ಇಲ್ಲಿ
ಮಂತ್ರಪ್ರತಿಪಾದ್ಯ ಗೋಪಾಲವಿಠಲನಿಂದಾ

ಶ್ರೀರಾಗ ಆದಿತಾಳ

ರಾಘವೇಂದ್ರ । ರಾಜಿತಗುಣಸಾಂದ್ರ ಪ
ಪಾದೋದಕವ ದಿನೇ ದಿನೆ ಸೇವಿಪ
ರಾಧಿ ವ್ಯಾಧಿಗಳ ನೋದದಿ ಕಳೆವೆ ೧
ದ್ವಾದಶವರುಷಾನ್ನೋದಕ ಸಲಿಸಿವೆ
ಮೇದಿನಿಪತಿಗೆ ಮಹಾದಯವಂತ ೨
ಹುತವಹ ಗುಣಿಸಿದ ರತುನಮಾಲಿಕೆಯ
ಕ್ಷಿತಿಪಗೆ ತೋರಿದೆ ಅತುಲಿತಮಹಿಮ ೩
ಬಿಸಿಲಿಂದಳಲುವ ಶಿಶುವಿಗೆ ಚೇಲಾ
ಗಸದಲಿ ನಿಲಿಸಿದೆ ಅಸಮಮಹಿಮನೆ ೪
ಭೃತ್ಯಗೆ ಬಂದಪಮೃತ್ಯುಕಳೆದು ಸುಖ
ವಿತ್ತು ಪೊರೆದೆ ಪುರುಷೋತ್ತಮದಾಸ ೫
ಕ್ಷಿಪ್ರದಿ ತೋರಿದೆ ವಿಪ್ರರ ಮಹಿಮೆಯ
ಆಪೃಥ್ವೀಶಗೆ ಅಪ್ರತಿಮಹಿಮ ೬
ಕನಲಿದ ಜನಪನ ಅನುನಯದಲಿ
ನಿನ್ನ ಋಗನಮಾಡಿದೆ ಘನತರಮಹಿಮ ೭

ವಿಪಿನದಿ ಚಂಡಾತಪದಿ ಬೆಂದ ಕಾ
ಶ್ಯಪಿಸುತರುಳುಹಿದೆ ಕೃಪಣಜನಾಪ್ತ ೮
ಮಳಲಮಾರ್ಗದೊಳು ಲಲನೆ ಪ್ರಸೂತಿಸೆ
ಪುಲಿನ ಕಮಲದೊಳು ಜಲವ ನಿರ್ಮಿಸಿದೆ ೯
ಯತಿವರದೂರದಿ ಮೃತಿಯೈದಾಗಸ
ಪಥದಲಿ ಕಂಡು ನುತಿಸಿದ ಮಹಿಮ ೧೦
ಪೂತಾತುಮ ಜಗನ್ನಾಥವಿಠಲನ
ಖ್ಯಾತಿಯ ನುತಿಸುವನಾಥಜನಾಪ್ತ ೧೧



# ೧೨. ಸುಮತೀಂದ್ರರು

ಶ್ರೀರಾಘವೇಂದ್ರಸ್ವಾಮಿಗಳ ಮಠ ಪೀಳಿಗೆಯಲ್ಲಿ, ಯೋಗೀಂದ್ರರು ಸೂರೀಂದ್ರರಾಗುತ್ತಲೇ, ಸುಮತೀಂದ್ರರು ಬಹು ಪ್ರಖ್ಯಾತರೆನಿಸಿಕೊಂಡರು. ಇವರ ಪೂರ್ವಾಶ್ರಮದ ಹೆಸರು ಮುದ್ದುಕೃಷ್ಣಾಚಾರ್ಯರೆಂದು. ಸೂರೀಂದ್ರ ರಿಂದ ಆಶ್ರಮವಾಗುತ್ತಲೇ ಸುಮತೀಂದ್ರರು ತೀರ್ಥಯಾತ್ರಾ ವ್ಯಾಜದಿಂದ ಆರಣಿಗೆ ಬಂದರು. ಅಲ್ಲಿನ ಅರಸು ಸುಭಾನುರಾಯನು ಜ್ಯೋತಿಷ್ಮತೀ ತೈಲಪಾನದಿಂದ ಮಹಾ ಮೇಧಾವಿಯೆನಿಸಿ ಕಾವ್ಯದಲ್ಲೂ ಶಾಸ್ತ್ರದಲ್ಲೂ ಪ್ರಬಲ ಪಂಡಿತನೆಂದು ಪ್ರಖ್ಯಾತಿಪಡೆದಿದ್ದನು. ಜ್ಯೋತಿಷ್ಮತೀತೈಲವೆಂಬುವುದು ಆಯುರ್ವೇದದಲ್ಲಿ ಕಾಯಕಲ್ಪದಂಥಾ ಬಹು ದೊಡ್ಡ ಪ್ರಯೋಗ. ತೈಲಪಾನ ವನ್ನು ಏಕಕಾಲದಲ್ಲಿ ಮೂವರು ಮಾಡಿದರೆ ಯಾವನಾದರೊಬ್ಬನು ಸರ್ವಜ್ಞ ನಾಗುವನೆಂದು ಜನರು ಹೇಳುತ್ತಿದ್ದ ಹೇಳಿಕೆ. ಈ ಬಗೆಯ ಆಯುರ್ವೇದದ ಪ್ರಯೋಗಗಳೇ ಮರೆತು, ಶಾಸ್ತ್ರೀಯ ವೈದ್ಯವಿದ್ಯೆಖಿಲವಾಗಿರುವ ಈ ಕಾಲದಲ್ಲಿ ಈ ವಿಷಯವನ್ನೆತ್ತಿ ಮಾತಾಡುವುದು ಅಸಂಗತ. ಪ್ರಕೃತ ವಿಚಾರಕ್ಕೆ ಸಂಬಂಧಿಸಿದುದು ಮೊದಲೇ ಅಲ್ಲ ಜ್ಯೋತಿಷ್ಮತೀತೈಲಪಾನ ಮಾಡಿದವನು ಹೇಗೆ ಮಹಾ ಮೇಧಾವಿಯಾಗುವನೋ, ಹಾಗೆಯೇ ಮಹಾಬಲಶಾಲಿಯಾಗು ವನು, ಮತ್ತು ಕಾಮಿಯೂ ಆಗುವನು. ಸುಭಾನುರಾಯನ ಮೇಧಾವಿತನಕ್ಕೆ ಪ್ರಸಕ್ತ ವಿಷಯದಲ್ಲಿ ಉದಾಹರಣೆಯಿದ್ದಂತೆ ಬಲಶಾಲಿತ್ವಕ್ಕೆ ಉದಾಹರಣೆ ಬೇಕೆಂದರೆ ಅದು ಹೀಗಿದೆ.

ಆರಣಿಯ ಜಹಗೀರು, ಆರ್ಕಾಟು ನವಾಬರಿಂದ ಸುಭಾನುರಾಯನ ಪೂರ್ವಜರಿಗೆ ದಂಡಾಳುತನದ ಮೆಚ್ಚಿಗೆಗಾಗಿ ಪ್ರಾಪ್ತವಾದದ್ದು. ಆಗಿದ್ದ ನವಾಬನು ಜಹಗೀರನ್ನು ಜಪ್ತುಮಾಡಬೇಕೆಂದು ದರ್ಬಾರು ನಡೆಸಿದಾಗ ಸುಭಾನುರಾಯನಿಗೆ ಸಭೆಯಲ್ಲಿ ಸಮುಖದಲ್ಲಿ ಕೂಡುವ ಮರ್ಯಾದೆ ದೊರೆಯ ಲಿಲ್ಲ. ನವಾಬನ ತಖ್ತೆಯ ಹಿಂಬದಿಯಲ್ಲಿ ಮಾತ್ರ ನೆಲದಮೇಲೆ ಕೂಡುವ ಅವಕಾಶ ದೊರೆಯಿತು. ಅವಮಾನವನ್ನು ಸಹಿಸಿಕೊಂಡು ಹಿಂಬದಿಯಲ್ಲಿ ಕುಳಿತಿದ್ದ ರಾಯನು, ತನ್ನ ಸಾಹಸವನ್ನು ತೋರಿಸಬೇಕೆಂದು ತಖ್ತೆಯ

ಕೆಳಗೆ ಜೋಲಾಡುತ್ತಿದ್ದ ನವಾಬನ ನಿಲುವಂಗಿಯನ್ನು, ತುರಾಯಿ ಕಂಬವನ್ನೆತ್ತಿ ಆದರ ಕೆಳಗೆ ಸೇರಿಸಿಬಿಟ್ಟನು. ದರ್ಬಾರು ಮುಗಿದು ಏಳುವ ಸಮಯದಲ್ಲಿ ನಿಲುವಂಗಿ ಕಂಭದ ಕೆಳಗೆ ಸಿಕ್ಕಿಕೊಂಡಿದ್ದುದರಿಂದ ನವಾಬನಿಗೆ ಪದಚಲನೆಮಾಡಲು ಸಾಧ್ಯವಾಗಲಿಲ್ಲ ಯಾರು ಹೀಗೆ ಮಾಡಿರಬೇಕೆಂದು ವಿಚಾರ ನಡೆಯುವುದರಲ್ಲಿ ರಾಯನು ನಾನೇ ಎಂದು ನವಾಬನಿಗೆ ಮುಜರೆ ಮಾಡಿದನು. ರಾಯನ ಸಾಹಸಕ್ಕೆ ಮೆಚ್ಚಿ ನವಾಬನು ಜಹಗೀರಿಯನ್ನು ಅಪಹರಿಸುವ ಗೋಜಿಗೆ ಹೋಗಲಿಲ್ಲ. ಪ್ರತಿಯಾಗಿ ಚಾಡಿಹೇಳಿದ ಜನರಿಗೆ ಶಿಕ್ಷೆಯೂ ತಪ್ಪಲಿಲ್ಲ.

ರಾಯನು ಸ್ವಯಂ ಬ್ರಾಹ್ಮಣನಾಗಿ ಉತ್ತರಾದಿ ಮಠದ ಶಿಷ್ಯನಾಗಿದ್ದರೂ ತನ್ನ ಗುರುಗಳನ್ನೇ ವ್ಯಾಕ್ಯಾರ್ಥಕ್ಕೆ ಬನ್ನಿರೆಂದು ಕರೆಯಲು ಹಿಂತೆಗೆದವನಲ್ಲ. ಅಂದಮೇಲೆ ಇತರ ಮಠಗಳ ಪರವೆಯೇನು ರಾಯನಿಗೆ ? ರಾಯನು ಸುಮತೀಂದ್ರರಿಗೆ ಪೀರ ಗೌರವದಿಂದ ಸ್ವಾಗತಕೊಟ್ಟನು. ಶಾಸ್ತ್ರದಲ್ಲಿ ಸ್ವಾಮಿಗಳ ಪಾಂಡಿತ್ಯಕ್ಕೆ ತಲೆದೂಗಿದನು. ಶಾಸ್ತ್ರಪಾರಂಗತರಿಗೆ ಸ್ವಾಭಾವಿಕವಾಗಿ ಕಾವ್ಯದಲ್ಲಿ ಪರಿಶ್ರಮ ಕಡಿಮೆಯಾಗಿರುವುದರಿಂದ, ತಮಗೆ ಕಾವ್ಯದಲ್ಲೂ ಪರಿಶ್ರಮವುಂಟೋ ಎಂದು ಪ್ರಶ್ನೆಮಾಡಿದನು. ಮಾತ್ರವಲ್ಲದೆ ತನ್ನ ಸಾಹಿತ್ಯ ಪ್ರೌಢಿಮೆಯನ್ನೂ ಪ್ರಕಟಗೊಳಿಸಿದನು. ಸುಮತೀಂದ್ರರಾದರೋ—

**ಅನಾರಾಧ್ಯಕಾಳೀಂ ಅನಾಸ್ವಾದ್ಯ ಚೋಳೀಂ**
**ವಿನಾಮಂತ್ರತಂತ್ರೀ ಶ್ರುತೀಶಬ್ದ ಚೌರ್ಯಾತ್**
**ಪ್ರಪಂಚ ಪ್ರಸಿದ್ಧ ಪ್ರಬಂಧಂ ವಿಧಾತುಂ**
**ವಿರಿಂಚ ಪ್ರಪಂಚೇ ಮದನ್ಯಃ ಕವಿಃ ಕಃ** ॥ ೧ ॥

ತಾತ್ಪರ್ಯವಾದರೊ—ಮಹಾಕವಿ ಕಾಳಿದಾಸನು ಕಾಳೀವರ ಪ್ರಸಾದದಿಂದ ಮಹಾಕವಿಯೆನಿಸಿದನು. ದಕ್ಷಿಣದೇಶದಲ್ಲಿ ಸಂಗೀತ ಸಾಹಿತ್ಯ ಶಾಸ್ತ್ರಗಳಲ್ಲಿ ಪಾರಂಗತರೆನಿಸಲು ತಮಿಳಿನಲ್ಲಿ "ಎನ್ನಾವೈತ್ತಲೆ ಕಾವೇರೀ ತಣ್ಣಿಯಿಕ್ಕೋ" ಎಂದು ಕೇಳುವ ಗಾದೆಯಂತೆ ಕಾವೇರೀ ತೀರ್ಥ ಪ್ರಭಾವದಿಂದ ಮನುಷ್ಯನು ಮಹಾ ಪಂಡಿತನಾಗುವುದುಂಟು. ಮಂತ್ರತಂತ್ರಗಳ ಪ್ರಭಾವದಿಂದ ಕೆಲವರು ಪ್ರತಿಭಾಶಾಲಿಗಳಾಗುವುದುಂಟು. ಅನ್ಯಪ್ರಸಿದ್ಧ ಕವಿಗಳ ಪ್ರಯೋಗ ಚೌರ್ಯದಿಂದಲೂ ಕೆಲವರು ಪಂಡಿತರೆನಿಸಿಕೊಳ್ಳುವುದುಂಟು.

ಇದೊಂದೂ ಇಲ್ಲದೆ ಅಂದರೆ-ಕಾಳಿಯನ್ನಾರಾಧಿಸದೆ, ಕಾವೇರೀ ಜಲಪಾನ ಮಾಡದೆ, ಮಂತ್ರತಂತ್ರಗಳ ಪ್ರಭಾವವಿಲ್ಲದೆ, ಅನ್ಯ ಕವಿಗಳ ಶಬ್ದಚೌರ್ಯ ವನ್ನೂ ಮಾಡದೆ, ಪ್ರಪಂಚದಲ್ಲೇ ಪ್ರಸಿದ್ಧ ಗ್ರಂಥ ರಚನೆಮಾಡಲು ಬ್ರಹ್ಮನ ಬ್ರಹ್ಮಾಂಡದಲ್ಲಿ ನನ್ನ ಪಿನಾ ಅನ್ಯ ಕವಿಯಾರು ? ಎಂಬುದಾಗಿ ನುಡಿದರು. ಸ್ವಾಮಿಗಳ ಕಾವ್ಯಪಾಂಡಿತ್ಯಕ್ಕೆ ರಾಯನು ಮೆಚ್ಚಿ ಉಬ್ಬಿದ ಮನದಿಂದ

**ಪ್ರತಿಮಠಮುದರಂಭರಯೋ**
**ಯತಯಸ್ಸಂತು ಹಂತವಸುಧಾಯಾಂ**
**ಸುಮತಿಯತೇ ವಿತತಮತೇ**
**ಭವತಾಸಮತಾಂ ಲಭೇತಕೋನಾಮ ||**

ತಾ|| ಪ್ರತಿಮಠದಲ್ಲೂ ಕುಕ್ಷಿಂಭರರಾದ ಯತಿಗಳು ಭೂಮಿಯ ಮೇಲಿರಲಿ, ಹಾ ! ವಿಶಾಲಮತಿಯಾದ ಸುಮತಿಯತಿಯೆ, ನಿನ್ನಿಂದ ಸಮಾನತ್ವವನ್ನು ಯಾವನು ಪಡೆಯಬಲ್ಲನು ? ಎಂಬುದಾಗಿ ಶ್ಲಾಘಿಸಿ ಅನರ್ಘ್ಯಕಾಣಿಕೆಗಳ ನ್ನೊಪ್ಪಿಸಿದನು.

ಸಾಹು ಮಹಾರಾಜನ ರಾಜಧಾನಿಗೆ ದಿಗ್ವಿಜಯಮಾಡಿದಾಗ ಛತ್ರಪತಿಯು ಸುಮತೀಂದ್ರರಿಗೆ ಕನಕಾಭಿಷೇಕಮಾಡಿಸಿದುದು ಮಾತ್ರವಲ್ಲದೆ, ಅನೇಕ ಗ್ರಾಮಭೂಮಿಗಳ ಜಹಗೀರನ್ನು ಕೊಟ್ಟನು. ಕನಕಾಭಿಷೇಕ ಕಾಲ ದಲ್ಲಿ ಸುಮತೀಂದ್ರರು—

**ಭೂಯಾದ್ಭೂತಲ ಭೂಷಣಸ್ಯ ಭವತೋ**
**ಭೂಯಾನ್ಪ್ರಚಾಗ್ರೇಜಯೋ**
**ವೇಲಾಶೈಲಶಿಲಾಲವಾಲ ವಲಯಾನ್ನಿರ್ಯಾತಿ ವರ್ಯಾಂಕುರೇ**
**ಶ್ರೀ ಶಾಹಾವನಿವೃತ್ರಹರ್ಷಪದನಮುದ್ಭಾಸಾಲಜಾಲಜ್ವಲ**
**ತ್ಕೋಟೀರಾಗ್ರಮಣಿಚ್ಛಟಾಸ್ಫುಟಮಹಃ ಸಂದೋಹ**
**ಸಂದೋಹದೇ ||೧||**
**ಏಷಾಂದುರ್ಯವನಂ ವಿಧಾತುಮುದಿತಾ ಶಸ್ತ್ರಕ್ರಮಪ್ರಕ್ರಿಯಾ**
**ಹಂತುಂಮಾನನದಾನವಾನ್ಪ್ರಜಿಹತೇ ಯದ್ವಂಶಮುಂಶೈಸ್ಸುರಾಃ**

**ತಾದೃಕ್ಷೈಕ್ಯಹಜೀ ಮಹಿಪತಿ ಮುಖ್ಯೈರ್ಗೋತ್ರೀನೃಪೈರಂಚಿತೇ**
**ಜಾತಶ್ಚಂದ್ರ ಇವಾಂಬುಧೌ ಜಯಜಯ ಶ್ರೀಶಾಹು**
**ಪೃಥ್ವೀಪತೇ ||೨||**

ಎಂದು ಮೊದಲಾದ ಮಂಗಳಾಶಾಸನ ಶ್ಲೋಕಗಳನ್ನು ಆಶು ಕವಿತೆಯಿಂದ ಹೇಳಿದರು.

ಸ್ವಾಮಿಗಳ ಉತ್ತರದೇಶದ ಸಂಚಾರದಲ್ಲಿ ಗ್ವಾಲಿಯರ್ ಮೊದಲಾದ ಅನೇಕ ಸಂಸ್ಥಾನಾಧಿಪತಿಗಳು ಶ್ರೀಮಠದ ಶಿಷ್ಯರಾದರು. ಈಚೆಗೆ ಬಂದ ಪೀಠಸ್ಥರು ಪುನಃಪುನಃ ಆ ದೇಶಗಳಲ್ಲಿ ಸಂಚರಿಸದಿದ್ದ ಕಾರಣ ಆ ಸಂಗತಿ ಮರೆತು ಆ ವಂಶೀಕರು ಅನ್ಯಗುರುಗಳನ್ನಾಶ್ರೈಸಿದರು. ಸುಮತೀಂದ್ರರು ಉತ್ತರ ಯಾತ್ರೆಯನ್ನು ಮುಗಿಸಿ ಕುಂಭಕೋಣೆಯನ್ನು ಸೇರುವಾಗ ಒಂಟೆಗಳ ಮೇಲೆ ಧನಕನಕಗಳನ್ನು ಸಾಗಿಸಿಕೊಂಡು ಬಂದರೆಂಬುವುದೂ, ಆಯಾ ರಾಜರು ಭಂಡಾರ ರಕ್ಷಣೆಗೆ ತಮ್ಮ ದಂಡಾಳುಗಳನ್ನೇ ಕಳುಹಿಸಿದ್ದರೆಂಬುವುದೂ ನಮ್ಮ ಕಾಲದ ಜನರ ಬುದ್ಧಿಗೆ ತೂರದಂತಾಗಿದೆ.

ಸುಮತೀಂದ್ರರು ತಾವು ಸಂಚರಿಸಿದ ಮುಖ್ಯ ಸ್ಥಳಗಳಲ್ಲಿ ತಮ್ಮ ಶಾಖಾ ಮಠಗಳನ್ನು ಸ್ಥಾಪಿಸಿ ಪ್ರಾಣಪ್ರತೀಕಗಳನ್ನು ಪ್ರತಿಷ್ಠಿಸಿರುತ್ತಾರೆ. ಮಾದರಿಗಾಗಿ ಎರಡೇ ಸ್ಥಳಗಳನ್ನು ಉದಹರಿಸಬೇಕೆಂದರೂ ಅವು ಬೆಂಗಳೂರು (ಚಿಕ್ಕಪೇಟೆಯ ಮಠ) ಬೇಲೂರಿನಂಥಾ ಪ್ರಸಿದ್ಧ ಸ್ಥಳಗಳಾಗಿವೆ. ದಕ್ಷಿಣ ದೇಶದಲ್ಲೆಲ್ಲಾ ರಾಯರ ಮಠಕ್ಕೆ ಸುಮತೀಂದ್ರ ಮಠವೆಂತಲೇ ಇನ್ನೂ ಪ್ರಸಿದ್ಧಿಯಿರುವಾಗ, ಸ್ವಾಮಿಗಳ ಪ್ರಭಾವವೆಷ್ಟಿತ್ತೆಂಬುದನ್ನು ಪೂರ್ಣ ಇತಿಹಾಸ ದೊರೆಯದೆ ಹೇಗೆ ವರ್ಣಿಸೋಣ !

ಸುಮತೀಂದ್ರರ ಕಾಲವೆಂದರೆ ಲೋಕಪ್ರಸಿದ್ಧ ಗೋಪಾಲದಾಸರು ಜಗನ್ನಾಥ ದಾಸರಂಥಾ ಮಹಾಪುರುಷರಿದ್ದ ಕಾಲ. ಉತ್ತರ ಭಾರತದ ಚೈತನ್ಯ ಮಹಾಪ್ರಭುವಿನಂತೆ ಮೀರಾಬಾಯಿಯಂತೆ – ಶ್ರೀಕೃಷ್ಣನನ್ನು ಸಾಕ್ಷಾತ್ಕರಿಸಿ, ಆತನೊಡನೆ ವಿವಿಧಲೀಲಾ ವಿನೋದಗಳಾಡಿದ ಪ್ರಸಿದ್ಧ ಹೆಳವನಕಟ್ಟೆ ಗಿರಿಯಮ್ಮನಿದ್ದ ಕಾಲ! ಅಮ್ಮನೆಂದರೆ ಗಿರಿಯಮ್ಮನೇ ಎಂದು ಜನರು ತಿಳಿದಿದ್ದ ಕಾಲ !

ಇಂಥಾ ಕಾಲದಲ್ಲಿ ಸುಮತೀಂದ್ರರು ಮಾರ್ಗತ್ವೇನ ಹೆಳವನಕಟ್ಟೆಗೆ ಬಿಜಯಂಗೈದರು. ಸ್ವಾಮಿಗಳು ಪೂಜೆಗೆ ಕೂಡುವ ಸ್ಥಳವನ್ನು ಅಮ್ಮನು ಚಿತ್ರವಿಚಿತ್ರ ರಂಗವಲ್ಲಿಯಿಂದ ಸಿಂಗರಿಸಿದ್ದಳು. ಪೂಜಾ ಸ್ಥಾನಕ್ಕೆ ಬಂದೊಡನೆಯೇ ಸ್ವಾಮಿಗಳಿಗೆ ಪರಮಾನಂದವಾಯಿತು. ಗಿರಿಯಮ್ಮನ ಖ್ಯಾತಿಯನ್ನು ಸ್ವಾಮಿಗಳು ಬಹುಮುಖದಿಂದ ಕೇಳಿದ್ದರು. ಇದೇನು ಅಮ್ಮನು ಹಾಕಿದ ರಂಗವಲ್ಲಿಯೋ ಎಂದು ವಿಚಾರಿಸುತ್ತಾ ಸ್ವಾಮಿಗಳು ಪೂಜಾ ಪ್ರಾರಂಭ ಮಾಡಿದರು. ಅಂದಿನ ಪೂಜೆ ವಿಚಿತ್ರ ಪೂಜೆಯಾಯಿತು. ಮುಟ್ಟಿದ್ದೇ ಮುಟ್ಟುತ್ತಾ, ಮಾಡಿದ್ದೇ ಮಾಡುತ್ತಾ, ಅಂದ ಮಂತ್ರವನ್ನು ಪುನಃ ಪುನಃ ಅನ್ನುತ್ತಾ ಬೆರಳೆರಡರ ಮಧ್ಯದಲ್ಲಿ ತುಲಸೀ ದಲವನ್ನು ಹಿಡಿದು ನ್ಯಾಸಮಾಡುತ್ತಾ ಭಗವನ್ಮೂರ್ತಿಯನ್ನು ಪ್ರತ್ಯಕ್ಷ ನೋಡುತ್ತಾ, ಚಾಚಿದ ಕೈಯನ್ನು ಚಾಚಿದಂತೆ ನಿಲ್ಲಿಸಿ, ಆನಂದ ಬಾಷ್ಪಗಳಿಂದ ಏನು ಸುದಿನವಿದು, ಯಾವ ಭಕ್ತರ ಪ್ರಭಾವವಿದು, ಇಂಥಾ ಆವರಣ ಶುದ್ಧಿ, ಇಂಥಾ ಶುದ್ಧ ಬುದ್ಧಿ, ಇಂಥಾ ಪೂಜಾನಂದ ಇಂದೇ ಕಂಡೆವಲ್ಲಾ! ಇದು ಕ್ಷೇತ್ರ ಪ್ರಭಾವ! ಇದು ಭಕ್ತ ಗಿರಿಯಮ್ಮನ ಪ್ರಭಾವ! ಎನ್ನುತ್ತಲೇ ಮಂಗಳಾರತಿಯೆತ್ತಿದರು. ಆಗಮರೀತ್ಯಾ ಎತ್ತುವ ಸುತ್ತುಗಳು ಮುಗಿದರೂ ಸ್ವಾಮಿಗಳು ಆರತಿಯ ತಟ್ಟೆಯನ್ನು ಕೆಳಗಿಡಲಿಲ್ಲ. ಸುಮತೀಂದ್ರರಿಗೆ ಶ್ರೀರಾಮರ ದರ್ಶನ, ಗಿರಿಯಮ್ಮನಿಗೆ ಶ್ರೀಕೃಷ್ಣನ ದರ್ಶನ, ಮಿಕ್ಕವರಿಗೆ ಆರತಿ ದರ್ಶನ ಈ ಮೂರೂ ಏಕಕಾಲದಲ್ಲಿ ಮಹಾಮಂಗಳಾರತಿಯಿಂದಾಯಿತು.

ತೀರ್ಥ ಸಮಯದಲ್ಲಿ ಈಹೊತ್ತು ಮಹಾತ್ಮಳಾದ ಗಿರಿಯಮ್ಮನ ಭಿಕ್ಷೆಯೆಂದು ಕೇಳುತ್ತೇವೆ. ಆ ಪುಣ್ಯಾತ್ಮಳೆಲ್ಲಿ, ತೀರ್ಥಕ್ಕೆ ಬರಲಿ ಎಂದು ಸ್ವಾಮಿಗಳ ಆಜ್ಞೆಯಾಯಿತು.

ದೂರದಲ್ಲಿ ಏಕಾಂಗಿಯಾಗಿ ನಿಂತಿದ್ದ ಗಿರಿಯಮ್ಮನಿಗೆ ಎದುರಿಗೆ ಬಂದು ನಿಲ್ಲುವ ಧೈರ್ಯವಾಗಲಿಲ್ಲ. ಗಿರಿಯಮ್ಮ ಅಪುತ್ರವತಿ, ನಾವೆಲ್ಲಾ ಪುತ್ರವಂತರು, ನಮ್ಮಿಂದ ಸಂತತಿಯ ಉದ್ಧಾರ, ಎಂದು ಬಿಗಿಯುತ್ತಿರುವ ಓರಗಿತ್ತಿಯರ ಅಹಂಕಾರ, ಸ್ತ್ರೀಯಾಗಿ ಗಂಡನೊಡನೆ ಸಂಸಾರಮಾಡದೆ ಭಕ್ತಳೆಂಬ ವೇಷಹಾಕಿದ ಪವಾಡಗಾತಿಯಾಗಿ ದಾಸಕೂಟಕ್ಕೆ ಸೇರಿ ಗೋಪಾಲದಾಸರು ಕೊಟ್ಟ ಗೋಪಾಲಕೃಷ್ಣನ ಚಿತ್ತಾರವನ್ನು ಪೂಜಿಸುತ್ತಾ,

ಕವನ ಕಟ್ಟುವುದು, ಹಾಡುವುದು, ಕುಣಿಯುವುದು, ಜನರಿಗೆ ಉಪದೇಶ ಮಾಡುವುದು, ಅವರೆಲ್ಲಾ ಅಮ್ಮನನ್ನು ಗುರುವೆನ್ನುವುದು ಇದನ್ನೆಲ್ಲಾ ಸೈರಿಸದ ಶಿಷ್ಟಜನರ ತಿರಸ್ಕಾರ, ಜನರ ಚಾಡಿಕೇಳಿ ಮಠದ ಅಧಿಕಾರಿಗಳು ಬಹಿಷ್ಕಾರ ಹಾಕಿಸುವೆವೆಂದು ಮಾಡಿದ ಧಿಕ್ಕಾರ, ಇದರಿಂದೆಲ್ಲಾ ಗಿರಿಯಮ್ಮನ ಮನಸ್ಸು ಬಲುನೊಂದಿತ್ತು. ಸ್ವಾಮಿಗಳಿಗೀ ಸಂಗತಿ ತಿಳಿದಿರಲಿಲ್ಲ. ಮತ್ತೆ ಗಿರಿಯಮ್ಮ ಬರಲಿ ತೀರ್ಥಕ್ಕೆ, ಎಂದು ದ್ವಾರಪಾಲಕ ದಂಡಧಾರಿಯ ಕಡೆ ನೋಡಿದರು ಸ್ವಾಮಿಗಳು. ಮಠಾಧಿಕಾರಿ ಬಂದು ಮಹಾಸ್ವಾಮಿಾ, ಆಕೆಯ ಮೇಲೆ ಕೆಲವು ದೂರುಗಳಿವೆ, ಮಿಕ್ಕವರಿಗೆ ತೀರ್ಥವಾಗಲಿ, ಭಿಕ್ಷೆ ಭೋಜನಗಳಾಗುತ್ತಲೆ ಶ್ರೀಪಾದದಲ್ಲಿ ವಿಜ್ಞಾಪಿಸುತ್ತೇನೆ, ಎಂಬುದಾಗಿ ತಿಳಿಸಿದನು. ಆಕೆಗೆ ತೀರ್ಥಕೊಡದೆ ಭಿಕ್ಷವೆಲ್ಲಿಂದ ಬಂತು? ಆಕೆಯನ್ನು ದೂರುವಿರಾ, ಬರಲಿ ಆ ತಾಯಿ ತೀರ್ಥಕ್ಕೆ, ಎಂದು ಮತ್ತೆ ಸ್ವಾಮಿಗಳ ಆಜ್ಞೆಯಾಯಿತು. ದಂಡಧಾರಿಯು ಮಾರ್ಗಬಿಡಿಸಿ ಅಮ್ಮನನ್ನು ಬರಬೇಕೆಂದನು. ಗಿರಿಯಮ್ಮನು ನಮ್ರಳಾಗಿ ತೀರ್ಥಕ್ಕೆ ಕೈಚಾಚಿದಳು ಅಮ್ಮನ ಹಸ್ತದರ್ಶನವಾದೊಡನೆ ಹಸ್ತವನ್ನೇ ನೋಡುತ್ತಾ ಇದೇನು ದೇವತಾ ಲಕ್ಷಣ! ಈ ಲಕ್ಷಣದ ಕೈಗೆ ಮಕ್ಕಳಿಲ್ಲವೆ? ಚಕ್ರಪಾಣಿಯೇ ಮಗನಾಗಬೇಕು, ಇದು ಯಶೋದೆಯ ಕೈ ಲಕ್ಷಣ! ಅಮ್ಮಾ, ಯಶೋದಮ್ಮಾ, ಇಷ್ಟುಕಾಲಕ್ಕೆ ನಿನ್ನಂಥಾ ಪುಣ್ಯಾತ್ಮಳ ದರ್ಶನ ನಮಗೆ ಲಭಿಸಿತು. ನಿನ್ನ ಮಹಿಮೆಯನ್ನು ನಮಗಿಷ್ಟು ತೋರಿಸಮ್ಮಾ! ಎಂದು ಸ್ವಾಮಿಗಳು ತೀರ್ಥವನ್ನಿತ್ತರು. ಅಮ್ಮನು, ದೊಡ್ಡವರು ಹೀಗೆಂದರೆ ಪಾಮರಳ ಗತಿಯೇನೆಂದು ಕೇಳಿದಳು. ಸ್ವಾಮಿಗಳು ನಾವು ದೊಡ್ಡವರು, ನೀನು ದೊಡ್ಡವಳು, ದೊಡ್ಡದೊಡ್ಡವರು ಕೂಡಿ ಏನು ಮಾತಾಡಬೇಕಮ್ಮಾ, ಎಂದರು.

ಭಿಕ್ಷಭೋಜನಗಳಾದವು ಆಯಾಸವಾಗಿದ್ದುದರಿಂದ ಜನರೆಲ್ಲಾ ವಿಶ್ರಮಿಸಿಕೊಂಡರು. ಅಮ್ಮನು ದೇವಗೃಹದಲ್ಲಿದ್ದರೆ ಜನರು ಧೈರ್ಯದಿಂದ ಒಳಗೆ ಬರುತ್ತಿರಲಿಲ್ಲ. ಅಮ್ಮನಾದರೊ—ತನ್ನ ನಿಯಮಿತ ಅಹ್ನಿಕವನ್ನು ಮಾಡದೆ ಭೋಜನಮಾಡುತ್ತಿರಲಿಲ್ಲ ಅಮ್ಮನ ಆಹ್ನಿಕವೆಂದರೆ ಹಾಡು ಹೇಳುತ್ತಾ ರಂಗವಲ್ಲಿಯಲ್ಲಿ ಭಗವನ್ಮೂರ್ತಿಗಳನ್ನು ಚಿತ್ರಿಸುವುದು, ಕುಂಕುಮಾಕ್ಷತೆಗಳಿಂದ ಅಲಂಕರಿಸಿ ಪೂಜಿಸುವುದು, ಪೂಜಿಸಿ ನೋಡುವುದು,

ನೋಡಿ ಹಾಡುವುದು, ಹಾಡಿನಲಿಯುವುದು, ಗೋಪಾಲನನ್ನು ನಲಿಸುವುದು.

ವಸಾರೆಯಲ್ಲಿ ವ್ಯಾಸಪೀಠದ ಮುಂದೆ ಕುಳಿತಿದ್ದ ಸ್ವಾಮಿಗಳು ಅಮ್ಮನ ಹಾಡುಗಳನ್ನು ಕೇಳಿದರು. ಬಾಲಗೋಪಾಲನ ನರ್ತನದ ಕಿರುಗೆಜ್ಜೆಯ ಧ್ವನಿಯನ್ನು ಆಲೈಸಿದರು. ಪುಸ್ತಕವನ್ನು ವ್ಯಾಸಪೀಠದ ಮೇಲಿಟ್ಟು ಅಯ್ಯೋ ಜಡ ಪುಸ್ತಕವೇ ಎಂದು ವಿಸ್ಮಿತರಾದರು. ಅಮ್ಮನು ಜಗನ್ಮೋಹನ ಮೂರ್ತಿಯನ್ನು ಬಗಲಿನಲ್ಲೆತ್ತಿಕೊಂಡು ಬಂದು ಸ್ವಾಮಿಗಳ ಮುಂದೆ ಇವನೇ ನಮ್ಮ ರಂಗಧಾಮನೆಂದು ಕೂಡಿಸಿದಳು. ನನ್ನ ಮುದ್ದು ಕಂದನಿಗೆ ಮಂಗಳಾಕ್ಷತೆಯನ್ನು ಕೊಡಿರೆಂದು ಬೇಡಿದಳು.

ಸುಮತೀಂದ್ರರು ಮುದ್ದುಮೋಹನನನ್ನೆತ್ತಿಕೊಂಡು ಆನಂದಬಾಷ್ಪಗಳಿಂದ—ವ್ಯಾಸರಾಯರಿಗೆ ಕನಕದಾಸರು ಪರಮಾತ್ಮನನ್ನು ತೋರಿಸಿದಂತೆ, ವಾದಿರಾಜರಿಗೆ ವೈಕುಂಠದಾಸರು ಕೇಶವನನ್ನು ತೋರಿಸಿದಂತೆ, ಅಮ್ಮಾ ಈಗ ನೀನು ನನಗೆ ಬಾಲಮುಕುಂದನ ದರ್ಶನಮಾಡಿಸಿದೆ. ನೀನು ದೇವಕಿ, ನೀನು ಕೌಸಲ್ಯೆ, ನೀನು ಅನುಸೂಯೆ, ನೀನೇ ಯಶೋದೆ! ಎಂದು ಅಭಿನಂದಿಸಿದರು. ಅಮ್ಮನು ಕಂದನ ಕಡೆ ಕೈತೋರಿಸಿ ಇವನೇ ನಿಮ್ಮ ಮೂಲರಾಮನೆಂದು ತಾನು ಹಾಡುತ್ತಿದ್ದ—

**ರಾಮ ಶ್ರೀರಘುನಂದನ**
**ಕೌಸಲ್ಯಾರಾಮ** ||ಪ||
**ಮದನಕೋಟಿ ಮೋಹನಾಂಗ**
**ಮಾಧವ ಪುಣ್ಯಚರಿತ ಕರುಣಾಪಾಂಗ**
**ಕದ್ದನವಿಕ್ರಮ ಬಾಹುಧೃತ ಕೋದಂಡ**
**ಸದಾನಂದ ಸುಮತೀಂದ್ರ ಹೃದಯಪಂಕಜ ಭೃಂಗ** ||೧||

ಎಂಬ ಹಾಡನ್ನು ಹಾಡಿ ಕಂದನನ್ನು ಕರೆದಳು. ಹಾತೊರೆದು ಬಂದ ಮುಕುಂದನನ್ನು ಅಪ್ಪಿಕೊಂಡು ದೇವಗೃಹವನ್ನು ಹೊಕ್ಕಳು.

ಮಾರನೆಯ ಪ್ರಾತಃಕಾಲ ತಪ್ತಮುದ್ರಾಂಕನಕ್ಕಾಗಿ ಜನರು ಕಾದಿದ್ದರು. ಅಮ್ಮನು ಬಂದು ಸ್ವಾಮಿಗಳಿಗೆ ನಮಸ್ಕರಿಸಿದಳು. ಸ್ವಾಮಿಾ, ಪೂರ್ವಪುಣ್ಯದಿಂದ ಹರಿಭಕ್ತರ ಮನೆಯಲ್ಲಿ ಹುಟ್ಟಿ, ಹರಿಭಕ್ತರ ಮನೆ ಸೇರಿ, ಶ್ರೀಹರಿಸೇವೆಯಿಂದ ಜನ್ಮವನ್ನು ಕಳೆಯುತ್ತಿರುವೆನು. ತೀರ್ಥಯಾತ್ರೆಗಳನ್ನು

ಮಾಡಿಕಾಣೆ. ದೊಡ್ಡವರ ಸೇವೆ ಜನ್ಮದಲ್ಲಿಲ್ಲ ಅನೇಕ ತೀರ್ಥಯಾತ್ರೆ ಮಾಡಿ ಪಾಮರರನ್ನು ಪುನೀತರನ್ನಾಗಿ ಮಾಡುವವರು ತಾವು. ಅಂಕಿತ ವಿಲ್ಲದ ಕಾಯನಿಷಿದ್ಧವೆಂದು ಪುರಂದರದಾಸರು ಹೇಳಿರುವರು. ವ್ಯಾಸರಾಯರು ಚಕ್ರಾಂಕನಮಾಡಿ ದಾಸರಾಯರನ್ನು ಪಾವನಗೊಳಿಸಿದರು. ದಾಸರ ಪಾದ ರೇಣುವಾದ ನನ್ನನ್ನು ತಾವು ಈಗ ಪಾವನಗೊಳಿಸಬೇಕು, ಎಂದು ಪ್ರಾರ್ಥನೆ ಮಾಡಿದಳು. ಮುದ್ರಾಧಾರಣೆಗೆಂದು ಎರಡು ಕೈಗಳನ್ನು ಚಾಚಿದಳು. ಶ್ರೀಗಳವರು ದೇವಿಯ ಎರಡು ಕೈಗಳ ತುಂಬ ಶಂಖಚಕ್ರಾಂಕನಗಳಿರುವು ದನ್ನು ನೋಡಿ, ಅಮ್ಮಾ ನಿನಗೆ ಶ್ರೀಹರಿಯೇ ಚಕ್ರಾಂಕನ ಮಾಡಿರುವನು. ನಿನ್ನಂಥವಳಿಗೆ ಚಕ್ರಾಂಕನ ಮಾಡುವ ಅಧಿಕಾರ ನಮ್ಮದಲ್ಲ, ನಿನ್ನ ದರ್ಶನ ದಿಂದ ಪಾಮರರ ಮಾತಿರಲಿ, ನಾವು ಸಂತುಷ್ಟರಾದೆವು, ಎಂದು ದೇವಿಯ ಗುಣ ಕಥನಮಾಡಿದರು.

ವಿಜಯೀಂದ್ರ, ಸುಧೀಂದ್ರ, ರಾಘವೇಂದ್ರರಂತೆ ಯೋಗೀಂದ್ರ ಸೂರೀಂದ್ರರುಗಳು ಕುಂಭಕೋಣೆಯಲ್ಲಿ ವಾಸಮಾಡಲಿಲ್ಲ. ಆದ್ದರಿಂದ ಸುಮತೀಂದ್ರರು ಕುಂಭಕೋಣೆಯಲ್ಲಿ ಹೆಚ್ಚುಕಾಲವಿರಲಿಲ್ಲ.

ಸುಮತೀಂದ್ರರು ಮಂತ್ರಶಾಸ್ತ್ರದಲ್ಲಿ ಸುಧಾರಣೆಮಾಡಿ ಸಂಪ್ರದಾಯ ಪ್ರವರ್ತಕರೆಂಬ ಖ್ಯಾತಿಯನ್ನು ಪಡೆದರು. ಪಂಡಿತಾಚಾರ್ಯರ ಉಷಾಹರಣ ಗ್ರಂಥಕ್ಕೆ ಟೀಕೆಯನ್ನು ಬರೆದರು. ಸುಧೀಂದ್ರರು ರಚಿಸಿದ ಅರ್ಥಾಲಂಕಾರ ಶಬ್ದಾಲಂಕಾರಗಳೆಂಬ ಅಲಂಕಾರ ಗ್ರಂಥಗಳಿಗೆ ಮಧುರಧಾರಾ ಎಂಬ ವ್ಯಾಖ್ಯಾನವನ್ನು ರಚಿಸಿದರು. ಪ್ರಮೇಯ ದೀಪಿಕಾ ಎಂಬ ಗ್ರಂಥಕ್ಕೆ ಭಾವ ರತ್ನಕೋಶವೆಂಬ ಟಿಪ್ಪಣಿಯನ್ನು ರಚಿಸಿದರು. ಲಘುಗ್ರಂಥಗಳಲ್ಲಿ ರಾಮದಂಡಕ, ರಾಮತಾರಾವಳಿ, ಯೋಗೀಂದ್ರವಿಜಯ, ಯೋಗೀಂದ್ರ ತಾರಾವಳಿ ಇವು ಮುಖ್ಯವಾದವುಗಳು. ವಿದ್ಯಾನಿಧಿಗಳಾದ ಸುಧೀಂದ್ರರ ಗ್ರಂಥಗಳನ್ನು ವ್ಯಾಖ್ಯಾನ ಮಾಡುವಾಗ ಪ್ರತಿಜ್ಞೆಮಾಡಿದಂತೆ ಹೇಳಿರುವ:—

**ಪ್ರಪಂಚನೇನ ಕಿಂಚನೇತ್ರ ವಂಚನಾವಿಲಂಚನೇ**
**ಮುದಂಚತಾಮುದಂಚತಾ ಮಯಾಂಚಿತಾ ವಿರಿಂಚಿತಾ**
**ತಪಸ್ವಿತಾ ವಿಶ್ಚಿಪತಾಂ ಮಯಾವಿನಾಮಯಾವಿನಾ**
**ಮಲಮ್ಮಲಂಧುನಾತಿ ಕೋವಿನಾಸುಧೀಂದ್ರ ಸೂಕ್ತಿಷು ॥**

ಎಂಬ ಶ್ಲೋಕವು ಸುಮತೀಂದ್ರರಿಗೆ ಗೀರ್ವಾಣ ಭಾಷೆಯಮೇಲಿದ್ದ ಅಧಿಕಾರ ವನ್ನು ತೋರಿಸುತ್ತದೆ.

ಈ ಮಹಾನುಭಾವರು ದೇಶಪರ್ಯಟನ ಮಾಡುತ್ತಿದ್ದು ವಿಜಯೀಂದ್ರರಿಂದ ರಂಗಕ್ಷೇತ್ರದಲ್ಲಿ ಸ್ಥಾಪಿತವಾಗಿದ್ದ ಸ್ವಂತಮಠದಲ್ಲಿ ಕೆಲವುಕಾಲ ವಾಸ ಮಾಡಿದರು. ಆಗ ಉತ್ತರಾದಿ ಮಠದ ಸತ್ಯಪೂರ್ಣ ಸ್ವಾಮಿಗಳವರೂ, ವ್ಯಾಸರಾಯಮಠದ ವಿದ್ಯಾಸಿಂಹಾಸನಾಧೀಶ್ವರರೂ, ಏಕಕಾಲದಲ್ಲಿ ಶ್ರೀರಂಗ ಕ್ಷೇತ್ರಕ್ಕೆ ದಯಮಾಡಿಸಿದರು. ಸುಮತೀಂದ್ರರು ಉಭಯ ಮಠಾಧಿಪರನ್ನೂ ತಮ್ಮ ಮಠದಲ್ಲಿಟ್ಟುಕೊಂಡು ಸತ್ಕರಿಸಿದುದು ಗಂಗಾ ಯಮುನಾ ಸರಸ್ವತೀ ನದಿಗಳ ತ್ರಿವೇಣೀ ಸಂಗಮದಂತಾಯಿತು. ಮೂವರು ಮಠಾಧಿಪತಿಗಳು ಸೇರಿದಮೇಲೆ ಮಾಡುವುದಿನ್ನೇನು ? ನೇರಿಸಿದರು ಮಹಾವಿದ್ವತ್ಸಭೆಯನ್ನು. ದೇಶದೇಶದಿಂದ ವೇದಶಾಸ್ತ್ರ ಪಂಡಿತರು ಬಂದಿಳಿದರು. ಮಠತ್ರಯ ಮತ ತ್ರಯಗಳ ಸಮಾಗಮವಾದ ಸಭೆ ಯಾವುದಾದರಿದ್ದರೆ ಅದು ಸುಮತೀಂದ್ರರು ಸೇರಿಸಿದ ಸಭೆ. ರಂಗಕ್ಷೇತ್ರದಲ್ಲಿ ಶ್ರೀರಂಗದಲ್ಲಿ ಸೇರಿಸಿದ ಸಭೆ. ನಭೂತೋ ನ ಭವಿಷ್ಯತಿ ಎಂಬಂಥಾ ಮಹಾಸಭೆ. ಪಂಡಿತ ಸಭೆಯಲ್ಲಿ ನಡೆಯುವುದಿನ್ನೇನು ? ಸಂದಿಗ್ಧ ಶಾಸ್ತ್ರ ವಿಷಯಗಳ ಜಿಜ್ಞಾಸಾ; ಆದರಿಂದ ತತ್ವನಿರ್ಣಯ; ಮತಭೇದವಿಲ್ಲ, ಮಠಭೇದವಿಲ್ಲ, ವಿದ್ವತ್ಸಭೆಯಲ್ಲಿ. ಮಹತ್ವ ಬರುವುದು ವಿದ್ಯಕ್ಕೆ. ಮಹತ್ವಪಡೆಯುವವರು ವಿದ್ವಾಂಸರು. ಎಲ್ಲರೂ ಪೂಜಿಸುವುದು ಶ್ರೀ ಶಾರದಾಂಬೆಯನ್ನು, ಎಲ್ಲರೂ ಪೂಜಿಸುವುದು ವ್ಯಾಸಭಗವಾನರನ್ನು. ವೇದಾಂತ ವಿಚಾರಬಂದರೆ ಅದ್ವೈತ ಪಂಡಿತರು ದ್ವೈತದಮೇಲೆ ಪೂರ್ವಪಕ್ಷ ಮಾಡುವುದೇ ! ದ್ವೈತ ಪಂಡಿತರು ಅದ್ವೈತದ ಮೇಲೆ ಪೂರ್ವಪಕ್ಷಮಾಡುವುದೇ ! ಶಾಸ್ತ್ರವಿನಿಮಯಮಾಡಿಕೊಂಡು ಅದ್ವೈತಮತೀಯ ಸ್ಮಾರ್ತರು. ದ್ವೈತವನ್ನು ಸಾಧಿಸುವುದೂ, ದ್ವೈತಮತಸ್ಥ ವೈಷ್ಣವರು ಅದ್ವೈತವನ್ನು ಸಾಧಿಸುವುದೂ ಸಾಧಿಸಿದವರಿಗೆ ಸನ್ಮಾನ ಕೊಡುವುದೂ ಆಕಾಲದ ಪದ್ಧತಿ. ಈ ಕ್ರಮದಿಂದ ಬ್ರಹ್ಮಜಿಜ್ಞಾಸೆ ಧರ್ಮಜಿಜ್ಞಾಸೆಗಳು ನಡೆಯುತ್ತಿರುವಾಗ, ದ್ವೈತವೇದಾಂತದ ಮೇಲೆ ಪ್ರಬಲಕೋಟಿಗಳಾದವು. ವಾದಿಸಿದ ಪಂಡಿತರು ಪೂರ್ವಪಕ್ಷ ವಾಕ್ಯಗಳ ಸುರಿಮಳೆ ಮಾಡಿದರು. ಇದು ನಿಗ್ರಹಸ್ಥಾನವೆಂದರು ಸಭೆಯು ಸ್ತಂಭೀಭೂತವಾಯಿತು. ತ್ರಿಮೂರ್ತಿಗಳಂತೆ ಗದ್ದುಗೆಯಲ್ಲಿ

ಕುಳಿತಿದ್ದ ಯತೀಶ್ವರರಿಂದ ಉತ್ತರ ಪಕ್ಷಸಿದ್ಧಾಂತವಾಗಬೇಕಾಯಿತು. ಸತ್ಯ ಪೂರ್ಣರು ವಿದ್ಯಾಸಿಂಹಾಸನಾಧಿಪತಿಗಳನ್ನು ಏನು ಹೇಳುವಿರೆಂದರು. ಅವರು ಪೂರ್ವಪಕ್ಷವನ್ನೇ ಮತ್ತಷ್ಟು ಪುಷ್ಟೀಕರಿಸಿ ಅನುವಾದಮಾಡುವೆವೆಂದರು. ಅಂದಂತೆ ಅನುವಾದ ಮಾಡಿದರು. ಪಂಡಿತರುಗಳು ತಲೆದೂಗಿದರು. ಸುಮತೀಂದ್ರರಾದರೋ, ಆಶ್ರಮ ಜ್ಯೇಷ್ಠರೂ, ವಯೋವೃದ್ಧರೂ ಆದ ಉಭಯ ಯತೀಶ್ವರರೂ ಅನುಮತಿಯಿತ್ತರೆ ಉತ್ತರಪಕ್ಷವನ್ನು ಹೇಳಿ ಸಿದ್ಧಾಂತಮಾಡುವೆವೆಂದರು ಮೇಘಗಂಭೀರ ವಾಕ್ಸರಣಿಯಿಂದ ಸುಮತೀಂದ್ರರು ಮಾಡಿದ ಅನುವಾದವು ಸಿದ್ಧಾಂತವಾಯಿತು. ಸಭೆಯಲ್ಲಿ ಜಯ ಜಯ ನಿನಾದವಾಯಿತು.

ಪರಮಸಂತುಷ್ಟರಾದ ಸತ್ಯಪೂರ್ಣಸ್ವಾಮಿಗಳವರು ತಾವು ಹಾಕಿ ಕೊಳ್ಳುವ ಗದ್ದುಗೆಯನ್ನೇ ಪಾರಿತೋಷಕವೆಂದು ಸುಮತೀಂದ್ರರಿಗೆ ಸಮರ್ಪಿಸಿದರು. ತದಾಪ್ರಭೃತಿ ರಾಘವೇಂದ್ರ ಮಠದಲ್ಲಿ ಎರಡು ಗದ್ದುಗೆಗಳನ್ನು ಹಾಕಿ ಸ್ವಾಮಿಗಳವರು ಸಿಂಹಾಸನಾರೋಹಣ ಮಾಡುವ ಸಂಪ್ರದಾಯವಾಯಿತು.

ಆ ಕಾಲವಲ್ಲಿತ್ತು ಮತಸಹಾನುಭೂತಿ. ಈ ಕಾಲವಲ್ಲಿಲ್ಲ ಮಠಸಹಾನುಭೂತಿ. ಉಡುಪಿಯ ಅಷ್ಟಮಠಗಳ ವಿನಾ, ಮೇಲು ಸೀಮೆಯ ಮಠತ್ರಯಗಳು ಇನ್ನೂ ಒಂದೆಡೆಯಲ್ಲಿ ಸೇರಿಲ್ಲ. ಮಠಾಧಿಪತಿಗಳಿಗಿಂತ ಶಿಷ್ಯರಿಗೆ ಬಂದೊದಗಿದೆ ನನ್ನ ಮಠ ದೊಡ್ಡದು ನಿನ್ನ ಮಠ ಚಿಕ್ಕದು ಎಂಬವಾದ.

ಬೇಲೂರಿನಲ್ಲಿ ರಘುನಾಥಾಚಾರ್ಯರೆಂಬ ಪಂಡಿತರಿದ್ದರು. ನ್ಯಾಯ ವೇದಾಂತ ಶಾಸ್ತ್ರಗಳಮೇಲೆ ಆಚಾರ್ಯರಿಗೆ ಪೂರ್ಣಾಧಿಕಾರ ಮುಕ್ತರಾದ ಶೃಂಗೇರಿ ಸ್ವಾಮಿಗಳ ಗುರುಗಳು ನೃಸಿಂಹಭಾರತಿಗಳು ಬೇಲೂರಿಗೆ ಚಿತ್ತೈಸಿದರು. ಆಚಾರ್ಯರನ್ನು ಕರೆಸಿದರು. ಮಠದ ವಿದ್ವಾಂಸರನ್ನು ದ್ವೈತಪಕ್ಷದಲ್ಲಿ ವಾದ ಮಾಡಿರೆಂದರು. ಆಚಾರ್ಯರನ್ನು ಅದ್ವೈತಪರವಾಗಿ ವಾದಿಸಿರೆಂದರು. ಉಭಯ ಪಂಡಿತರ ವಾಕ್ಯಾರ್ಥಗಳು ದಿನಗಟ್ಟಲೆ ನಡೆದವು. ಆಚಾರ್ಯರ ಪಾಂಡಿತ್ಯಕ್ಕೆ ಮೆಚ್ಚಿ ಜಗದ್ಗುರುಗಳು ಶ್ವೇತಛತ್ರಿ ಮರ್ಯಾದೆಯನ್ನು ಅನುಗ್ರಹಿಸಿದರು. ಈಗ ಇದೆಯೇ ಆ ಸಹಾನುಭೂತಿ, ಆ ವಿದ್ಯಾ ಪಕ್ಷಪಾತ! ದ್ವೈತಾ

ದ್ವೈತ ವಾದಕ್ಕೆ ಪ್ರಾಪ್ತವಾಗಿರುವ ಅಧೋಗತಿಯನ್ನು ಏನೆಂದು ಬಣ್ಣಿಸೋಣ! ಇದು ಇಪ್ಪತ್ತನೇ ಶತಮಾನವೊ ವಿಪತ್ತಿನ ಶತಮಾನವೊ ?

ಸುಮತೀಂದ್ರರು ರಾಮೇಶ್ವರಾದಿ ಪುಣ್ಯಕ್ಷೇತ್ರಗಳ ಯಾತ್ರೆಯನ್ನು ಮತ್ತೆ ಮಾಡಿದರು. ಭೂವೈಕುಂಠವೆನಿಸಿದ ಶ್ರೀರಂಗದಲ್ಲೇ ವೃದ್ಧಾಪ್ಯವನ್ನು ಕಳೆದರು. ಮಹನೀಯರು ಸಂಸ್ಥಾನ ಪಾಲನೆಮಾಡಿದ ಮೂವತ್ತುಮೂರು ವರ್ಷಗಳೂ ಮಹೋತ್ಸವದ ದಿನಗಳಾದವು. ಅಂಥವರ ಪುಣ್ಯ ದಿನವೂ ಶಾಲಿವಾಹನ ೧೬೪೭ನೇ ವಿಶ್ವಾವಸು ಸಂವತ್ಸರ ಆಷಾಢ ಬಹುಳೈಕಾದಶಿ ಯೆಂದರೆ ಯಾರ ಏಕಾದಶೇಂದ್ರಿಯವು ಸುಮತೀಂದ್ರಮಯವಾಗುವುದಿಲ್ಲ ?



# ೧೩. ಧೀರೇಂದ್ರರು.

ಶ್ರೀರಾಘವೇಂದ್ರಮಠ ಪೀಳಿಗೆಯಲ್ಲಿ ಅತ್ಯಂತ ಪ್ರಸಿದ್ಧರಾದ ಮತ್ತೊಬ್ಬರ ಹೆಸರನ್ನು ಹೇಳಬೇಕೆಂದರೆ ಅದು ಧೀರೇಂದ್ರರದು. ರಾಘವೇಂದ್ರ ಸ್ವಾಮಿಗಳವರ ಕಾಲದಿಂದ ಶ್ರೀಮಠದ ಪೀಠಾರೋಹಣ ಮಾಡುವ ಭಾಗ್ಯ ವಿಶೇಷತಃ ಗೌತಮಗೋತ್ರದವರಿಗೇ ಲಭಿಸಿರುವುದು, ಗೌತಮ ಮುನಿಗಳ ಪುಣ್ಯಪ್ರಭಾವವಾಗಿದೆ. ಗೌತಮರು – ವಶಿಷ್ಠವಿಶ್ವಾಮಿತ್ರರುಗಳಂತೆ ಋಷಿ ಮಂಡಲದಲ್ಲಿ ಖ್ಯಾತಿಪಡೆದ ಶಕ ಪುರುಷರು. ಸಂಸ್ಕೃತದಲ್ಲಿ ನ್ಯಾಯಶಾಸ್ತ್ರ ವೆಂದಕೂಡಲೇ ಶಾಸ್ತ್ರಪ್ರವರ್ತಕರು ಗೌತಮರೆಂಬುವುದು ಸ್ಮೃತಿಪಥಕ್ಕೆ ಬರದಿರುವುದಿಲ್ಲ. ಬ್ರಾಹ್ಮಣಾದಿ ತ್ರೈವರ್ಣಿಕರು ಈ ಮಹನೀಯರ ಹೆಸರನ್ನು ಸ್ಮರಿಸದೆ ತಮ್ಮ ನಿತ್ಯಕರ್ಮವನ್ನು ಮುಗಿಸಲು ಸಾಧ್ಯವಿಲ್ಲ.

ಇಂಥಾ ಗೌತಮರ ವಂಶದಲ್ಲಿ ಜನಿಸಿದವರು ಶ್ರೀರಾಘವೇಂದ್ರರು. ರಾಘವೇಂದ್ರರ ಪೂರ್ವಾಶ್ರಮದ ಮಕ್ಕಳು ಲಕ್ಷ್ಮೀನಾರಾಯಣಾಚಾರ್ಯರು. ಇವರ ಮಕ್ಕಳು ಪುರುಷೋತ್ತಮಾಚಾರ್ಯರು, ಇವರ ಮಕ್ಕಳು ಶ್ರೀನಿವಾಸಾ ಚಾರ್ಯರು. ರಾಘವೇಂದ್ರರು ಬೃಂದಾವನ ಪ್ರವೇಶಮಾಡಿದ ಅರವತ್ತು ವರ್ಷ ಗಳೊಳಗಾಗಿ ಈ ಮೂವರಿಂದ ಗೌತಮಗೋತ್ರ ಬೆಳೆದು, ಒಬ್ಬೊಬ್ಬರೂ ಮಹಾಪಂಡಿತರೆನಿಸಿ, ಯಜ್ಞಾದಿಕರ್ಮಗಳೆನ್ನೆಸಗಿ ಪರಮ ಪ್ರಖ್ಯಾತರಾದರು. ಶ್ರೀನಿವಾಸಾಚಾರ್ಯರಿಗೆ ಶ್ರೀನಿವಾಸಾಧ್ವರಿಯೆಂದು ಆ ಕಾಲದ ರೂಢಿಯ ಹೆಸರಾಗಿತ್ತು. ಶ್ರೀನಿವಾಸಧ್ವರಿಗಳಿಗೆ ಶಾಲೀವಾಹನ ಶಕ ೧೬೫೦ನೇ ಕೀಲಕ ಸಂವತ್ಸರದಲ್ಲಿ ಉಪೇಂದ್ರತೀರ್ಥರಿಂದ ಸಂಸ್ಥಾನಾಧಿಪತ್ಯ ದೊರೆಯಿತು· ವಾದೀಂದ್ರರೆಂದು ನಾಮಕರಣವಾಯಿತು. ವಾದೀಂದ್ರರು ತತ್ವೋದ್ಯೋತ ಮೊದಲಾದ ಗ್ರಂಥಗಳಿಗೆ ಟಿಪ್ಪಣಿಗಳನ್ನು ಬರೆದರು. ವಾದೀಂದ್ರರು ಬರೆದ ಗುರುಗುಣಸ್ತವವೆಂಬ ಮೂವತ್ತಾರು ಶ್ಲೋಕಗಳುಳ್ಳ ಚಿಕ್ಕ ಗ್ರಂಥವನ್ನು ಓದಿದರೆ ಎಷ್ಟು ದೊಡ್ಡ ಸಾಹಿತಿಗಳಿವರೆಂದು ಗೊತ್ತಾಗುತ್ತದೆ. ಈ ಮಹಾನು ಭಾವರು ಸುಮಾರು ಇಪ್ಪತ್ತೆರಡು ವರ್ಷ ಸಂಸ್ಥಾನ ಪಾಲನೆಮಾಡಿ, ಮಂತ್ರಾ ಲಯದಲ್ಲಿ ರಾಘವೇಂದ್ರಸ್ವಾಮಿಗಳ ಪಕ್ಕದಲ್ಲೇ ಬೃಂದಾವನಸ್ಥರಾದರು.

ಮಂತ್ರಾಲಯದಲ್ಲಿ ಸೇವೆಮಾಡುವ ಅನೇಕ ಭಕ್ತರಿಗೆ ಇಬ್ಬಿಬ್ಬರು ಸ್ವಾಮಿಗಳು ಸ್ವಪ್ನದಲ್ಲಿ ದರ್ಶನ ಕೊಡುವುದು, ರಾಘವೇಂದ್ರರಿಗೆ ವಾದೀಂದ್ರರ ಮೇಲಿರುವ ಪರಮಾನುಗ್ರಹದ ಕುರುಹು. ರಾಘವೇಂದ್ರರಿಗೆ ನಡೆಯುವ ಸೇವೆಗಳು ತಪ್ಪದೆ ವಾದೀಂದ್ರರಿಗೂ ನಡೆಯುವುದು ರಾಘವೇಂದ್ರಸ್ವಾಮಿಗಳ ವರ ಅಪ್ಪಣೆಯಿಂದಲೇ.

ಇಂಥಾ ವಾದೀಂದ್ರರ ಪೂರ್ವಾಶ್ರಮದ ಮಕ್ಕಳು ಜಯರಾಮಾಚಾರ್ಯರು. ಚತುಶ್ಶಾಸ್ತ್ರ ಪಂಡಿತರು. ಮಂತ್ರಶಾಸ್ತ್ರದಲ್ಲಿ ಶ್ರೌತದಲ್ಲಿ ಆ ಕಾಲದಲ್ಲಿ ಇವರ ಸಮಾನರೇ ಇರಲಿಲ್ಲ. ವಾದೀಂದ್ರರಿಂದ ಪಟ್ಟಾಭಿಷಿಕ್ತರಾದ ವಸುಧೇಂದ್ರರಿಂದಲೇ ಜಯರಾಮಾಚಾರ್ಯರಿಗೆ ಆಶ್ರಮವಾಯಿತು. ಧೈರ್ಯಾದಿಗುಣ ಸಂಪನ್ನರಾಗಿದ್ದ ಕಾರಣ ಧೀರೇಂದ್ರರೆಂದು ಹೆಸರಾಯಿತು.

ಪ್ರಯಾಣ ಸೌಕರ್ಯಗಳಿಲ್ಲದಿದ್ದ ಆ ಕಾಲದಲ್ಲಿ ರಾಘವೇಂದ್ರ ಮಠದಲ್ಲಿ ಮಾತ್ರವಲ್ಲದೆ ಇತರ ಮಠಗಳಲ್ಲೂ ಇಬ್ಬಿಬ್ಬರು ಪೀಠದಲ್ಲಿದ್ದು ಧರ್ಮ ಪ್ರಚಾರ ಮಾಡಬೇಕಾದ ಆವಶ್ಯಕತೆಯಿರುತ್ತಿತ್ತು. ಈ ನಿಮಿತ್ತದಿಂದ ಅನೇಕ ಸಮಯಗಳಲ್ಲಿ ದೊಡ್ಡವರು ಚಿಕ್ಕವರನ್ನು ದೇಶಪರ್ಯಟನೆಗಾಗಿ ಕಳುಹಿಸುತ್ತಿದ್ದರು. ಒಬ್ಬ ಸ್ವಾಮಿಗಳ ನಿರ್ಯಾಣಕಾಲದಲ್ಲೇ ಮತ್ತೊಬ್ಬರಿಗೆ ಆಶ್ರಮಕೊಡಬೇಕೆಂಬ ಸಂಪ್ರದಾಯ ಆಗ ಹುಟ್ಟಿರಲಿಲ್ಲ.

ಧೀರೇಂದ್ರರು ದೇಶಪರ್ಯಟನಮಾಡುತ್ತಾ ವರದಾ ತೀರದಲ್ಲಿ ಹೊಸರಿತ್ತಿಯೆಂದು ಕರೆಸಿಕೊಳ್ಳುತ್ತಿರುವ ವೃತ್ತಿಗ್ರಾಮಕ್ಕೆ ದಯಮಾಡಿದರು. ಆ ಕಾಲದಲ್ಲಿ ಆ ಪ್ರಾಂತ್ಯದಲ್ಲಿ ಕಾಪಾಲಿಕರ ಮತ್ತು ಕ್ಷಪಣಕರ ಹಾವಳಿ ಬಲವಾಗಿತ್ತು. ಸಜ್ಜನರು ಸುಖದಿಂದ ಜೀವಿಸುವುದು ಕಠಿಣವಾಗಿತ್ತು. ಕ್ಷುದ್ರ ಸಿದ್ಧಿಗಳ ಬಲದಿಂದ ಅಜ್ಞ ಜನರನ್ನವರು ಬಲುರೀತಿಯಿಂದ ವಂಚಿಸುತ್ತಿದ್ದರು. ಸುಂದರ ಸ್ತ್ರೀಯರು ಮಾನವಂತರಾಗಿ ಬಾಳುವುದು ಕಠಿಣವಾಗಿತ್ತು. ಧೀರೇಂದ್ರರು ಮಂತ್ರಸಿದ್ಧರೆಂಬ ಪ್ರಸಿದ್ಧಿಯಿದ್ದುದರಿಂದಲೂ, ವರ್ಣಾಶ್ರಮ ಧರ್ಮಗಳನ್ನು ಪೋಷಿಸಿ ಸಾತ್ವಿಕ ಭಗವದುಪಾಸನಾ ಮಾರ್ಗಗಳನ್ನುಪದೇಶಿಸುತ್ತಿದ್ದುದರಿಂದಲೂ, ಬಲು ಜನರು ಇವರನ್ನಾಶ್ರಯಿಸಿ ಶಿಷ್ಯರಾದರು. ವಾಮಾಚಾರಿಗಳು ಧೀರೇಂದ್ರರಿಂದ ತಮ್ಮ ಪ್ರಾಬಲ್ಯ ಕಡಮೆಯಾದುದನ್ನು ನೋಡಿ, ಅವರನ್ನು ಕೊಲ್ಲಬೇಕೆಂದು ಅನೇಕ ಚಾಟುತಂತ್ರ

ಗಳನ್ನೆಸಗಿದರು. ಒಂದೊಂದು ತಂತ್ರವೂ ಪ್ರತಿಕ್ರಿಯೆಯಾಗಿ ಪರಿಣಮಿಸಲು ಆ ಜನರು ಧೀರೇಂದ್ರರೊಡನೆ ವಾದಕ್ಕೆ ಬಂದರು. ವಾದದಲ್ಲಿ ಅವರಿಗೆ ಜಯವಾಗಲಿಲ್ಲ. ಕ್ಷುದ್ರದೇವತಾ ಮಂತ್ರತಂತ್ರಗಳು ಫಲಿಸಲಿಲ್ಲ. ಪೈಶಾಚಿಕ ತಂತ್ರಗಳು ಕುತಂತ್ರಗಳೆನಿಸಿದವು. ಕಡೆಗೆ ಆ ಜನರು ಶರಣಾಗತರಾದರು. ಈ ಕಾರಣದಿಂದ ಧೀರೇಂದ್ರರರ ಖ್ಯಾತಿ ಹೆಚ್ಚಿತು. ರಿತ್ತಿಯಲ್ಲೇ ಧೀರೇಂದ್ರರ ವಾಸಕ್ಕೆ ಮಠಮೊದಲಾದವುಗಳಾದವು. ಅಲ್ಲೇ ಪಾಠಪ್ರವಚನಗಳು ನಡೆದು ಬಲುಮಂದಿ ಪಂಡಿತೋತ್ತಮರೆನಿಸಿದರು.

ಮೇಲ್ಕಂಡ ಕಾರಣಗಳಿಂದ ಧೀರೇಂದ್ರರಿಗೂ ವಸುಧೇಂದ್ರರಿಗೂ ಮರು ಭೇಟಿಯಾಗಲಿಲ್ಲ. ವಸುಧೇಂದ್ರರು ಹನ್ನೊಂದು ವರ್ಷಗಳಷ್ಟು ಕಾಲ ಸಂಸ್ಥಾನವಾಳಿ ತಮ್ಮ ಅವಸಾನ ಕಾಲದಲ್ಲಿ ಬಲರಾಮಾಚಾರ್ಯರೆಂಬುವರಿಗೆ ಆಶ್ರಮಕೊಟ್ಟು ವರದೇಂದ್ರರೆಂಬುದಾಗಿ ನಾಮಕರಣ ಮಾಡಿದರು. ವರದೇಂದ್ರರು ಪುಣೆಯ ಶ್ರೀಮಂತರ ಆದರಾಶ್ರಯಪಡೆದು ಆ ವಿದ್ವನ್ನಗರಿಯಿಂದ ದಕ್ಷಿಣ ಪ್ರಾಂತ್ಯಕ್ಕೆ ಬರಲಿಲ್ಲ. ಧೀರೇಂದ್ರರಿಗಾದರೊ—ಬಹುಕಾಲ ರಿತ್ತಿಯಲ್ಲಿ ವಾಸಮಾಡಿದುದರಿಂದ ಕಾಪಾಲಿಕಕ್ಷಪಣಕದುರ್ಮತಾನುಯಾಯಿಗಳ ಹಾವಳಿಯಿಂದ ಸಜ್ಜನರನ್ನು ಉದ್ಧರಿಸಿ, ದುಷ್ಟನಿಗ್ರಹ ಮಾಡಿದೆವೆಂಬ ತೃಪ್ತಿಯಾಯಿತು. ತೀರ್ಥಯಾತ್ರಾ ವ್ಯಾಜದಿಂದ ಪುಣ್ಯಪಟ್ಟಣ (ಪೂನಾ) ಮೊದಲಾದ ವಿದ್ವತ್ಕೇಂದ್ರಗಳನ್ನು ನೋಡಬೇಕೆಂಬ ಅಭಿಲಾಷೆಯುಂಟಾಯಿತು. ವರದೇಂದ್ರರು ಪುಣೆಯಲ್ಲಿರುವರೆಂಬುವ ವರ್ತಮಾನವೂ ತಿಳಿಯಿತು.

ಧೀರೇಂದ್ರರು ಪುಣ್ಯಪಟ್ಟಣವನ್ನು ಪ್ರವೇಶಿಸಿದಾಗ ಶ್ರೀಮಂತರ ದರ್ಬಾರಿನಲ್ಲಿ ವಿದ್ವತ್ಪರೀಕ್ಷೆ ನಡೆಯುತ್ತಿತ್ತು. ಮತತ್ರಯಗಳ ಪಂಡಿತರು ಒಂದೊಂದು ಶಾಸ್ತ್ರದಲ್ಲೂ ವಾಕ್ಯಾರ್ಥ ನಡೆಸುತ್ತಿದ್ದರು, ಸಂಸ್ಥಾನಾಧಿಪತಿಗಳಾಗಿದ್ದುದರಿಂದ ಅಧ್ಯಕ್ಷಸ್ಥಾನವು ವರದೇಂದ್ರರದಾಗಿತ್ತು. ವರದೇಂದ್ರರಿಗೆ ಧೀರೇಂದ್ರರ ಸಮಾಗಮದಿಂದ ದೊಡ್ಡ ಬೆಂಬಲ ದೊರೆತಂತಾಯಿತು. ಅಧ್ಯಕ್ಷರು ಸಿದ್ಧಾಂತ ಮಾಡುತ್ತಿದ್ದ ವಾಕ್ಯಾರ್ಥದಲ್ಲಿ ವಾದಮಾಡಿದ ಪಂಡಿತರು ಪುನಃಪುನಃ ಪ್ರವೇಶಿಸುತ್ತಿರುವುದನ್ನು ನೋಡಿ ಧೀರೇಂದ್ರರು ಅಧ್ಯಕ್ಷರ ಸಿದ್ಧಾಂತವನ್ನು ಪುಷ್ಟೀಕರಿಸುವೆವೆಂದು, ಉಭಯ ಪಕ್ಷಗಳ ಪೂರ್ವೋತ್ತರ ಪಕ್ಷಗಳನ್ನೂ ಅನುವಾದಿಸಿದರು. ಪಂಡಿತರುಗಳು ತೃಪ್ತರಾದರು. ಶ್ರೀಮಂತರು

ತಲೆದೂಗಿದರು. ವರದೇಂದ್ರರು ಧೀರೇಂದ್ರರ ಸಿದ್ಧಾಂತವೇ ತಮ್ಮ ಸಿದ್ಧಾಂತವೆಂದು ಅನುಮೋದಿಸಿದರು. ಧೀರೇಂದ್ರರ ಆಗಮನದಿಂದ ಸಭೆಗೆ ಹೊಸ ಕಳೆ ಬಂದಿತು. ಎಲ್ಲರ ಕಣ್ಣು ಧೀರೇಂದ್ರರ ಕಡೆಗೆ ತಿರುಗಿತು. ಶ್ರೀಮಂತರು ನೂತನ ಯತಿಗಳ್ಯಾರೆಂದು ಪ್ರಶ್ನೆಮಾಡಿದರು. ವರದೇಂದ್ರರಾದರೋ— ಈ ಧೀರೇಂದ್ರರು ನಮ್ಮ ಪೀಠದಲ್ಲಿ ಕೂಡಬೇಕಾಗಿದ್ದವರು. ನಮಗಿಂತ ಮೊದಲೇ ಮಹಾಪೀಠಕ್ಕೆಂದು ಆಶ್ರಮ ಸ್ವೀಕಾರಮಾಡಿದ್ದವರು. ನಮ್ಮ ಗುರುಗಳ ನಿರ್ಯಾಣಕಾಲದಲ್ಲಿವರು ದೂರ ದೇಶದಲ್ಲಿದ್ದ ಕಾರಣ, ಪರಸ್ಪರ ವರ್ತಮಾನ ತಿಳಿಯದಿದ್ದ ಕಾರಣ, ನಮ್ಮ ಪೂರ್ವ ಪುಣ್ಯ ಬಲಿಷ್ಠವಾಗಿದ್ದ ಕಾರಣ, ನಾವು ಈ ಪೀಠದ ಮೇಲೆ ಕೂಡಬೇಕಾಯಿತು. ಧೀರೇಂದ್ರರು ಈಗ ಅಲ್ಲಿ ಕೂಡ ಬೇಕಾಯಿತು. ಇಷ್ಟೇ ಎಂದರು. ಅನಂತರ ನಡೆದ ಸಭೆಗಳಲ್ಲೆಲ್ಲಾ ಧೀರೇಂದ್ರರ ಖ್ಯಾತಿ ಹಬ್ಬಲೆಂದು ವರದೇಂದ್ರರು ಅವಕಾಶ ಕಲ್ಪಿಸಿಕೊಟ್ಟರು.

ಶ್ರೀಮಂತರು ಧೀರೇಂದ್ರರನ್ನು ಬಲು ರೀತಿಯಿಂದ ಸನ್ಮಾನಿಸಿದರು. ವರದೇಂದ್ರರ ನಂತರ ಧೀರೇಂದ್ರರೇ ಈ ಮಹಾ ಪೀಠದಲ್ಲಿ ಕುಳಿತು ಮಠ ರಾಜ್ಯಭಾರ ಮಾಡಬೇಕೆಂದು ನಿರ್ಣಯ ಮಾಡಿದರು ಅನಂತರ ಧಿರೇಂದ್ರರು ಸಕಲ ತೀರ್ಥಕ್ಷೇತ್ರಗಳ ಯಾತ್ರೆಮಾಡಿ ಪುನಃ ರಿತ್ತಿಗೇ ಬಂದು ನೆಲೆಸಿದರು. ಆ ಕಾಲದಲ್ಲಿ ವರದೇಂದ್ರರು ಎಲ್ಲಿ ಸಂಚರಿಸಿದರೂ ಮತ್ತೆಮತ್ತೆ ಪುಣೆಯಲ್ಲೇ ಬಂದು ಸೇರುತ್ತಿದ್ದರು. ಇದಕ್ಕೆ ವಿದ್ಯಾಭಿಮಾನಿಗಳಾದ ಶ್ರೀಮಂತರಿಗಿದ್ದ ಶ್ರೀ ಮಠದ ಮೇಲಣ ಭಕ್ತಿಯೇ ಕಾರಣ.

ವರದೇಂದ್ರರ ಅವಸಾನ ಕಾಲದಲ್ಲೂ ಸಂಸ್ಥಾನವನ್ನು ವಹಿಸಿಕೊಳ್ಳಲು ಧೀರೇಂದ್ರರು ಪುಣೆಗೆ ಬರಲಿಲ್ಲ. ಒಬ್ಬರ ವರ್ತಮಾನ ಮತ್ತೊಬ್ಬರಿಗೆ ತಿಳಿಯಲಿಲ್ಲ, ಧೀರೇಂದ್ರರ ದಾಯಾದರೂ, ಧೀರೇಂದ್ರರಲ್ಲೇ ವಿದ್ಯಾಭ್ಯಾಸ ಮಾಡಿದವರೂ, ಮತ್ತು ಆಸ್ಥಾನ ಪಂಡಿತರೂ ಆಗಿದ್ದ ಲಕ್ಷ್ಮೀನಾರಾಯಣಾಚಾರ್ಯರೆಂಬುವರಿಗೆ, ವರದೇಂದ್ರರು ಪುಣೆಯಲ್ಲಿ ಶಾಲೀವಾಹನಶಕ ೧೭೦೭ ನೇ ವಿಶ್ವಾವಸೂ ಸಂವತ್ಸರದಲ್ಲಿ ಸಂಸ್ಥಾನವನ್ನೊಪ್ಪಿಸಿ ಭುವನೇಂದ್ರರೆಂಬದಾಗಿ ಕರೆದರು. ಇದಾದ ನಂತರ ಧೀರೇಂದ್ರರು ಪುಣೆಗೆ ಬಂದರು. ಶ್ರೀಮಂತರು ಕೆಲಸ ಕೈಮೀರಿತೆಂದು ಚಿಂತಿಸಿದರು. ಭುವನೇಂದ್ರರು ತಮ್ಮ ವಿದ್ಯಾ ಗುರುಗಳೂ ಆಶ್ರಮದಲ್ಲಿ ತಮ್ಮ ಗುರುಗಳಿಗಿಂತ ಜ್ಯೇಷ್ಠರೂ ಆದ

ಧೀರೇಂದ್ರರಿಗೇ ಸಂಸ್ಥಾನವನ್ನೊಪ್ಪಿಸಿ ಕೆಲವುಕಾಲ ಅವರಲ್ಲಿ ಅವಶಿಷ್ಟವಾಗಿದ್ದ ಸರ್ವಜ್ಞ ಶಾಸ್ತ್ರಾಧ್ಯಯನವನ್ನು ಮಾಡಿದರು. ಶಿಷ್ಯರಲ್ಲಿ ಸುಪ್ರೀತರಾದ ಧೀರೇಂದ್ರರು ಕೆಲವುಕಾಲ ಮೂಲರಾಮರ ಪೂಜೆಮಾಡಿದ್ದೇ ಸಾಕೆಂದು ಪುನಃ ಭುವನೇಂದ್ರರಿಗೆ ಸಂಸ್ಥಾನಾಧಿಪತ್ಯವನ್ನು ವಹಿಸಿ, ತಮ್ಮ ಅಭಿಮಾನ ಸ್ಥಳವಾಗಿದ್ದ ರಿತ್ತಿಗೆ ಪ್ರಯಾಣ ಮಾಡಿದರು

ಆದುದರಿಂದ ಧೀರೇಂದ್ರರು ಸಂಸ್ಥಾನ ಪೀಳಿಗೆಗೆ ಸೇರಲಿಲ್ಲವೆಂಬುದಕ್ಕಾಗಲಿ, ಬಿಡಿ ಸನ್ಯಾಸಿಗಳೆಂದು ಭಾವಿಸುವುದಕ್ಕಾಗಲಿ ಕಾರಣವಿರುವುದಿಲ್ಲ. ಜನ್ಮದಾತರಾದ ವಾದೀಂದ್ರರಿದ್ದ ಕಾಲದಲ್ಲಿ, ಯಾವುದೋ ಕಾರಣಕ್ಕಾಗಿ ಇನ್ನೂ ವೈರಾಗ್ಯ ಹುಟ್ಟಲಿಲ್ಲವೇ ಎಂದು ಕೇಳಿದ ಮಾತು ಧೀರೇಂದ್ರರ ಮನಸ್ಸಿನಲ್ಲಿ ಮಂತ್ರದಂತೆ ನಿಂತು ಬಿಟ್ಟಿತ್ತು. ಅಧಿಕಾರಲಾಲನೆ ಧೀರೇಂದ್ರರಿಗೆ ಇರಲಿಲ್ಲ.

ಆ ಕಾಲದಲ್ಲಿ ಅತ್ಯಂತ ಪ್ರಸಿದ್ಧರಾಗಿದ್ದ ಜಗನ್ನಾಥದಾಸರು ಧೀರೇಂದ್ರರ ಧೀರತನಕ್ಕೆ ಮೆಚ್ಚಿ ರಿತ್ತಿಗೆ ಬಂದರು. ದಾಸರ ಶಿಷ್ಯರಾದ ಕರ್ಜಗಿಯ ಶ್ರೀದ ವಿಠಲದಾಸರೂ ಸೇರಿದರು. ಮಹಾ ಜ್ಞಾನಿಗಳಾದ ಯತಿಗಳೂ ಹರಿದಾಸರೂ ಸೇರಿತೆಂದರೆ ಸುವರ್ಣಕ್ಕೆ ಸುವಾಸನೆ ಕೊಟ್ಟಂತೆ. ವ್ಯಾಸರಾಯರೊಡನೆ ಪುರಂದರ ಕನಕದಾಸರುಗಳು ಕಲೆತೊಡನೆ ನಡೆದುಹೋದ ಅನುಭವಗಳನ್ನು ಹಾಡುಗಳಾಗಿ ಹಾಡಿಬಿಟ್ಟರು. ವಾದಿರಾಜರೊಡನೆ ವೈಕುಂಠದಾಸರು ಕಲೆತ ಕೂಡಲೇ ಬೇಲೂರ ಚನ್ನಿಗನು ಭಾಗವತದ ಬಾಲಗೋಪಾಲನಾದನು. ವ್ಯಾಸ ತತ್ವಜ್ಞರೂ, ಗೋಪಾಲದಾಸರೂ ಕಲೆತು ವೇಣೀ ಸೋಮಪುರವನ್ನು ಗೋಕುಲ ಮಧುರಾ ದ್ವಾರಕಕ್ಷೇತ್ರಗಳಿಗಿಂದಧಿಕವೆಂದೆನಿಸಿಬಿಟ್ಟರು.

ಜಗನ್ನಾಥದಾಸರು ರಿತ್ತಿಯಲ್ಲಿದ್ದಾಗಲೇ ಹರಿಕಥಾಮೃತಸಾರವನ್ನು ಬರೆದರೆಂಬ ಪ್ರಸಿದ್ಧಿಯಿದೆ. ಜಗನ್ನಾಥದಾಸರು ಪದ್ಯಗಳನ್ನು ಬರೆಯಬೇಕು. ಕರ್ಜಗಿದಾಸರು ಪದ್ಯವನ್ನು ವಿನ್ಯಾಸಮಾಡಿ ಹಾಡಬೇಕು. ಧೀರೇಂದ್ರರು ಅರ್ಥಾನುವಾದ ಮಾಡಬೇಕು. ಈ ದಾಸಬೋಧ ಸಚ್ಛಾಸ್ತ್ರಗಳ ಮೇಲಣ ಕ್ರೋಡಪತ್ರಗಳೆನಬೇಕು. ಈಗಲೂ ಜಗನ್ನಾಥದಾಸರಿದ್ದ ಮನೆಯಿದೆ. ಇದಿದೇ

ಸ್ಥಳದಲ್ಲಿ ಧೀರೇಂದ್ರರೂ ದಾಸರೂ ಕೊಡುತ್ತಿದ್ದರೆಂದು ತೋರಿಸುವವರಿದ್ದಾರೆ. ಪುಣ್ಯಶ್ಲೋಕರ ನಾಮಸ್ಮರಣೆಯಿಂದ ಕಂಬನಿಗರೆಯುವವರಿದ್ದಾರೆ.

ಧೀರೇಂದ್ರರು ರಚಿಸಿದ ಗ್ರಂಥಗಳಲ್ಲಿ ಮನ್ಯುಸೂಕ್ತವ್ಯಾಖ್ಯಾನ, ನಾರಾಯಣಪನ್ನ ವ್ಯಾಖ್ಯಾನ ಇನ್ನೂ ಕೆಲವು ಋಙ್ಮಂತ್ರ ವ್ಯಾಖ್ಯಾನಗಳು ಉಪಲಬ್ಧವಾಗಿವೆ.

ಧೀರೇಂದ್ರರ ಚರಿತ್ರೆಯು ಎಷ್ಟೇ ಕಣ್ಮರೆಯಾಗಿದ್ದರೂ ಅವರ ಬೃಂದಾವನದಲ್ಲಿ ನಡೆಯುತ್ತಿರುವ ಮಹಿಮೆಗಳನ್ನು ನೋಡಿದರೆ, ಅವುಗಳನ್ನೇ ಸಂಗ್ರಹಿಸಿ ಬರೆದಿಡಬೇಕೆಂಬ ಉತ್ಸಾಹವುಂಟಾಗುತ್ತದೆ ಮಂತ್ರಾಲಯದಲ್ಲಿ ಹೇಗೋ ಹಾಗೆ ಧೀರೇಂದ್ರರ ಸನ್ನಿಧಿಯಲ್ಲೂ ಭಕ್ತಜನರು ಸೇವಿಸಿ ಇಷ್ಟಾರ್ಥ ಪಡೆಯುತ್ತಾರೆ. ಮಂತ್ರಾಲಯದಲ್ಲಿ ಸೇವೆಮಾಡಿದ ಭಕ್ತರನೇಕರಿಗೆ ರಿತ್ತಿಗೆ ಹೋಗಿ ಧೀರೇಂದ್ರರಲ್ಲಿ ಸೇವೆಮಾಡೆಂದು ಸ್ವಪ್ನ ಸೂಚನೆಯಾಗುತ್ತದೆ. ಹಾಗೆ ಬಂದವರನೇಕರಿಗೆ ಒಂದೇ ಸಪ್ತಕ ಸೇವೆಯಲ್ಲಿ ಇಷ್ಟಾರ್ಥಗಳಾದ ಉದಾಹರಣೆಗಳಿವೆ. ಒಂದೇ ಒಂದು ಉದಾಹರಣೆಯನ್ನು ಕೊಟ್ಟರೂ ಅದು ಹೀಗಿದೆ.

ಧಾರವಾಡದಲ್ಲಿ ಒಬ್ಬ ನಿವೃತ್ತಾಧಿಕಾರಿಗಳು. ಅವರಿಗೆ ನಾಲ್ವರು ಮಕ್ಕಳು. ಒಬ್ಬರು ವಿದ್ಯಾಖಾತೆಯಲ್ಲಿ ದೊಡ್ಡ ಅಧಿಕಾರಮಾಡಿ ನಿವೃತ್ತರಾದವರು, ಒಬ್ಬರು ಖಾಸಿಗೀ ಡಾಕ್ಟರು, ಒಬ್ಬರು ಮುಂಬೈ ಇಲಾಖೆಯಲ್ಲಿ ದೊಡ್ಡ ಅಧಿಕಾರಿಗಳು, ಮತ್ತೊಬ್ಬರು ವಕೀಲರು. ಈ ನಾಲ್ವರಲ್ಲಿ ಮೂರನೆಯವರು ನನ್ನ ಮನಸ್ಸಿನ ಮಿತ್ರರು, ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದವರು. ಇವರಿಗೆ ಇದ್ದಕ್ಕಿದ್ದ ಹಾಗೆ ಸ್ಮರಣಶಕ್ತಿ ಕಡಿಮೆಯಾಯಿತು. ಮಾತು ಮನಬಂದಂತೆ ಬರಲಾರಂಭಿಸಿತು. ಜನರ ಗುಂಪಿನಲ್ಲಿ ಇವರು ಸೇರದಂತಾದರು. ದೊಡ್ಡ ಅಧಿಕಾರ ಮಾಡುತ್ತಿದ್ದ ಮಗನಗತಿ ಹೀಗಾಯಿತೆಂದು ತಂದೆಗೆ ಬಹಳ ವ್ಯಸನವಾಯಿತು. ಪಾಣಿಗೃಹೀತಿಯು ಕಣ್ಣೀರಿನಿಂದ ಕೈತೊಳೆದಳು. ದಂಪತಿಗಳು ರಿತ್ತಿಗೆ ಬಂದು ಧೀರೇಂದ್ರರ ಸೇವೆಮಾಡಿದರು. ಕೆಲವು ತಿಂಗಳ ಸೇವಾನಂತರ ಶುಭಸೂಚನೆಯಾಯಿತು. ನನ್ನ ಮಿತ್ರರು ಮೊದಲಿನ ಆರೋಗ್ಯವನ್ನು ಪಡೆದರು. ಪುನಃ ತಮ್ಮ ಅಧಿಕಾರಕ್ಕೆ ನೇರಿ ಮೇಲ್ಪಟ್ಟವರಿಂದ ಸರಿಸರಿಯೆನಿಸಿಕೊಂಡರು. ಈಗ ಇವರು ಒಂದು ಸಾವಿರ ರೂಪಾಯಿ ಸಂಬಳದಲ್ಲಿದ್ದಾರೆ. ನಾಲ್ಕಾರು

ತಿಂಗಳಲ್ಲಿ ಸಾವಿರದೈನೂರರ ದರ್ಜೆಗೇರುವುದರಲ್ಲಿದ್ದಾರೆ. ಮತ್ತೆ ಇವರ ಮಗನದೂ ಒಂದು ಸಮಸ್ಯೆಯಾಯಿತು. ಒಂದು ಚುಕ್ಕೆಯಂತೆ ತೋರಿದ ಶ್ವೇತವು ದೊಡ್ಡದಾಗುತ್ತ ಬಂತು ಧೀರೇಂದ್ರರ ಸೇವೆಯಿಂದಲೇ ಆ ಶ್ವೇತ ಕುಷ್ಠ ನಿವಾರಣೆಯಾಯಿತು ಈಗ ಈ ಮಗನು ಧಾರ್ವಾಡದ ಕರ್ಣಾಟಕ ಕಾಲೇಜಿನಲ್ಲಿ ಕಲಿಯುತ್ತಿದಾನೆ.

ಸಾಯಿಬಾಬಾರವರ ಚರಿತ್ರೆಯನ್ನು ಇಂಗ್ಲೀಷಿನಲ್ಲಿ ಬರೆದ ಕಾರಣ ಅನೇಕ ಜನರು ಭಕ್ತರಾಗಿದ್ದಾರೆ. ಸಿರಡಿಯು (Ahmadnagar Dt.) ದೊಡ್ಡ ಯಾತ್ರಾಸ್ಥಳವಾಗಿದೆ. ಪೆನುಗೊಂಡೆಯ ಸಬ್ ರಿಜಿಸ್ಟ್ರಾರರು ಬಾಬಾರವರ ಊಧಿಯನ್ನು ಕೊಡುತ್ತಾ, ಅನೇಕ ರೋಗಗಳನ್ನು ನಿವಾರಿಸುತ್ತಿರುವರೆಂದು ಪ್ರಸಿದ್ಧಿಯಾಗಿದೆ. ಆಗಾಗ ವರ್ತಮಾನ ಪತ್ರಗಳಲ್ಲಿ ಬಾಬಾರವರ ಸಂಬಂಧ ಲೇಖನಗಳು ಬರುತ್ತಲಿವೆ. ವೈದಿಕ ಶ್ರದ್ಧೆಯುಳ್ಳವರು ಇದು ಯಾವ ಬಗೆಯ ಸಿದ್ಧಿಯೆಂದು ಶಂಕಿಸುತ್ತಿದ್ದಾರೆ. ಬಾಬಾರವರು ಜನ್ಮತಃ ಬ್ರಾಹ್ಮಣರಾದರೂ ಮುಸಲ್ಮಾನ ಫಕೀರನಲ್ಲಿ ಬೆಳೆದವರೆನ್ನುತ್ತಾರೆ. ಬಾಬಾರವರ ಉಪದೇಶದಲ್ಲಿ ವರ್ಣಾಶ್ರಮಧರ್ಮವಿಲ್ಲವೆನ್ನುತ್ತಾರೆ. ಮತ್ತೆ ಕೆಲವರು ಅವರದು ಅದ್ವೈತ ಮಾರ್ಗವೆನ್ನುತ್ತಾರೆ. ಏನೇ ಇರಲಿ, ಹೇಗೇ ಹೇಳಲಿ, ಅತಿಮಾನುಷ ಮಹಿಮೆಗಳು ವಿಜ್ಞಾನವನ್ನು ಹಿಮ್ಮೆಟ್ಟಿಸಿವೆ. ವೈಜ್ಞಾನಿಕರು ಅರ್ಥವಾಗದ ಸಮಸ್ಯೆಯಾಗಿದೆಯೆನ್ನುತ್ತಾರೆ. ಕುತ್ತಿಗೆಗೆ ಬಂದರೆ ವಿಜ್ಞಾನವಿನ್ನೂ ಬಾಲ್ಯದೆಶೆಯಲ್ಲಿದೆಯೆನ್ನುತ್ತಾರೆ.

ಪ್ರಕೃತ ನಮ್ಮ ರಾಘವೇಂದ್ರರಾಗಲಿ, ಧೀರೇಂದ್ರರಾಗಲಿ ಕಾಲದ ಕಡೆತದಲ್ಲಿ ಸಿಕ್ಕಿದ ಸಾಣೆ ಹಿಡಿದ ವಜ್ರದಂತಿದ್ದಾರೆ. ಮುನ್ನೂರು ವರ್ಷಗಳಿಂದ ಲಕ್ಷಾಂತರ ಜನರಲ್ಲಿ ಅತಿಮಾನುಷ ಮಹಿಮೆ ತೋರಿಸಿದವರು ರಾಘವೇಂದ್ರರಾದರೆ, ನೂರೈವತ್ತು ವರ್ಷಗಳಷ್ಟು ಕಾಲದಿಂದ ಅತಿಮಾನುಷ ಮಹಿಮೆ ತೋರುತ್ತಿರುವ ಧೀರರು ಧೀರೇಂದ್ರರಾಗಿದಾರೆ. ವರ್ಣಾಶ್ರಮಧರ್ಮ ಪರಿಪಾಲಕರಾಗಿದ್ದಾರೆ. ಮಹಾಶಾಸ್ತ್ರವೇತ್ತರೆಂದು ಪ್ರಖ್ಯಾತರಾಗಿದ್ದಾರೆ. ಅನೇಕ ಗ್ರಂಥಕರ್ತರುಗಳಾಗಿ ಶಾಸನಮಾಡುವ ಮಹರ್ಷಿಗಳ ಪಙ್ಕ್ತಿಯಲ್ಲಿ ಪೂಜ್ಯರಾಗಿದ್ದಾರೆ. ಈ ಮಹನೀಯರ ಸಿದ್ಧಿಗಳನ್ನು ರಾಜಸ ತಾಮಸ ಸಿದ್ಧಿಗಳೆಂದು ಶಂಕಿಸಲು ಯಾರಿಗೂ ಸಾಧ್ಯವಿಲ್ಲ.

ಲೋಪವಿರುವುದೇನಿದ್ದರೂ ಮುನ್ನೂರು ವರ್ಷಗಳಿಂದ ರಾಘವೇಂದ್ರರ ದಿನಚರಿಯನ್ನು ಯಾರೂ ಬರೆದಿಡಲಿಲ್ಲ. ನೂರೈವತ್ತು ವರ್ಷಗಳಿಂದ ಧೀರೇಂದ್ರರ ದಿನಚರಿಯನ್ನು ಯಾರೂ ಬರೆದಿಡಲಿಲ್ಲ. ಇಂಗ್ಲೀಷಿನಲ್ಲಿ ಮೊದಲೇ ಛಾಪಿಸಲಿಲ್ಲ. ಅದರ ಪ್ರಯತ್ನ ನಡೆದೂ ಇಲ್ಲ, ನಡೆಯಬೇಕಾಗಿಯೂ ಇಲ್ಲ. ಮಧ್ಯಾಹ್ನದ ಸೂರ್ಯನನ್ನು ತೋರಿಸಲು ಕರದೀಪಬೇಕಿಲ್ಲ.

ಕೆಲವರು ಅತಿಮಾನುಷ ಮಹಿಮೆಗಳಿಂದೇನು? ಜನರಿಗೆ ಬೇಕಾದದ್ದು ಅವರ ಜ್ಞಾನ, ಅವರ ಗ್ರಂಥ, ಎಂದು ಅನ್ನುತ್ತಾರೆ. ಈ ಮಾತು ನೂರಕ್ಕೆ ನೂರರಷ್ಟು ಸತ್ಯ. ಆದರೆ ಪ್ರಪಂಚದಲ್ಲಿ ಎಲ್ಲರೂ ವಿದ್ವಾಂಸರಾಗಿರಲು ಸಾಧ್ಯವಿಲ್ಲ. ವಿದ್ವಾಂಸರು ಹೇಳುವ ನಿಶ್ಚಿತಾರ್ಥವನ್ನು ನಂಬಿದವರಿಗೆ ಹೆಚ್ಚುವಿದ್ಯೆ ಬೇಕಿಲ್ಲ. ನಂಬದವರು ಎಷ್ಟು ವಿದ್ಯೆ ಕಲಿತರೂ ಅವರಿಗೇ ಫಲವಿಲ್ಲ. ವಿದ್ಯೆಯೂ ಹೆಚ್ಚಿ ಚರ್ಚೆಯೂ ಹೆಚ್ಚಿ ಕಡೆಗೆ ನಿಲ್ಲುವುದು ಸಂಶಯವೇ ಆದರೆ ಆವನ ಗತಿ "ಸಂಶಯಾತ್ಮಾವಿನಶ್ಯತಿ" ಯೇ!

ತಮ್ಮ ಅಂತಿಮ ಕಾಲದಲ್ಲಿ ಧೀರೇಂದ್ರರು ರಿತ್ತಿಯಲ್ಲೇ ವಾಸವಾಗಿದ್ದರು. ಸಂಸ್ಥಾನಾಧಿಪತ್ಯವಿಲ್ಲದಿದ್ದರೂ ಶಿಷ್ಯಸಂಪತ್ತಿಗೆ ಕಡಿಮೆಯಿರಲಿಲ್ಲ. ಬೃಂದಾವನಸ್ಥರಾದ ಏಳು ವರ್ಷಗಳ ನಂತರ ನಮ್ಮನ್ನು ವರದಾ ತೀರದಲ್ಲೇ ಬೃಂದಾವನದಲ್ಲಿ ಪ್ರತಿಷ್ಠಿಸಬೇಕೆಂದು ಅವರು ಭಕ್ತರಾಗಿದ್ದ ಶಿಷ್ಯರಿಗೆ ಸ್ವಪ್ನದಲ್ಲಿ ಸೂಚನೆಯಿತ್ತರು. ಶಿಷ್ಯರು ಈಗ ಬೃಂದಾವನವಿರುವ ಸ್ಥಳದಲ್ಲಿ ಸಕಲ ಸಿದ್ಧತೆಗಳನ್ನೂ ಮಾಡಿದರು. ಮೊದಲು ಊರೊಳಗೆ ಬೃಂದಾವನ ಮಾಡಿದ್ದ ಸ್ಥಳವನ್ನು ಶೋಧಿಸಿದರು. ಸಂಪುಟ ಶಿಲೆಯನ್ನು ಮೇಲಕ್ಕೆತ್ತಿದೊಡನೆಯೇ ಸ್ವಾಮಿಗಳ ದಿವ್ಯದೇಹದ ದರ್ಶನವಾಯಿತು. ಕೊರಳಲ್ಲಿ ಹಾಕಿದ ತುಲಸೀಮಾಲೆ ಬಾಡಿರಲಿಲ್ಲ. ತಲೆಗೆ ಕಟ್ಟಿದ್ದ ಶಾಠಿಯು ಕಟ್ಟಿದಂತೆ ಹಾಗೆಯೇ ಶೋಭಿಸುತ್ತಿತ್ತು. ಫಾಲದಲ್ಲಿ ಹಚ್ಚಿದ್ದ ಗಂಧಾಕ್ಷತೆಗಳು ಆಗ ಹಚ್ಚಿದಂತಿದ್ದವು. ಯಥಾವಿಧಿಯಾಗಿ ಸ್ವಾಮಿಗಳ ದೇಹವನ್ನು ಈಗಿರುವ ಬೃಂದಾವನದಲ್ಲಿಟ್ಟು ಭಕ್ತರು ತಮ್ಮ ಭಕ್ತಿಯನ್ನು ಪ್ರದರ್ಶಿಸಿದರು.*

---

*ಈ ಮಾತನ್ನು ರಾಜಗೋಪಾಲಾಚಾರ್ಯರೆಂಬ ಉದ್ದಾಮ ಕನ್ನಡ ಕವಿಗಳು ಒಂದು ಹಾಡಾಗಿ ಹಾಡಿದ್ದಾರೆ.

ಅಂದಿನಿಂದ ಧೀರೇಂದ್ರರ ಸನ್ನಿಧಿಯಲ್ಲಿ ಸೇವೆಗಳು ನಡೆಯುತ್ತಲಿವೆ. ಪ್ರತಿ ಮಹಾಸಮಾರಾಧನೆಯ ಕಾಲದಲ್ಲೂ ಅಂದರೆ ಫಾಲ್ಗುಣ ಶುದ್ಧ ತ್ರಯೋದಶೀ ದಿನದಲ್ಲೂ ಸಾವಿರಾರು ಭಕ್ತರುಗಳು ಬಂದು ಸೇರುತ್ತಾರೆ. ಶ್ರೀಮಠದ ಅಧಿಕಾರಿಗಳು ಬಂದು ರಾಘವೇಂದ್ರರ ಆರಾಧನೆಯಷ್ಟೇ ವಿಜೃಂಭಣೆಯಿಂದ ಮೂರು ದಿವಸ ಸೇವೆಯನ್ನು ನೆರವೇರಿಸುತ್ತಾರೆ.

## ಧೀರೇಂದ್ರಾಷ್ಟಕ

ಉಕ್ತಿಪ್ರಕ್ರಮಣೇ ಗುರೋರ್ವಿಜಯತೇ ಯುಕ್ತಿಶ್ಚಯಸ್ಯ ಪ್ರಭೋ
ರ್ಭಕ್ತಿಃ ಶ್ರೀಮತಿ ಭೂಮಿಜಾಪರಿವೃಢೇ ಮುಕ್ತಿಪ್ರದಾಯಿನ್ಯಹೋ
ಶಕ್ತಿಶ್ಚಾಸ್ಯತುಲಾ ಸದಾಪ್ರವಚನೇ ಸಕ್ತಿಶ್ಚದೀನೇದಯಾ
ವ್ಯಕ್ತಿರ್ಧೀರಜನೇಂದ್ರತೇ ಗುಣಗಣಾನ್ವಕ್ತುಂ ಸ್ಫುಟಂಕೋಭುವಿ ||೧||
ಸ್ಥಾಯನ್ನ್ಯಾಯನಯೇ ಕಣಾದ ಮುನಯೇ ವಿದ್ವೇಷಿವಿದ್ವಜ್ಜಯೇ
ತೂರ್ಣಂ ಪೂರ್ಣಧಿಯೇ ಪುನಸ್ಸನಕಯೇ ಸನ್ಯಾಸಿನಾಂಸಂಚಯೇ
ಚಾತುರ್ಯಾತಿಶಯೇ ಕಲಾಸುಗುರಯೇ ಧೈರ್ಯೋಚ್ಚಯೇ ಮೇರಯೇ
ಶ್ರೀ ಧೀರೇಂದ್ರಯತೀಂದ್ರ ದಾನವಿಷಯೇ ತೇದ್ಯಾಪಿಕಲ್ಪದ್ರುಯೇ ||೨||
ಶ್ರೀಲಃ ಶ್ರೀಪತಿವತ್ಸರೋರುಹಜವದ್ವಾಣೀವಿಲಾಸಾಸ್ಪದಃ
ಶಂಭುರ್ವಾವೃಷಸಂಭವಃ ಸವಿತೃವತ್ಸಚ್ಚಕ್ರವಾಕಪ್ರಿಯಃ
ದೇವೇಂದ್ರಶ್ಚ ಸುಧಾರ್ಥದೋಹಿಮುಗುವದ್ಧ್ಯೇಯಃ ಕಲಾನಾಂನಿಧಿಃ
ಶ್ರೀ ಧೀರೇಂದ್ರಯತೀಶ್ವರೋಮಮ ಗುರುರ್ದದ್ಯಾದಭೀಷ್ಟಂ ಸದಾ ||೩||
ಸಂಸ್ಥಾನಾಧಿಪತಿ ರ್ಯತೀಂದ್ರ ಭುವನೇಂದ್ರಾರ್ಯಸ್ಸಮಂಸಜ್ಜನೈಃ
ಯಸ್ಮಾತ್ಸಮ್ಯಗಧೀತವಾನ್ದಶಮತೇಃ ಶಾಸ್ತ್ರೋಕ್ತ ತತ್ವಂಪರಂ
ಕಿಂಬ್ರೂಮೋನ್ಯಜನಾಃ ಸುದರ್ಶನಮಹಾಚಾರ್ಯಾಃ ಪ್ರವರ್ಯಾಸ್ಸತಾಂ
ಶ್ರೀ ಧೀರೇಂದ್ರಯತೀಶ್ವರೋಮಮ ಗುರುರ್ದದ್ಯಾದಭೀಷ್ಟಂ ಸದಾ ||೪||
ಸಪ್ತತ್ರಿಂಶತಿ ಭೂರಬೋಧರಚಿತಗ್ರಂಥೇಜಯಾರ್ಯೋದಿತೇ
ಪದ್ಧತ್ಯಾದಿನಿಬಂಧನೇ ವರಸುಧಾತತ್ವ ಪ್ರಕಾಶಾದಿಕೇ
ಏತತ್ತತ್ವಮಿದಂ ಸುಬೋಧಮಿಹದುರ್ಬೋಧಂವ್ಯನಕ್ತೀವಯೋ
ವ್ಯಾಖ್ಯಾನಂ ಪ್ರಕಟೀಕರೋತಿ ಸುಮತಿಂಧೀರೇಂದ್ರತೀರ್ಥಂಭಜೇ ||೫||

ಯಸ್ಯೋಪನ್ಯಸನಂಚನಾತಿ ಜವನಂ ನಾತಿತ್ವರಂ ಸತ್ವರಂ
ಸಾಂದ್ರಂನಸ್ಖಲನಂ ಸ್ವಪಕ್ಷಸುಪರಿಷ್ಕಾರ ಪ್ರಕಾರಕ್ಷಮಂ
ದಕ್ಷಂ ಮಂಕ್ಷುವಿಪಕ್ಷಕಕ್ಷದಲನೇ ವಿದ್ವದ್ವಿಕಕ್ಷಂ ಮುಹುಃ
ಶ್ರೀ ಧೀರೇಂದ್ರಯತೀಶ್ವರೋ ಮಮುಗುರುರ್ದದ್ಯಾದಭೀಷ್ಟಂ ಸದಾ ||೬||
ಯಾವಚ್ಛ್ರಾವಕಲೋಕ ಸಂಶಯಹರಂ ತತ್ವಾರ್ಥ ಸಂಬೋಧಕಂ
ಯದ್ವ್ಯಾಖ್ಯಾನಮಹೋದ್ಯಘೋತ್ತರಯುತಂ ಸತ್ಸಂಪ್ರದಾಯಾನ್ವಿತಂ
ಲೋಡ್ಯಂತೇಭುವಿಕೇನಿಶಮ್ಯವಿಬುಧಾಃ ಸರ್ವಂ ಮಹಾಮಂಡಲೇ
ಶ್ರೀ ಧೀರೇಂದ್ರಯತೀಶ್ವರೋಮಮ ಗುರುರ್ದದ್ಯಾದಭೀಷ್ಟಂ ಸದಾ ||೭||
ಗಂಗಾತೀರ್ಥ ಮುಖಾಗ್ರತೀರ್ಥ ಗಮನಂ ತನ್ಮಜ್ಜನಂ ಸಜ್ಜನೈಃ
ವೇದವ್ಯಾಸಸಮುಲ್ಲಸದ್ರಘುಪತೇಃ ಕುರ್ವನ್ಸಪರ್ಯಾಂಮುಹುಃ
ಸಾತಾರಾಪುನಯಾದಿರಾಜ ನಗರೇ ತದ್ರಾಜಕೈಸ್ಸೇವಿತಃ
ಶ್ರೀ ಧೀರೇಂದ್ರಯತೀಶ್ವರೋ ಮಮುಗುರುರ್ದದ್ಯಾದಭೀಷ್ಟಂ ಸದಾ ||೮||

ಧರಣೀಮಂಡಲೇ ಖ್ಯಾತಂ ಧೈರ್ಯಾದಿಗುಣ ಬೃಂಹಿತಂ
ಧಿಕ್ಕೃತಾಶೇಷವಾದೀಭಂ ಧೀರಸಿಂಹಗುರುಂಭಜೇ ||೧||

ಧೀರೇಂದ್ರರಲ್ಲಿ ಸೇವೆಮಾಡುವ ಭಕ್ತರ ಅನುಕೂಲಕ್ಕಾಗಿ ಈ ಅಷ್ಟಕವನ್ನಿಲ್ಲಿ ಕೊಡಲಾಗಿದೆ.

## ಶ್ರೀಮಠವು ನಂಜನಗೂಡಿಗೆ ಬಂದದ್ದು

ಇತ್ತೀಚಿನ ಕಾಲದಲ್ಲಿ ಸುಜನೇಂದ್ರರೂ ಸುಬೋಧೇಂದ್ರರೂ ರಾಘವೇಂದ್ರ ಮಠದ ಕೀರ್ತಿಯನ್ನು ಉಜ್ವಲವಾಗುವಂತೆ ಬೆಳಗಿಸಿ ಮೈಸೂರು ಸೀಮೆಯ ನಂಜನಗೂಡಿನಲ್ಲಿ ಬಂದು ನೆಲೆಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರು ಕ್ರಿ. ೧೮೧೧ರಲ್ಲಿ ಮೈಸೂರು ರಾಜ್ಯಭಾರ ವಹಿಸುವುದಕ್ಕೆ ತತ್ಪೂರ್ವದಲ್ಲಿ ಟಿಪ್ಪೂ ಸುಲ್ತಾನನ ಕಾಲದಿಂದ ರಾಘವೇಂದ್ರ ಮಠಕ್ಕೆ ಸಲ್ಲುತ್ತಿದ್ದ ಆನೆಯ ಮೇಲಣ ನಗಾರಿ, ಹಗಲು ದೀವಟಿಗೆಗಳ ಮರ್ಯಾದೆಗಳು ತಪ್ಪಿದ್ದಕಾರಣ, ಆಗಿದ್ದ ಪೀಠಸ್ಥ ಯತಿಗಳು ಮಂತ್ರಾಲಯವನ್ನು ಬಿಟ್ಟು ದೇಶ ಸಂಚಾರಕ್ಕೇ ಹೊರಟಿರಲಿಲ್ಲ. ವೈದಿಕ ಸಂಸ್ಥಾನ ಮರ್ಯಾದೆಗೆ ತಕ್ಕಂತೆ ಕಟ್ಟಿದ್ದ ಆನೆ ಕುದುರೆಗಳ ಮತ್ತು ಇತರ ಸಿಬ್ಬಂದಿಗಳ ಪರಿವಾರ

ವನ್ನು ಕಟ್ಟಿಕೊಂಡು ಸಂಸ್ಥಾನ ಪಾಲನೆಮಾಡುವುದು ಬಹಳ ಶ್ರಮಸಾಧ್ಯ ವಾಯಿತು. ಸಂಸ್ಥಾನವ ಆರ್ಥಿಕ ಸ್ಥಿತಿಯು ಬಹಳ ಕ್ಷೀಣದಶೆಗೆ ಬಂದಿತು. ಮೂಲರಾಮದೇವರನ್ನು ಬಾಳೆಯೆಲೆಯ ಪೀಠದ ಮೇಲೆ ಕೂಡಿಸಿ ಪೂಜಿಸ ಬೇಕಾಗುವುದೋ ಎಂಬಷ್ಟು ದಾರಿದ್ರ್ಯ ಪ್ರಾಪ್ತವಾಯಿತು.

ಆ ಕಾಲದಲ್ಲಿ ಮುಮ್ಮಡಿಯವರ ಸನ್ನಿಧಿಯಲ್ಲಿ ವೆಂಕಟಸುಬ್ಬಯ್ಯನವ ರೆಂಬ ವೈಣಿಕರು ರಾಜಾನುಗ್ರಹಕ್ಕೆ ಪಾತ್ರರಾಗಿದ್ದರು. ಪ್ರಭುಗಳು ಯಾವುದೋ ಸಂದರ್ಭದಲ್ಲಿ ನಮ್ಮ ಸಂಸ್ಥಾನದಲ್ಲಿ ಎಲ್ಲಾ ಮತಗಳಿಗೂ ಮಠ ಗಳಿಗೂ ಸರಿಯಾಗಿ ಸನ್ಮಾನ ನಡೆಯುತ್ತಿದೆ ; ಭರತ ಖಂಡದ ಮುಖ್ಯ ಕ್ಷೇತ್ರ ಗಳಲ್ಲೆಲ್ಲಾ ನಮ್ಮ ಸೇವೆಗಳನ್ನೇರ್ಪಡಿಸಿದ್ದೇವೆ; ಯಾರನ್ನೂ ನಾವು ನೋಯಿ ಸುವವರಲ್ಲ; ಎಂಬುದಾಗಿ ಅಪ್ಪಣೆಕೊಡಿಸಿದರು. ವೆಂಕಟಸುಬ್ಬಯ್ಯನವರು ಎಲ್ಲಾ ಮತಕ್ಕೂ ಇದೆ, ಎಲ್ಲಾ ಮಠಕ್ಕೂ ಇದೆ, ನನ್ನ ಮಠಕ್ಕೆ ಮಾತ್ರ ಇಲ್ಲ; ಎಂದರು. ಇಷ್ಟು ಮಾತಿನಿಂದಲೇ ನಡೆಯಬೇಕಾದ ವಿಮರ್ಶೆಗಳು ನಡೆದವು. ಮೈಸೂರು ಸೀಮೆಯಲ್ಲಿ ಮಾತ್ರವಲ್ಲದೆ ಇತರ ಪ್ರಾಂತಗಳಲ್ಲೂ ಬಿರುದಾವಳಿಯ ಪ್ರತಿಬಂಧಕ ತಪ್ಪಿತು. ಮಂತ್ರಾಲಯದಲ್ಲಿದ್ದ ಸುಬೋಧೇಂದ್ರಸ್ವಾಮಿ ಗಳಿಗೆ ಮೈಸೂರಿಗೆ ದಯಮಾಡಬೇಕೆಂಬ ಮಹಾರಾಜರ ಬಿನ್ನವತ್ತಳೆಯೂ ತಲ್ಪಿತು.

ಆ ಸಮಯದಲ್ಲಿ ಪ್ರತಿಬಂಧಕ ತಪ್ಪಿತೆಂಬ ಸಂತೋಷದಿಂದ ಸುಬೋಧೇಂದ್ರರು ಮಂತ್ರಾಲಯದಲ್ಲೇ ಬಿರುದಾವಳಿಗಳನ್ನು ಹಿಡಿಸಿಕೊಂಡು ಪುರಪ್ರದಕ್ಷಿಣೆ ಮಾಡಿದರು. ಅನೇಕ ಪಂಡಿತರುಗಳು ಸಮಯಾನುಸಾರಿ ಯಾದ ಕವಿತೆಗಳನ್ನು ಮಾಡಿ ಸ್ವಾಮಿಗಳಿಗೊಪ್ಪಿಸಿ ಸಂಭಾವನೆ ಪಡೆದರು. ರಾಘವೇಂದ್ರಸ್ವಾಮಿಗಳ ಪೂರ್ಣಾನುಗ್ರಹಕ್ಕೆ ಪಾತ್ರರಾಗಿ ಪ್ರೇಮದಾಸರೆಂಪೇ ಕರೆಸಿಕೊಳ್ಳುತ್ತಿದ್ದ ಅಭಿನವ ಜನಾರ್ದನವಿಠಲಾಂಕಿತದಾಸವರ್ಯರು:—

**ಬಂದನೋಡೆ ಇಂದು ಸುಬೋ**
**ಧೇಂದ್ರಮುನಿಪ । ಗುರು । ಬಂದ ॥ಪ॥**
**ದಂಧಂಧಣಕೆಂಬ ಭೇರಿ । ಮುಂದೆ ಊದುವ ತುತೂರಿ**
**ಇಂದು ರಾಹುಕೇತುಗಳ । ಬಂಧಿಸಿ ಹೊಡಿಸುತ್ತಲಿ ೧**

**ಇಂದು ರವಿ ಎಡಬಲ । ನಂದದಿ ಬರುವ ತೆರ**
**ದ್ವಂದ್ವ ಹಗಲ್ದೀವಟಿಗೆಗ । ಳಿಂದ ಬಲು ಚೆಂದದಿಂದ ॥೨॥**
**ಸೃಷ್ಟಿಯೊಳು ತಮ್ಮ ದಯಾ ದೃಷ್ಟಿಪುಟ್ಟಿದರ ದು**
**ರುಷ್ಟವಂತರಿಗತಿ ಇಷ್ಟವ ಕೊಡುವ ಗುರು ॥೩॥**
**ಮುದ್ದು ಅಭಿನವ ಜನಾರ್ದನ ವಿಠಲ ಪದ**
**ಪದ್ಮ ಪಾದುಕ ಕಲ್ಪದೃವಮಾಶ್ರಯದಿಂದ ॥೪॥**

ಈ ಪದದ ಮೂರನೇ ನುಡಿಯನ್ನು ಸ್ವಾಮಿಗಳು ಲಾಲಿಸಿದರು. ದಾಸರೇ, ಅದೇನು ಹೇಳಿದಿರಿ ಎಂದು ಕೇಳಿದರು. ಪ್ರೇಮದಾಸರು ಆ ಮಾತು ಬಾಯಿನಿಂದ ಹೊರಟುಹೋಯಿತು, ಎಂದರು. ಅದರ ಭಾವವಿಷ್ಟೆ ! ಸಾಮಾನ್ಯವಾಗಿ ಮಠಾಧಿಪತಿಗಳು ವಿದ್ವಾಂಸರು ಕವಿತೆ ಮಾಡಿದರೆ ಅವರಿಗೆ ಸಂಭಾವನೆ ಕೊಡುವುದು ಮೊದಲಿನಿಂದ ಬಂದ ಸಂಪ್ರದಾಯ. ಮಠಗಳಲ್ಲಿ ವೈದಿಕ ಪಂಡಿತರಿಗೆ ಮರ್ಯಾದೆಮಾಡಿದಂತೆ ಹರಿದಾಸರಿಗೆ ಮಾಡುವುದಿಲ್ಲ. ದಾಸರು ವಿದ್ವಾಂಸರಲ್ಲವೆಂಬ ತಿಳುವಳಿಕೆಯೇ ಅದಕ್ಕೆ ಕಾರಣ. ಆದ್ದರಿಂದ ಪದದ ನುಡಿಯಂತೆ—"ಈ ಬ್ರಹ್ಮಸೃಷ್ಟಿಯಲ್ಲಿ ತಮ್ಮ ದಯಾದೃಷ್ಟಿ ಹುಟ್ಟಿದರೆ ಅದೃಷ್ಟವಂತರಾದ ಅಂದರೆ ಅನುಕೂಲಸ್ಥರಾದ ವೈದಿಕರಿಗೇ ಇಷ್ಟಾರ್ಥವನ್ನು ಕೊಡುವ ಗುರು" ಎಂದು ಅರ್ಥ. ಈ ಮಾತಿನ ಮರ್ಮವರಿತ ಸ್ವಾಮಿಗಳು ದಾಸರನ್ನು ಹತ್ತಿರ ಬನ್ನಿರೆಂದು ಕರೆದರು. ಕೊರಳಲ್ಲಿ ಧರಿಸಿದ್ದ ಸುವರ್ಣ ಖಚಿತ ತುಲಸೀ ಕಂಠಿಯನ್ನೇ ದಾಸರ ಕೊರಳಿಗೆ ಹಾಕಿದರು. ಅನಂತರ ದಾಸರು ಕಡೆಯ ನುಡಿಯನ್ನು ಹಾಡಿದರು. ಮಠವು ಆನಂದದ ಬೀಡಾಯಿತು.

ಮುಮ್ಮಡಿ ಕೃಷ್ಣರಾಜ ಪ್ರಭುಗಳ ಆಮಂತ್ರಣವನ್ನು ಗೌರವಿಸಿ ಸ್ವಾಮಿಗಳು ಅರಮನೆಯಿಂದ ಬಂದ ಬಿರುದಾವಳಿಗಳ ಸಹಿತ ಮೈಸೂರಿಗೆ ಪ್ರಯಾಣಮಾಡಿದರು. ನಗರದ ಬತೇರಿಯಿಂದ ಕುಶಾಲು ತೋಪುಗಳು ಹಾರಿದುವು. ಮಹಾ ಪ್ರಭುಗಳು ಗುರುಗಳಿಗೆ ಸ್ವಾಗತವಿತ್ತರು. ಪೂಜಾ ಕಾಲದಲ್ಲಿ ಸಕಲ ಪಂಡಿತರ ಸಮಾಗಮದಲ್ಲಿ ಪ್ರಭುಗಳು ಮೂಲರಾಮರೇಕೆ ಇಷ್ಟು ಬಡವಾಗಿದ್ದಾರೆಂದು ಪ್ರಶ್ನೆಮಾಡಿದರು. ಆಸ್ಥಾನ ಪಂಡಿತರು ರಾಮರಿಗೆ ವನವಾಸ ಪ್ರಾಪ್ತವಾಗಿದ್ದ ಕಾರಣ ಬಡವಾಗಿದ್ದಾರೆಂದು ಆಶು ಕವಿತೆಯಿಂದ ವರ್ಣಿಸಿದರು. ಸೀತಾವಿಯೋಗ ಕಾರಣವೆಂದು ಮತ್ತೊಬ್ಬರು

ಬಣ್ಣಿಸಿದರು. ಸ್ವಾಮಿಗಳಾದರೋ— "ಶ್ರೀರಾಮಾವತಾರಕ್ಕೆ ಕಾರಣವೇ ವನವಾಸಮಾಡಿ ದುಷ್ಟನಿಗ್ರಹಮಾಡಿ ಧರ್ಮಸ್ಥಾಪನೆಮಾಡಬೇಕೆಂದಿದ್ದುದರಿಂದ ರಾಮರು ಬಡವಾಗಲು ಕಾರಣವಿಲ್ಲ. ಸೀತಾದೇವಿಯು ನಿತ್ಯಾನಪಾಯಿನಿ ಯಾದ್ದರಿಂದ, ಸೀತಾವಿಯೋಗವೇ ಶ್ರೀರಾಮರಿಗೆ ಕೂಡುವುದಿಲ್ಲವಾದ್ದರಿಂದ, ಆದರಿಂದಲೂ ಬಡವಾಗಲು ಕಾರಣವಿಲ್ಲ. ಕೃಷ್ಣರಾಜಪ್ರಭು ಜನ್ಮಾಂತರದಲ್ಲಿ ಮಾಡಿದ ಪೂಜಾ ಪ್ರಭಾವಕ್ಕೆ ಈ ಜನ್ಮದಲ್ಲಿ ರಾಜ್ಯಪದವಿಯನ್ನು ಕೊಟ್ಟೆ, ಈಗ ಮಾಡಿದ ಪೂಜೆಗೆ ಮುಂದಿನ ಜನ್ಮದಲ್ಲಿ ಮತ್ಯಾವ ಪದವಿಯನ್ನು ಕೊಡಲಿ! ಎಂಬ ಯೋಚನೆ ಹುಟ್ಟಿ ನಮ್ಮ ಮೂಲರಾಮರು ಬಡವಾಗಿದ್ದಾರೆ" ಎಂಬದಾಗಿ ಅಪ್ಪಣೆ ಕೊಡಿಸಿದರು.

ಮಾತಿನ ಸ್ವಾರಸ್ಯ ಮಹಾ ಪ್ರಭುಗಳ ಮನಸ್ಸಿಗೆ ಬಂದಿತು. ಮಾರನೆಯ ದಿನದ ಪೂಜೆಗೆ ಅರಮನೆಯ ಬೊಕ್ಕಸದಿಂದ ಅನರ್ಘ್ಯ ಜವಾಹಿರುಗಳು ದೊರೆತು ರಾಮನು ಸರ್ವಾಂಗ ಪರಿಪುಷ್ಟನಾದನು. ಅನಂತರ ಶ್ರೀಮಠವು ನಂಜನಗೂಡಿನಲ್ಲೇ ಇರಬೇಕೆಂದು ಮಹಾರಾಜರ ಪ್ರಾರ್ಥನೆಯಾಯಿತು. ಮಠ ನಿರ್ಮಾಣವಾಯಿತು. ಅಂಬಳೆ ಮೊದಲಾದ ಆರು ಗ್ರಾಮಗಳ ಉಂಬಳಿಯಾಯಿತು. ತಿಂಗಳಿಗೆ ಒಂದು ಸಾವಿರ ರೂಪಾಯಿಗಳ ಮಾಸಾಶನವು ಏರ್ಪಟ್ಟಿತು.

ಸುಬೋಧೇಂದ್ರ ಸುಜನೇಂದ್ರಸ್ವಾಮಿಗಳ ಕಾಲದಲ್ಲಿ ಶ್ರೀಮಠವು ಪುನಃ ಸಂಪದ್ಭರಿತವಾಯಿತು. ಶ್ರೀರಾಘವೇಂದ್ರ ಮಠದ ಹೆಸರು ಸಹ ನಂಜನಗೂಡು ಮಠವೆಂದೇ ಪ್ರಸಿದ್ಧವಾಯಿತು. ಅಜೇಯರಾದ ಪಂಡಿತರುಗಳು ಮೈಸೂರು ಮಹಾರಾಜರ ಆಸ್ಥಾನಕ್ಕೆ ಬಂದರೆ ಅವರನ್ನು ನಂಜನಗೂಡಿಗೆ ಕಳುಹಿಸಿ ರೆಂದು ಮಹಾರಾಜರೇ ಹೇಳುವಷ್ಟು ಪ್ರಖ್ಯಾತವಾಯಿತು.

ಸುಜನೇಂದ್ರರ ನಂತರ ಸುಜ್ಞಾನೇಂದ್ರ, ಸುಧರ್ಮೇಂದ್ರ, ಸುಗುಣೇಂದ್ರ, ಸುಪ್ರಜ್ಞೇಂದ್ರ, ಸುಕೃತೀಂದ್ರರುಗಳು ಕ್ರಮವಾಗಿ ಪಟ್ಟಾಧಿಕಾರ ಮಾಡಿದರು. ಸುಕೃತೀಂದ್ರರಿಂದ ಆಶ್ರಮ ಸ್ವೀಕಾರ ಮಾಡಿದ ಸುಶೀಲೇಂದ್ರರು ಮಠದ ಆಡಳಿತವನ್ನು ಸುಧಾರಿಸಿ, ಮಂತ್ರಾಲಯದಲ್ಲಿ ಅನೇಕ ಜೀರ್ಣೋದ್ಧಾರ ಕಾರ್ಯಗಳನ್ನು ಮಾಡಿ, ಆರಾಧನೆಯ ಕಾಲದಲ್ಲಿ ದಕ್ಷಿಣ ದೇಶದ ಪ್ರಖ್ಯಾತ ದೇವಾಲಯಗಳಲ್ಲಿ ;ನಡೆಯುವಂತೆ ಉತ್ಸವಾದಿಗಳನ್ನು ಏರ್ಪಡಿಸಿದರು.

ವಿಶೇಷ ದೇಶಪರ್ಯಟನಮಾಡಿ ವಿದ್ವತ್ಸಭೆಗಳನ್ನೇರ್ಪಡಿಸಿ ವಿದ್ವಜ್ಜನರಿಗೆ ಬಹಳ ಆಶ್ರಯಕೊಟ್ಟ ಕಾರಣ ಇವರಿಗೆ ದೇಶದಲ್ಲಿ ಕೀರ್ತಿಯುಂಟಾಯಿತು. ಜನರು ಇವರನ್ನು ಅನ್ನದಾನಂಸ್ವಾಮಿ, ಸಭಾಸ್ವಾಮಿ, ಎಂಬುದಾಗಿ ಕೊಂಡಾಡಿದರು ಸುಶೀಲೇಂದ್ರರಾಗುತ್ತಲೇ ಸುವ್ರತೀಂದ್ರರು ಧರ್ಮಾಧಿಕಾರ ಮಾಡಿದರು. ಸುವ್ರತೀಂದ್ರರಿಂದ ಪಟ್ಟಾಭಿಷಿಕ್ತರಾಗಿ ಸಂಸ್ಥಾನಪಾಲನ ಮಾಡುತ್ತಿರುವವರೇ ಈಗಿರುವ ಶ್ರೀಮತ್ಸುಯಮೀಂದ್ರತೀರ್ಥ ಶ್ರೀಪಾದಂಗಳವರು.



# ೧೪. ಮಂತ್ರಾಲಯದಲ್ಲಿ ಮಹಾರಾಜರು.

ಮೈಸೂರು ಕರ್ಣಾಟಕ ರತ್ನ ಸಿಂಹಾಸನಾಧೀಶ್ವರರಾದ ಶ್ರೀ ಜಯ ಚಾಮರಾಜ ಒಡೆಯರವರು ಕಳೆದ ವಿಷು ಸಂ॥ ಫಾಲ್ಗುಣ ಶು. ೪. ಗುರು ವಾರ (೧೯–೨–೧೯೪೨) ಮಂತ್ರಾಲಯ ಯಾತ್ರೆಗೆ ದಯಮಾಡಿಸಿದ್ದರೆಂಬ ಸಂಗತಿ ಶ್ರೀಮಠದ ಇತಿಹಾಸದಲ್ಲಾಗಲಿ, ಅರಮನೆಯ ಇತಿಹಾಸದಲ್ಲಾಗಲಿ ಸುವರ್ಣಾಕ್ಷರಗಳಿಂದ ಬರೆದಿಡುವಷ್ಟು ಮಹತ್ವವುಳ್ಳದ್ದಾಗಿದೆ. ಮೈಸೂರು ರಾಜಸಂತತಿಯಲ್ಲಿ ಇದುವರಿಗೆ ಯಾವ ರಾಜರೂ ಮಂತ್ರಾಲಯಕ್ಕೆ ದಯ ಮಾಡಿಸಿರಲಿಲ್ಲ. ಅಂದ ಮಾತ್ರಕ್ಕೆ ಮೈಸೂರರಸರಿಗೆ ಮಂತ್ರಾಲಯಕ್ಷೇತ್ರ ಮಹಿಮೆ ವಿದಿತವಾಗಿರಲಿಲ್ಲವೆಂದಲ್ಲ.

ಶ್ರೀ ರಾಘವೇಂದ್ರ ಸ್ವಾಮಿಗಳವರು ಮೈಸೂರು ಸೀಮೆಗೆ ದಯಮಾಡಿ ಸಿದ್ದ ಕಾಲದಲ್ಲಿ, ಶಾಲೀವಾಹನ ೧೫೭೫ನೇ ಶೋಭನ ಕೃತು ಸಂವತ್ಸರದಲ್ಲಿ ಚಿಕ್ಕ ದೇವರಾಜ ಒಡೆಯರವರು ಶ್ರೀ ಮಠಕ್ಕೆ ಕೊಟ್ಟಿರುವ ದಾನಶಾಸನದಲ್ಲಿ ಕೆಳಕಂಡ ಪದ್ಯಗದ್ಯಗಳು ಉಲ್ಲಿಖಿತವಾಗಿದೆ.

ಸಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ
ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ ೧
ಅಗಜಾನನ ಪದ್ಮಾರ್ಕಂಗಜಾನನಮಹರ್ನಿಶಂ
ಅನೇಕದಂತಂ ಭಕ್ತಾನಾಮೇಕದಂತಮುಪಾಸ್ಮಹೆ ೨
ಹರೇರ್ಲೀಲಾವರಾಹಸ್ಯದಂಷ್ಟ್ರಾದಂಡಸ್ಸಪಾತುನಃ
ಹೇಮಾದ್ರಿಕಲಶಾಯತ್ರಧಾತ್ರೀಛತ್ರಶ್ರಿಯಂದದೌ ೩
ಶ್ರೀಶಾಲಿವಾಹನಶಕೇಶರನಾಗಬಾಣ
ಸೀತಾಂಶುಸಮ್ಮಿತಶರತ್ಸುಗತಾಸ್ವಮುಷ್ಮಿನ್
ವರ್ಷೇತುಶೋಭಕೃತಿಮಾಸಿ ಶುಚೌವಲಕ್ಷೇ
ಪಕ್ಷೇಥ ವೈಷ್ಣವ ತಿಥೌ ಅಮೃಂತಾಶುವಾರೇ ೪
ಶ್ರೀಮದ್ರಾಜಾಧಿರಾಜ ಶ್ರೀಭೂಪಾಲ ಪರಮೇಶ್ವರಃ
ಕಲ್ಯಾಣಚರಿತೋ ವೀರಪ್ರತಾಪ ಬಿರುದಾಂಕಿತಃ ೫

ಅರ್ಥಿಚಾತಕಸಂದೋಹ ಸಂತೋಷಕರತೋಯದಃ
ಪ್ರತ್ಯರ್ಥಿಪೃಥಿವೀಪಾಲವರೌಲಿಲಾಲಿತಶಾಸನಃ ೬
ತುರುಷ್ಕಶುಷ್ಕಗಹನದಹನೋದ್ಯದ್ದವಾನಲಃ ॥
ಚಂಡಬಾಹು ಬಲೋದ್ದಂಡ ಪಾಂಡ್ಯಖಂಡನ ಪಂಡಿತಃ ೭
ಚೋಳಕೇರಳ ನೇಪಾಳ ಭೂಪಾಲಕರಿಕೇಸರೀ
ಕೊಂಗವಂಗ ಕಳಿಂಗಾಂಗ ಭೂಭೃತ್ತಿಮಿರಭಾಸ್ಕರಃ ೮
ಬಿರುದೆಂತೆಂಬರಗಂಡಸ್ತರುಣೀಜನನವ್ಯಕುಸುಮಕೋದಂಡಃ
ರಾಜಕುಲಾಬ್ಧಿಶಶಾಂಕಃ ಶೂರೋಧರಣೀವರಾಹ ಬಿರುದಾಂಕಃ ೯
ಶ್ರೀನಾರಾಯಣಪಾದಪಂಕಜಯುಗೇ ವಿನ್ಯಸ್ತವಿಶ್ವಗ್ಭರಃ
ಶ್ರೀಮತ್ಪಶ್ಚಿಮರಂಗಧಾಮನಗರೀ ಸಿಂಹಾಸನಾಧೀಶ್ವರಃ ೧೦
ಪ್ರತ್ಯರ್ಥಿಕ್ಷಿತಿಪಾಲ ರತ್ನಮುಕುಟೀ ನಿರಾಜಿತಾಂಘ್ರಿಶ್ಚಿರಂ
ದೇವಬ್ರಾಹ್ಮಣರಕ್ಷಣಾಯ ಪೃಥಿವೀ ಸಾಮ್ರಾಜ್ಯದೀಕ್ಷಾಂ ವರ್ಹ ೧೧
ಆತ್ರೇಯಗೋತ್ರಸಂಜಾತಃ ಆಶ್ವಲಾಯನ ಸೂತ್ರವಾ೯
ಮುಕ್ಯಾಖೀ ಚಾಮರಾಜಸ್ಯ ಪೌತ್ರಃ ಸದ್ಗುಣವಾರಿಧೇಃ ೧೨
ದೇವರಾಯಸ್ಯ ತನಯೋ ದೇವರಾಜಮಹೀಪತಿಃ
ದೇಶೇತುಬಯನಾಡಾಖ್ಯೇ ನಿಜವಿಕ್ರಮಣಾರ್ಜಿತೇ ೧೩
ಹುರಾಹ್ವಯಂ ಮಹಾಗ್ರಾಮಂ ಉಪಜೀವ್ಯಾವತಿಷ್ಠತಃ
ಸರಗೂರಿತಿ ವಿಖ್ಯಾತ ಗ್ರಾಮಸ್ಯ ಸ್ಥಳಮಾಶ್ರಿತಂ ೧೪
ಗ್ರಾಮಂ ನಲ್ಲೂರು ನಾಮಾನಂ ತಟಾಕಾರಾಮ ಶೋಭಿತಂ
ಪ್ರತ್ಯಬ್ದಶತದೀನಾರದಾಯಿನಂ ಸಸ್ಯ ಸಂಪದಾ ೧೫
ಪ್ರತಿನಾಮ್ನಾ ದೇವರಾಜಪುರಮಪ್ರತಿಮಂಭುವಿ
ಶ್ರೀಮತ್ಪರಮಹಂಸ ಶ್ರೀಪರಿವ್ರಾಜಕ ಸದ್ಗುರೋಃ ೧೬
ಪದವಾಕ್ಯಪ್ರಮಾಣಾಬ್ಧಿ ಪಾರೀಣಸ್ಯ ಮಹಾತ್ಮನಃ
ಸರ್ವತಂತ್ರ ಸ್ವತಂತ್ರಸ್ಯ ಕಲ್ಯಾಣಗುಣಶಾಲಿನಃ ೧೭
ಶ್ರೀಮದ್ವೈಷ್ಣವ ಸಿದ್ಧಾಂತಸ್ಥಾಪನಾರ್ಯಸ್ಯಧೀಮತಃ ೮

೧॥ ಶ್ರೀರಾಮಚಂದ್ರದೇವ ಶ್ರೀಪಾದಾರಾಧನೋದ್ಯತಸ್ಯ ಸದಾ ವಿಜಯೀಂದ್ರ ತೀರ್ಥ ಪಾದಶ್ರೀಮತ್ಕರ ಕಮಲಜಾತಸ್ಯ, ಶ್ರೀಮತ್ಸುಧೀಂದ್ರತೀರ್ಥ

ಶ್ರೀಪಾದಸ್ವಾಮಿಸತ್ಕುಮಾರಸ್ಯ, ಶ್ರೀರಾಘವೇಂದ್ರತೀರ್ಥ ಶ್ರೀಪಾದಸ್ಯ ಸಂಯಮೀಂದ್ರಸ್ಯ ಅಸ್ಯಮಠಾಧಿಷ್ಠಿತ ದೇವಸ್ಯ ಶ್ರೀರಾಮ ಚಂದ್ರಸ್ಯ ಕೋಶಾಯ, ದೇವಪೂಜಾಬ್ರಾಹ್ಮಣಭುಕ್ತ್ಯಾದಿ ಸರ್ವಧರ್ಮಕೃತೇ ಮಹತ್ಯಸ್ಮಿನ್ಪುಣ್ಯ ಕಾಲೇ, ರಂಗೇಶಪದಸನ್ನಿಧೌ, ಶ್ರೀಮನ್ನಾರಾಯಣ ಪ್ರೀತ್ಯೈಪ್ರಾದಾದ್ಧಾರಾಪುರಸ್ಸರಂ ||

ಆದ್ದರಿಂದ ಶ್ರೀರಾಘವೇಂದ್ರಸ್ವಾಮಿಗಳವರು ಪಾರ್ಥಿವ ದೇಹದಿಂದ ಸಂಚಾರಮಾಡುತ್ತಿದ್ದ ಕಾಲದಲ್ಲೇ ಅವರನ್ನು ಶ್ರೀರಂಗಪಟ್ಟಣದ ಅರಮನೆ ಯಲ್ಲಿ ಸತ್ಕರಿಸಿ, ಧಾರಾದತ್ತವಾಗಿ ಗ್ರಾಮಭೂಮಿಗಳ ಮಾನ್ಯವಿತ್ತು, ಪುಣ್ಯ ಸಂಪಾದನೆ ಮಾಡಿದ ಪುಣ್ಯಪುರುಷರು ಮೈಸೂರು ರಾಜಮನೆತನದವರು.

ಮುಮ್ಮಡಿ ಕೃಷ್ಣರಾಜ ಒಡೆಯರವರು ಶ್ರೀರಾಘವೇಂದ್ರಸ್ವಾಮಿಗಳ ಪೂಜೆಯನ್ನು ಪ್ರಾರಂಭಿಸಿದವರಲ್ಲಿ ಮೊದಲನೆಯವರು. ಆ ಪುಣ್ಯಾತ್ಮರಿದ್ದ ಆ ಕಾಲದಲ್ಲಿ ಇಭರಾಮಪುರದ ಕೃಷ್ಣಾಚಾರ್ಯರೆಂಬ ಮಹಾತ್ಮರಿದ್ದರು. ಇಭರಾಮಪುರವು ಮಂತ್ರಾಲಯಕ್ಕೆ ನಾಲ್ಕು ಮೈಲಿ ದೂರದಲ್ಲಿರುವ ಹೈದರಾಬಾದಿಗೆ ಸೇರಿದ ಒಂದು ಗ್ರಾಮ. ಇಬ್ರಾಹಿಂಪುರವೆಂಬುವುದು ಉಚ್ಚಾರದೋಷದಿಂದ ಇಭರಾಮಪುರವಾಯಿತು. ಕೃಷ್ಣಾಚಾರ್ಯರನ್ನು 'ಅಪ್ಪಾವರು ಅಪ್ಪಾವರು' ಎಂದು ಕರೆಯುತ್ತಿದ್ದರು ಮಹಾತ್ಮಾ ಗಾಂಧಿ ಯವರಿಗೆ ಬಾಪೂಜಿ ಎಂದಂತೆ, ಕವೀಂದ್ರ ರವೀಂದ್ರರನ್ನು ಗುರುದೇವ್ ಎಂದಂತೆ ಗೌರವದ ಕುರುಹು. ಅಪ್ಪಾವರಿಗೆ ಪರಿಮಳಾಚಾರ್ಯರೆಂದು ಮತ್ತೊಂದು ಹೆಸರು. ಅವರಿದ್ದ ಕಡೆ ಕಸ್ತೂರೀ ವಾಸನೆಯಾಗುತ್ತಿದ್ದುದ ರಿಂದ ಆಚಾರ್ಯರು ಪರಿಮಳಾಚಾರ್ಯರೂ ಆದರು ಕಸ್ತೂರಿಯನ್ನು ಹತ್ತಿರ ದಲ್ಲಿಟ್ಟುಕೊಂಡು ಸುವಾಸನೆಯನ್ನು ಬೀರುತ್ತಿದ್ದರೆಂದಲ್ಲ. ಸ್ವಾಭಾವಿಕವಾಗಿ ಅವರು ನೀರಿನ ಪಾತ್ರೆಯಲ್ಲಿ ಕೈಯಿಟ್ಟರೆ ನೀರೆಲ್ಲಾ ಸುವಾಸಿತವಾಗುತ್ತಿತ್ತು. ಮಂತ್ರಾಲಯದಲ್ಲಿ ತುಂಗಭದ್ರೆಯಲ್ಲಿ ಸ್ನಾನಮಾಡಿದರೆ, ಅಲ್ಲಿಂದ ಎಷ್ಟೋ ದೂರದಲ್ಲಿರುವ ನಿವೃತ್ತಿಸಂಗಮದಲ್ಲಿ ಸ್ನಾನಮಾಡುತ್ತಿದ್ದ ಶಾಸ್ತ್ರಿ ಜನರು ಅಪ್ಪಾವರು ತುಂಗಭದ್ರೆಯಲ್ಲಿ ಸ್ನಾನಮಾಡುತ್ತಿದ್ದಾರೆಂದು ಗುರ್ತಿಸಿ ವಂದನೆ ಮಾಡುತ್ತಿದ್ದರು. ಅವರು ದಿವಂಗತರಾದಮೇಲೂ ಅವರ ಆರಾಧನೆ

ಮಾಡುವ ಭಕ್ತರ ಮನೆಯಲ್ಲಿ, ಆ ದಿವಸ ನಿವೇದನ ಕಾಲದಲ್ಲಿ ಮನೆಯೆಲ್ಲಾ ಕಸ್ತೂರಿಯ ವಾಸನೆಯಾಗುವುದು ಸಹ ಅನೇಕರ ಅನುಭವದ ಮಾತು. ದೇವರನ್ನು ಕಂಡ ಮನುಷ್ಯರು ಅವರಾದ್ದರಿಂದ ಅಂಥವರಿಗದು ಸಹಜ ಸ್ವಭಾವವಾಗಿರಬೇಕೆಂದು, ಜನರು ಭಕ್ತಿ ಮಾಡುತ್ತಿದ್ದರು. ಅಪ್ಪಾವರು ಎಷ್ಟೋ ಅತಿಮಾನುಷ ಮಹಿಮೆಗಳನ್ನು ತೋರಿಸಿದ ಚರಿತ್ರೆ ಪ್ರತ್ಯೇಕವಾಗಿದೆ. ಅಪ್ಪಾವರು ಮೈಸೂರಿಗೆ ಬಂದಾಗ ಮುಮ್ಮಡಿ ಕೃಷ್ಣರಾಜ ಒಡೆಯರು ಅವರನ್ನು ಬಹು ಗೌರವದಿಂದ ಅರಮನೆಗೆ ಬರಮಾಡಿಕೊಂಡರು. ಕಸ್ತೂರಿಯ ಪರಿಮಳ ಬರುವುದನ್ನು ನೋಡಿದ ಕೆಲಜನರಿಗೆ ಆಚಾರ್ಯರು ಸೊಂಟದಲ್ಲಿ ಕಸ್ತೂರಿ ತುಂಬಿದ ಕರಡಿಗೆಯನ್ನಿಟ್ಟುಕೊಂಡಿರಬೇಕೆಂಬ ಸಂಶಯವಾಯಿತು. ಆ ಜನರ ಸಂದೇಹವಾರ್ತೆಯು ಮಹಾರಾಜರ ಕಿವಿಗೂ ಬಿದ್ದಿತು. ಚಾಣಾಕ್ಷರಾದ ಪ್ರಭುಗಳು ಅರಮನೆಯಲ್ಲೇ ಆಚಾರ್ಯರಿಗೆ ಅಭ್ಯಂಗಸ್ನಾನವಾಗಲೆಂದರು. ಎಣ್ಣೆಯೊತ್ತಲು ಜಟ್ಟಿಗಳು ಬಂದರು. ಅಂಗಮರ್ದನವಾಯಿತು. ಸಣ್ಣ ಪಂಚೆಯನ್ನುಟ್ಟುಕೊಂಡಿದ್ದ ಆಚಾರ್ಯರನ್ನು, ಪರಿಜನರು ಮೈಸೂರು ಪದ್ಧತಿಯಂತೆ ಕೌಪಿನಧಾರಣೆ ಮಾಡಬೇಕೆಂದು ಕೇಳಿಕೊಂಡರು. ಆಚಾರ್ಯರು, ಆಗಲಿ ಎಂದು ಕೌಪಿನವಂತರಾದರು. ನೋಡಿದಿರೋ ! ನಮ್ಮ ಬಳಿ ಯಾವ ಕರಡಿಗೆಯೂ ಇಲ್ಲವೆಂದರು. ಪರಿಜನರು ಆಚಾರ್ಯರ ಕ್ಷಮೆ ಬೇಡಿದರು. ಸ್ನಾನಮಾಡಿ ಹರಿದ ನೀರೆಲ್ಲಾ ಕಸ್ತೂರಿವಾಸನೆಯುಳ್ಳದ್ದಾಯಿತು. ಅರಮನೆಯ ತುಂಬ ಕಸ್ತೂರೀ ಪರಿಮಳ ವ್ಯಾಪಿಸಿತು ಆಚಾರ್ಯರು ಪೂಜೆ ಮಾಡಿ ಪ್ರಭುಗಳಿಗೆ ತೀರ್ಥವನ್ನು ಕೊಟ್ಟರು. ನಿಮ್ಮ ಜನರ ಸಂಶಯ ನಿವಾರಣೆಯಾಯಿತೆಂದರು. ಪ್ರಭುಗಳು ಇಂಗಿತವರಿತು ಅವರ ತಪ್ಪಿಗೆ ಕ್ಷಮೆಬೇಡಲು ನಾನಿರುವೆನೆಂದರು. ಎಲ್ಲಾ ಮತಗಳ, ಎಲ್ಲಾ ಮಠಗಳ, ಎಲ್ಲಾ ಕ್ಷೇತ್ರಗಳ ದೇವರಿಗೂ ಮೈಸೂರರಸರ ಸೇವೆ ಸಲ್ಲುತ್ತಿದೆಯೆಂದು ಸಮೀಪದಲ್ಲಿದ್ದ ಅಧಿಕಾರಿಗಳು ಆಚಾರ್ಯರಿಗೆ ನಿವೇದಿಸಿದರು. ಎಲ್ಲವೂ ಸರಿ, ನಮ್ಮ ರಾಯರ ಪೂಜಾ ಮಾಡುತ್ತಿರುವಿರೋ ಎಂದು ಆಚಾರ್ಯರು ಕೇಳಿದರು. ಪ್ರಭುಗಳು ರಾಯರ ಬೃಂದಾವನವನ್ನು ಅನುಗ್ರಹಿಸಿದರೆ ಸೇವಿಸುವೆನೆಂದು ನುಡಿದರು.

ಆಗ ಆಚಾರ್ಯರು ಸುವರ್ಣ ನಿರ್ಮಿತವಾಗಿದ್ದು, ತಾವು ನಿತ್ಯ ಪೂಜೆಯಲ್ಲಿಟ್ಟುಕೊಂಡಿದ್ದ ರಾಘವೇಂದ್ರ ಸ್ವಾಮಿಗಳ ಬೃಂದಾವನವನ್ನೇ ಮಹಾರಾಜರವರಿಗೆ ಅನುಗ್ರಹಿಸಿದರು. ಪ್ರತಿನಿತ್ಯ ರಾಯರ ಪೂಜೆಗೆ ತಕ್ಕ ನೌಕರರ ಏರ್ಪಾಡಾಯಿತು. ನೈವೇದ್ಯ ಹಸ್ತೋದಕಗಳು ನಡೆದವು. ದಿವಾನ ರಂಗಾಚಾರ್ಯರು ಮೈಸೂರರಮನೆಯ ಕಂಟ್ರೋಲರಾಗಿದ್ದಾಗ ರಾಯರ ಬೃಂದಾವನ ಪೂಜೆ ಅರಮನೆಯಲ್ಲಾಗುತ್ತಿದ್ದುದನ್ನು ತಪ್ಪಿಸಿ, ಮಹಾರಾಜರ ಛತ್ರದಲ್ಲಿ ನಡೆಯುವಂತೆ ಏರ್ಪಡಿಸಿದರು. ಅದಕ್ಕಾಗಿ ಏರ್ಪಟ್ಟಿದ್ದ ತಸ್ತೀಕುಗಳು ಕ್ರಮವಾಗಿ ಕಡಮೆಯಾಗುತ್ತಾ ಬಂದವು. ಈಗಲೂ ವರ್ಷಕ್ಕೊಮ್ಮೆ ಶ್ರಾವಣ ಬಹುಳ ಬಿದಿಗೆಯ ದಿನ ಅರಮನೆಯ ಖರ್ಚಿನಿಂದ ರಾಘವೇಂದ್ರ ಸ್ವಾಮಿಗಳ ಆರಾಧನೆ ನಡೆಯುತ್ತಿದೆ. ಇಪ್ಪತ್ತು ನಾಲ್ಕು ಜನ ವೈಷ್ಣವ ವೈದಿಕ ಬ್ರಾಹ್ಮಣರಿಗೆ ಅಲಂಕಾರ ಮರ್ಯಾದೆ ದೊರೆಯುತ್ತಿದೆ.

ಶ್ರೀಮನ್ಮಹಾರಾಜರವರು ತಮ್ಮ ಮಾತೋಶ್ರೀಯವರಿಂದಲೂ ಸಹೋದರಿಯವರಿಂದಲೂ ಒಡಗೂಡಿ ಮಂತ್ರಾಲಯಕ್ಕೆ ದಯಮಾಡಿಸಿದಾಗ, ಶ್ರೀಮತ್ಸುಯಮೀಂದ್ರ ತೀರ್ಥ ಶ್ರೀಪಾದಂಗಳವರು ರಾಜಯೋಗ್ಯವಾದ ಸ್ವಾಗತಸಲಕರಣೆಗಳನ್ನೇರ್ಪಡಿಸಿದ್ದರು. ಶ್ರೀಮಠದ ಸರ್ವಾಧಿಕಾರಿಗಳು ಮಹಾ ಪ್ರಭುಗಳವರಿಗೆ ಮಾನಪತ್ರವನ್ನು ದಿವ್ಯರಜತ ಕರಂಡದಲ್ಲಿಟ್ಟು ಸಮರ್ಪಿಸಿದರು. ಪ್ರಭುಗಳವರು ಗುರುಗಳ ದರ್ಶನಮಾಡಿ, ದೇವರ ದರ್ಶನ ಮಾಡಿ ಆನಂದದಿಂದ ತೀರ್ಥ ಪ್ರಸಾದಗಳನ್ನು ಸ್ವೀಕರಿಸಿ ಬಿಜಯಂಗೈದರು.

ಗ್ರಂಥ ಸಮಾರೋಪಣೆಯಲ್ಲಿ ನಮ್ಮ ಜನರು, ನಮ್ಮ ದೇಶ, ನಮ್ಮ ಧರ್ಮಗಳನ್ನು ಕುರಿತು ಒಂದೆರಡು ಮಾತಾಡಬೇಕಾಗುತ್ತದೆ. ವ್ಯಾಪಕ ದೃಷ್ಟಿಯಿಂದ ನಮ್ಮ ಜನರೆಂದರೆ ಇಡೀ ಹಿಂದೂ ಸಮಾಜ. ನಮ್ಮ ದೇಶವೆಂದರೆ ಸಮಗ್ರ ಭರತಖಂಡ. ನಮ್ಮ ಧರ್ಮವೆಂದರೆ ಸನಾತನ ವೈದಿಕ ಧರ್ಮ. ಇಷ್ಟು ದೊಡ್ಡ ಜನಾಂಗದಲ್ಲಿ, ಇಷ್ಟು ದೊಡ್ಡ ಭರತಖಂಡದಲ್ಲಿ, ಇಷ್ಟು ದೊಡ್ಡ ಸನಾತನ ವೈದಿಕ ಸಂಸ್ಕೃತಿಯಲ್ಲಿ, ಇರುವುದೇನಿದ್ದರೂ ರಾಜ ಗುರು ದೈವ ಎಂಬ ಈ ಮೂರು ಪದಾರ್ಥಗಳು. ದೇಹಗೇಹ ರಕ್ಷಣೆಗೆ ರಾಜನಿರಬೇಕು. ಬುದ್ಧಿ ಮನಸ್ಸುಗಳ ರಕ್ಷಣೆಗೆ ಗುರುವಿರಬೇಕು. ಉಭಯರ ಸಹಾಯದಿಂದ ನಮ್ಮ ಧರ್ಮಕ್ಕೆ ಪ್ರಭುವಾದ ಚ್ಯುತಿರಹಿತನಾದ ಅಚ್ಯುತನ ಪದ ಪ್ರಾಪ್ತಿಯಾಗ

ಬೇಕು. ಇದೇ ನಮ್ಮ ಜನರ ಹೃದಯದ ನಾಡಿಯನ್ನು ಮೀಟಿದರೆ ಹೊರಡುವ ನಾದ.

ನಮ್ಮ ಕನ್ನಡನಾಡು ಭರತಖಂಡಕ್ಕೆ ಹೆಮ್ಮೆಯ ನಾಡು. ನಮ್ಮ ಪ್ರಭು ಆದರ್ಶಪ್ರಭು. ನಮ್ಮ ಗುರುಗಳು ಅಪೇಕ್ಷಿತ ಪ್ರದಾತರು. ಆದ್ದರಿಂದ ನಮ್ಮ ರಾಜರ ಶ್ರೇಯಃ ಪ್ರಾರ್ಥನೆಮಾಡೋಣ! ನಮ್ಮ ಗುರುವಿಗೆ ಶಿರಬಾಗಿ ನಮಿಸೋಣ! ನಮ್ಮ ಸ್ವಾಮಿಯನ್ನು ಪಡೆಯೋಣ!

ಈ ದೃಷ್ಟಿಯಿಂದ ಶ್ರೀಮನ್ಮಹಾರಾಜರವರಿಗೆ ಶ್ರೀಮತ್ಸುಯಮೀಂದ್ರ ತೀರ್ಥ ಶ್ರೀ ಪಾದಂಗಳವರು ಮಂಗಳಾ ಶಾಸನ ಮಾಡಿರುವ ನವರತ್ನ ಮಾಲಿಕೆಯನ್ನು ಪಠಿಸೋಣ!

ಶ್ರೀ.

॥ ಶ್ರೀಮನ್ಮೂಲರಾಮೋ ವಿಜಯತೇ ॥

**ಶ್ರೀಮತ್ಪರಮಹಂಸೇತ್ಯಾದ್ಯನೇಕ ಬಿರುದಾಂಕಿತ**

**ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮುಖ್ಯಸಂಸ್ಥಾನಾಧೀಶ**

**ಶ್ರೀಮದ್ರಾಘವೇಂದ್ರ ಗುರುಸಾರ್ವಭೌಮರವರ ಪೀಠಾಧಿಷ್ಠಿತ**

**ಶ್ರೀಮತ್ಸುಯಮೀಂದ್ರತೀರ್ಥ ಶ್ರೀಮಚ್ಚರಣೈಃ**

**ಮಹಿಶೂರು ಶ್ರೀಮತ್ಕರ್ಣಾಟಕ ರತ್ನಸಿಂಹಾಸನಾಧೀಶ್ವರ**

**ಶ್ರೀಮದ್ರಾಜಾಧಿರಾಜೇತ್ಯಾದ್ಯನೇಕ ಬಿರುದಾಲಂಕೃತ**

**ಶ್ರೀಮಜ್ಜಯಚಾಮರಾಜೇಂದ್ರ**

**ಸಾರ್ವಭೌಮಾಯ ಅನುಗೃಹೀತಾ**

# ಶ್ರೀಮಜ್ಜಯಚಾಮರಾಜೇಂದ್ರ ನವರತ್ನ ಮಾಲಿಕಾ.

**ಶ್ರೀ**ಮಾನ್ ಬ್ರಹ್ಮಾರ್ಚಿತಾಂಘ್ರೀ ರಘುಮುಖನೃಪತಿ ಪ್ರಾರ್ಚ್ಯಪಾದಾಂಬುಜ **ಶ್ರೀ**
ರಾ**ಮ** ಕ್ಷ್ಮಾಪಾಲಕೇನಾಪ್ಯುಪಚರಿತತಯಾ ಮೂಲರಾಮೇತಿ **ಮ**ಹ್ಯಾ
ಧೀಮ**ಜ್ಜ** ನ್ಮಿಸ್ತುತೋಽಯೋಽನಿಲತನುವಿನತೋಽರಕ್ಷಕಃ ಸ**ಜ್ಜ**ನಾನಾಂ
ಭೂಯಃಶ್ರೇ**ಯ**ಸ್ಸದಿಶ್ಯಾದ್ಧರಿರಿಹ ನೃಪ! ತೇ ರಾಜಸೇ **ಯ**ತ್ಕಟಾಕ್ಷಾತ್ ೧
ಮಧ್ವಾಭ್ಯರ್ಚಿತ **ಚಾ**ರುದಿಗ್ವಿಜಯವಾನ್ ವೇದಪ್ರ **ಚಾ**ರಪ್ರಿಯಃ
ಶ್ರೀರಾಮೋಜಯರಾ**ಮ** ಮೂರ್ತಿರಪಿಸಾ ನಿಷ್ಠಾ **ಮ** ಚಿತ್ತೇತವ ।
ಟೀಕಾಚಾರ್ಯ ಸುಧೀಕ **ರಾ** ರ್ಚಿತ ಪದಾ **ರಾ**ಜನ್! ನೃಸಿಂಹಾದಯೋ
ರಾಜಂತಾಂ ಯತಏವ ಸರ್ವ **ಜ** ಗತಾಂ **ಜ**ನ್ಮಾದಿ ಸಂಪದ್ಯತೇ ೨
ವಿಶ್ವಂಸತ್ಯಮಿದಂಹರಿಃಪರತರೋಽವಿ**ಪ್ರ** **ಪ್ರ**ಮೇಯಃ ಸದಾ
ಭಿನ್ನೈರ್ಜೀವಗಣೈಃ ಹರೇರನುಚರೈಃ **ಭೋ**ಜ್ಯಂ ಸ್ವಕರ್ಮಾಖಿಲಂ ।
ನಿರ್ದೋಷಃ ಸುಖಸಂವಿದಾತ್ಮಕ ತನುಃ ವೇದೈಕ ವೇದ್ಯೋ ಹರಿಃ
ಮುಕ್ತಿಃ ನೈಜಸುಖಾನುಭೂತಿರಮಲಸ್ನೇಹೈಃ ದೃಢೈಃ ಪ್ರಾಪ್ಯತೇ ೩

ಇತ್ಯಾದ್ಯೈರ್ಬಸ್ತ್ರೈಃ ನಿಗಮಕಥಿತೈಃ ತತ್ವರತ್ನೈರ್ಜನಾನಾಂ
ಹೃತ್ವಾಮೋಹಂ ಹರಿಪದದೃಶಂ ಯೋ ದದಾತ್ಯಾದರೇಣ |
ಸ ಪ್ರಾಣೇಶೋ ದಿಶತು ಹನುಮದ್ಭೀಮ ಮಧ್ವಾವತಾರೋ
ಭಕ್ತಿಂ, ಶಕ್ತಿಂ, ಶುಭತಮಮತಿಂ ತೇ ಚಿರಂಜೀವಿತಾಂ ಚ
ಯಃ ಪ್ರಹ್ಲಾದೋ ಮಹಾತ್ಮಾ ನರಹರಿಭಜನೇ ತೃಪ್ತಿಮಪ್ರಾಪ್ಯ ಭೂಯೋ
ಭೂಮೌ ಬಾಹ್ಲೀಕನಾಮಾ ಯದುಪತಿಮಸಿತಂ ಕೃಷ್ಣಮೂರ್ತಿಂ ಸಿಷೇವೇ |
ಸತ್ಸಿದ್ಧಾಂತ ಪ್ರಸಿದ್ಧ್ಯೈ ಭುವಿಪುನರಭವದ್ವ್ಯಾಸರಾಜೋ ಯತೀಂದ್ರೋ
ಯೋಽಸೌ ಶ್ರೀರಾಘವೇಂದ್ರೋವಿಲಸತಿ ಗುರುರಾಣ್ಮಾಲರಾಮಂ ಸಮರ್ಚನ್
ಸೀತಾಜಾನೇಶ್ಚರಣ ನಲಿನಸ್ಪರ್ಶಪೂತಾತ್ಮ ಖಂಡೈಃ
ಶ್ರೀಪ್ರಹ್ಲಾದ ಪ್ರಭುಕೃತ ಮಹಾವೇದಿದೇಶೈಶ್ಚ ಪುಣ್ಯೈಃ |
ಗಂಗಾತುಲ್ಯಪ್ರಚುರ ಮಹಿಮೋತ್ತುಂಗ ತುಂಗಾತರಂಗೈಃ
ಕ್ಷೇತ್ರಂ "**ಮನ್ತ್ರಾಲಯ**" ಇತಿ ಭುವಿ ಖ್ಯಾತಮೇತದ್ವಿಭಾತಿ
ಕುರ್ಯಾತ್ತ್ವಾಂ ನರಸಿಂಹಪುತ್ರ ! ನೃಹರಿರ್ಭಕ್ತಂ ನೃಸಿಂಹಂ ಸದಾ
ಶ್ರೀರಾಮೋ ನಿಜರಾಜ್ಯವತ್ತವ ಮಹೀಂ ಪುಷ್ಣಾತು ಭೋಯಾದವ !
ದದ್ಯಾತ್ತೇ ಶುಭಸಂತತಿಂ ಯದುಪತಿಸ್ಸಂತಾನಕೃಷ್ಣೋಽನಿಶಂ
ವಿಷ್ಣುರ್ವ್ಯಾಸವಪುರ್ದಿಶೇಚ್ಚ ಸುದೃಶಂ ಶ್ರೀರಾಘವೇಂದ್ರಾರ್ಚಿತಃ
ಪೃಥ್ವೀಂ ಶ್ರೀಜಯಚಾಮರಾಜ ನೃಪರಾಟ್ ! ಶ್ರೀಚಾಮರಾಜಃ ಪುರಾ
ಕೃಷ್ಣಾಖ್ಯಶ್ಚ ನರಾಧಿಪಸ್ತ್ವಪಿತಾ ಕಂಠೀರವಾಖ್ಯೋಯಥಾ |
ಪ್ರೀತ್ಯಾಽರಕ್ಷದಿಮಾಂ ತಥಾಜನಹಿತಂ ತ್ವಾಂ ಶಾಸತಂ ಸಾನುಗಂ
ಕ್ಷೇಮಸ್ಥೈರ್ಯ ಸುಖಾದಿದೌ ಸಮವತಾಂ ಶ್ರೀರಾಘವೇಂದ್ರೌ ಸದಾ
ಯತ್ತ್ವಂ ಶ್ರೀ ಜಯಚಾಮರಾಜವಸುಧಾನಾಥೇಂದ್ರ ! ವಿಜ್ಞಾನವಾನ್
ನಾಸ್ತ್ಯನ್ಯೈರನುಶಾಸನೀಯಮತ ಏವಾಶಾಸ್ಮಹೇ ಸಾಂಪ್ರತಂ
ದೇವಾನ್ಪೂಜಯ, ತೋಷಯದ್ವಿಜಗಣಾನಾನಂದಯಸ್ವಾನ್ ಜನಾನ್
ಜಿತ್ವಾವೈರಿಗಣಾಶ್ಚಿರಂ ಭುವಮಿಮಾಂ ಧರ್ಮೇಣ ಪಾಹಿ ಪ್ರಭೋ

**ಚಲ್ವಾಂಬಾ ಗರ್ಭಸಂಭೂತೋ ರತ್ನಸಿಂಹಾಸನಸ್ಥಿತಃ**
**ನೃಸಿಂಹರಾಜತನಯೋಜೀಯಾತ್ ಶ್ರೀಜಯಚಾಮರಾಟ್**
**ಶು ಭ ಂ ಭೂ ಯಾ ತ್ .**



E 399- ಬೆಂಗಳೂರು ಸುಬೋಧ ವಿದ್ಯುನ್‌ಮುದ್ರಣಾಲಯದಲ್ಲಿ
ಬಿ. ರಂಗನಾಥರಾಯರು ಮುದ್ರಿಸಿದರು.